# ಲೇಖಕರಿಗೆ ಸೂಚನೆ

೧. ಲೇಖನಗಳು ಕರ್ನಾಟಕ ಅಧ್ಯಯನಗಳಿಗೆ ಸಂಬಂಧಿಸಿರಬೇಕು ಅಥವಾ ಕರ್ನಾಟಕ ಅಧ್ಯಯನಗಳಿಗೆ ಹೊಸ ಆಯಾಮ ನೀಡಬಲ್ಲ ತಾತ್ವಿಕ ಚಿಂತನೆಗಳನ್ನು ಒಳಗೊಂಡಿರಬೇಕು.

೨. ಅನುವಾದಿತ ಲೇಖನವಾಗಿದ್ದಲ್ಲಿ ಸಂಬಂಧಪಟ್ಟವರ ಅನುಮತಿಯನ್ನು ಪಡೆದಿರಬೇಕು.

೩. ಲೇಖನಗಳು ಒಳಗಿನ ಅಭಿಪ್ರಾಯಗಳು ಆಯಾ ಲೇಖಕರವು. ವಿಶ್ವವಿದ್ಯಾಲಯದವಲ್ಲ.

೪. ಲೇಖನಗಳನ್ನು ಪತ್ರಿಕೆಯ ಆಶಯಕ್ಕೆ ಅನುಗುಣವಾಗಿ ಆಯ್ದು ಪ್ರಕಟಿಸಲಾಗುವುದು. ಅಪ್ರಕಟಿತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಆದ್ದರಿಂದ ಲೇಖಕರು ಲೇಖನದ ನಕಲನ್ನು ಇಟ್ಟುಕೊಳ್ಳುವುದು.

೫. ಲೇಖನ ಕಳಿಸುವ ವಿಳಾಸ :

ಸಂಪಾದಕ
'ಕನ್ನಡ ಅಧ್ಯಯನ' ಪತ್ರಿಕೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

| | | |
|---|---|---|
| ಚಂದಾ ವಿವರ | : | ಬಿಡಿ ಪ್ರತಿ ಬೆಲೆ: ರೂ. ೨೫.೦೦<br>ವಾರ್ಷಿಕ ಚಂದಾ: ರೂ. ೧೦೦.೦೦<br>ಐದು ವರ್ಷಗಳಿಗೆ: ರೂ ೪೦೦.೦೦ |
| ಚಂದಾ ಕಳಿಸುವ ವಿಳಾಸ | : | ವಿತ್ತಾಧಿಕಾರಿಗಳು, ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ<br>ವಿದ್ಯಾರಣ್ಯ - ೫೮೩ ೨೭೬ |

ಡಿ.ಡಿ. ಕಳಿಸುವವರು ಮೇಲಿನ ವಿಳಾಸಕ್ಕೆ ಹೊಸಪೇಟೆಯ ಯಾವುದೇ ರಾಷ್ಟ್ರೀಕೃತ ಬ್ಯಾಂಕಿಗೆ ಪಾವತಿಯಾಗುವಂತೆ ಕಳಿಸಿ.

# ಕನ್ನಡ ಅಧ್ಯಯನ

## ಮಳೆ ಸಂಚಿಕೆ

ಸಂಪಾದಕ

ರಹಮತ್ ತರೀಕೆರೆ



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**KANNADA ADHYAYANA** (Quarterly) Vol. IX-1

Edited by
**Dr. Rahamath Tarikere**

Published by
**Publication Division,** Prasaranga,
Kannada University, Hampi
Vidyaranya - 583 221

Pages : xvi + 168

ತ್ರೈಮಾಸಿಕ ಪತ್ರಿಕೆ, ಸಂಪುಟ ೯, ಸಂಚಿಕೆ ೧
(ಜುಲೈ, ಆಗಸ್ಟ್, ಸೆಪ್ಟೆಂಬರ್-೨೦೦೨)



ಸಲಹಾ ಸಂಪಾದಕರು : ಡಾ. ಎಚ್ ಜೆ ಲಕ್ಕಪ್ಪಗೌಡ

ಬಿಡಿ ಪ್ರತಿ ಬೆಲೆ : ರೂ. ೨೫.೦೦
ವಾರ್ಷಿಕ ವಾರ್ಷಿಕ ಚಂದಾ : ರೂ. ೧೦೦.೦೦
ಪಂಚ ವಾರ್ಷಿಕ ಚಂದಾ : ರೂ. ೪೦೦.೦೦

ಮುಖಪುಟ : ಕೆ ಕೆ ಮಕಾಳಿ

**ಪ್ರಕಾಶನ**
ಪ್ರಕಟಣ ವಿಭಾಗ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಅಕ್ಷರ ಸಂಯೋಜನೆ**
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಮುದ್ರಣ**
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
ಬೆಂಗಳೂರು. ಫೋನ್ : 6682802

# ಪರಿವಿಡಿ

ಸೊಲ್ಲು

# ಸಾಹಿತ್ಯ ಮತ್ತು ಜಾಗತೀಕರಣದ ಆತಂಕ

● ಸಂಪಾದಕ

## ಆತಂಕದ ಅಲೆಗಳು

**ಕ**ಳೆದ ಕೆಲವು ವರುಷಗಳಿಂದ ಕನ್ನಡ ಸಾಹಿತ್ಯ ಲೋಕದಲ್ಲಿ ನಡೆಯುತ್ತಿರುವ ಚರ್ಚೆಗಳನ್ನು ಗಮನಿಸಿದರೆ, ಒಂದು ಸಂಗತಿ ಎದ್ದು ಕಾಣುತ್ತದೆ. ಅದೆಂದರೆ, ಜಾಗತೀಕರಣ ಕುರಿತು ಆತಂಕ. ಸ್ಪಷ್ಟವಾಗಿ ಅರಿವಾಗಿರದ ಯಾವುದೋ ಒಂದರ ಆಕ್ರಮಣಕ್ಕೆ ಸಿಲುಕಿ, ಏನೆಂದು ವಿವರಿಸಲಾಗದ ಯಾವುದೋ ಚೈತನ್ಯವನ್ನು ಕಳೆದುಕೊಳ್ಳುವ ವೇದನೆಯ ಆತಂಕವಿದು. ಜಾಗತೀಕರಣದ ಪ್ರಸ್ತಾಪ ಮಾಡದ ಲೇಖಕರೇ ಇಲ್ಲವೇನೋ ಎಂಬಷ್ಟು ಈ ಆತಂಕದ ಜ್ವರ ಸಾಹಿತ್ಯಲೋಕ ವನ್ನು ಕಾಡುತ್ತಿದೆ. ಇದನ್ನು ಲೇಖಕರ ಬರೆಹಗಳಲ್ಲಿ ನೋಡಬಹುದು. ಅವರ ಖಾಸಗಿ ಚರ್ಚೆಗಳಲ್ಲಿ ಕೇಳಿಸಿಕೊಳ್ಳಬಹುದು. 'ಜಾಗತೀಕರಣ ಸಂದರ್ಭದಲ್ಲಿ ದೇಶೀ ಸಂಸ್ಕೃತಿ' 'ಜಾಗತೀಕರಣ ಮತ್ತು ಜಾನಪದ' 'ಜಾಗತೀಕರಣ ಮತ್ತು ಕನ್ನಡದ ಭವಿಷ್ಯ' - ಮುಂತಾದ ಹೆಸರಿನಲ್ಲಿ ನಡೆಯುತ್ತಿರುವ ವಿಚಾರಸಂಕಿರಣಗಳಲ್ಲಿ ಅನುಭವಿಸಬಹುದು. ಈ ಸಲದ ತುಮಕೂರು ಕನ್ನಡ ಸಾಹಿತ್ಯ ಸಮ್ಮೇಳನವಂತೂ ಜಾಗತೀಕರಣದ ಚರ್ಚೆಯಿಂದ ಅನುರಣಿ ಸುತ್ತಿತ್ತು. ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕಳೆದ ಜೂನ್ ತಿಂಗಳಲ್ಲಿ, ಕನ್ನಡದ ಪ್ರಮುಖ ಲೇಖಕರನ್ನೆಲ್ಲ ಸೇರಿಸಿ 'ಜಾಗತೀಕರಣ : ಒಂದು ಸಮಗ್ರ ಮಂಥನ' ಎಂಬ ವಿಷಯ ವಿಟ್ಟು ದೊಡ್ಡದೊಂದು ವಿಚಾರ ಸಂಕಿರಣವನ್ನೆ ಶಿವಮೊಗ್ಗದಲ್ಲಿ ಏರ್ಪಡಿಸಿತ್ತು. ಇವೆಲ್ಲ ಜಾಗತೀಕರಣ ವನ್ನು ಕನ್ನಡ ಲೇಖಕರು ತುರ್ತಾದ ಸಮಸ್ಯೆ ಎಂದು ಭಾವಿಸಿರುವ ಮನಸ್ಥಿತಿಯ ಸಂಕೇತ ವೆನ್ನಬಹುದು.

ಪ್ರಶ್ನೆ ಇರುವುದು, ಆತಂಕದ ಪ್ರಾಮಾಣಿಕತೆಯ ಬಗ್ಗೆಯಲ್ಲ. ಆತಂಕ ವ್ಯಕ್ತವಾಗುತ್ತಿರುವ ತಾತ್ವಿಕ ಸ್ವರೂಪದ ಮೇಲೆ. ಯಾಕೆಂದರೆ ಈ ಆತಂಕವು ಭಾಷೆ ಸಾಹಿತ್ಯ 'ಸಂಸ್ಕೃತಿ' ಗಳನ್ನು ರಕ್ಷಿಸಿಕೊಳ್ಳಬೇಕು ಎಂಬ ನೆಲೆಯಲ್ಲಿಯೇ ಹೆಚ್ಚಾಗಿ ವ್ಯಕ್ತವಾಗುತ್ತಿದೆ : 'ಜಾಗತೀಕರಣವು ಸಾಂಸ್ಕೃತಿಕ ವೈವಿಧ್ಯವುಳ್ಳ ನಮ್ಮ ದೇಶದ ಮೇಲೆ ಆಕ್ರಮಣಕಾರಿಯಾಗಿ ಬಂದಿದೆ. ಇದು ನಮ್ಮ ದೇಶೀಯ ಸಂಸ್ಕೃತಿಗಳನ್ನು ನಾಶಮಾಡುತ್ತದೆ. ಈ ಸಂಸ್ಕೃತಿಯ ಮುಖ್ಯ ಅಂಶಗಳಾಗಿರುವ ಭಾಷೆ ಸಾಹಿತ್ಯ ಸಂಗೀತ ಕಲೆ ಧರ್ಮ ಆಚರಣೆಗಳು ಇದರ ಪದಾಘಾತಕ್ಕೆ ಸಿಲುಕುತ್ತಿವೆ.

ನಾವು ನಮ್ಮ ಹಳ್ಳಿ, ದೇಶೀಭಾಷೆ, ದೇವರು ಆಚರಣೆ ಮುಂತಾದುವುಗಳಿಗೆ ಗಟ್ಟಿಯಾಗಿ ಅಂಟಿಕೊಳ್ಳುವ ಮೂಲಕವೇ ಇದನ್ನು ಎದುರಿಸಲು ಸಾಧ್ಯ'- ಇದು ಈ ಆತಂಕಗಳ ಸಾರಾಂಶ ವಾಗಿದೆ.

**ಸಹಜ ಆದರೆ ,..**

ಈ ಆತಂಕಗಳೇನೋ ಸಹಜವಾಗಿವೆ. ಆದರೆ ಅದಕ್ಕೆ ನೀಡಲಾಗುತ್ತಿರುವ ಕಾರಣ ಮತ್ತು ಅವನ್ನು ಎದುರಿಸಲು ಹುಡುಕುತ್ತಿರುವ ಹಾದಿಗಳು ಮಾತ್ರ ಚರ್ಚಾಸ್ಪದವಾಗಿವೆ. ಇದಕ್ಕೆ, ಆತಂಕ ಗೈಯುತ್ತಿರುವವರ ತಾತ್ವಿಕ ಗೊಂದಲವೋ, ಈ ಹೊತ್ತಿನ ರಾಜಕೀಯ ಆರ್ಥಿಕ ಪರಿಸ್ಥಿತಿಗಳು ಅರ್ಥ ಮಾಡಿಕೊಳ್ಳುವುದಕ್ಕೆ ಕಷ್ಟವಾಗಿರುವಷ್ಟು ಸಂಕೀರ್ಣವಾಗಿರುವುದೋ, ಸಮಸ್ಯೆಯನ್ನು ಸಮಾಜ ಇತರೆ ಕ್ಷೇತ್ರಗಳಿಂದ ಹೊರತುಪಡಿಸಿ ಸಾಹಿತ್ಯ ಸಂಸ್ಕೃತಿಗಳ ರಕ್ಷಣೆಯ ಕಾಳಜಿಯಲ್ಲಿ ಭಾವುಕವಾಗಿ ಗ್ರಹಿಸುತ್ತಿರುವುದೋ ಗೊತ್ತಾಗುತ್ತಿಲ್ಲ. ಈ ಮೂರು ಕಾರಣಗಳೂ ನಿಜವಿರಬಹುದು. ಇಲ್ಲಿನ ಕೊನೆಯ ಕಾರಣವು ಮಾತ್ರ ಇಡೀ ಆತಂಕಕ್ಕೆ ತೀವ್ರವಾದ ತಾತ್ವಿಕ ಮಿತಿಯನ್ನು ಒದಗಿಸಿಬಿಟ್ಟಿದೆ. ಯಾಕೆಂದರೆ ಕನ್ನಡದಲ್ಲಿ 'ಸಂಸ್ಕೃತಿ' ಎಂದರೆ, ಈಗಲೂ ಸಾಹಿತ್ಯ ಸಂಗೀತ ಧರ್ಮ ಭಾಷೆ ಕಲೆ ಕೇಂದ್ರಿತವಾದ ಗ್ರಹಿಕೆಯೇ ಆಳ್ವಿಕೆ ಮಾಡುತ್ತಿದೆ. ಇದು ಜಾಗತೀಕರಣ ಎಂಬ ರಾಜಕೀಯ ಅರ್ಥಶಾಸ್ತ್ರದ ವಿದ್ಯಮಾನವನ್ನು ಸೀಮಿತ ನೆಲೆಯಲ್ಲಿ ಗ್ರಹಿಸುವಂತೆ ಮಾಡಿದೆ. ಜಾಗತೀಕರಣದ ನೆರಳು ಕೇವಲ ಭಾಷೆ ಧರ್ಮಗಳ ಮೇಲೆ ಕವಿದುಕೊಂಡಿಲ್ಲವಷ್ಟೆ. ಜನರ ನಿತ್ಯ ಬದುಕಿಗೆ ಆಧಾರವಾಗಿರುವ ಬೇಸಾಯ ಸಣ್ಣವ್ಯಾಪಾರ ಕೈಕಸುಬುಗಳ ಮುಂತಾದ ನೂರಾರು ಕ್ಷೇತ್ರಗಳ ಮೇಲೆ ಬಿದ್ದಿದೆ. ಕರ್ನಾಟಕದ ಚರಿತ್ರೆಯಲ್ಲಿ ಹಿಂದೆ ಎಂದೂ ಕಾಣದಷ್ಟು ಸಂಖ್ಯೆಯ ರೈತರು, ಕಳೆದ ಐದು ವರುಷಗಳಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇಂತಹ ಸನ್ನಿವೇಶದಲ್ಲಿ ಲೇಖಕರು 'ಸಂಸ್ಕೃತಿ' ಎಂಬ ಅಸ್ಪಷ್ಟ ಅರ್ಥವುಳ್ಳ ಸಂಗತಿಯ ಕಾಳಜಿ ಮಾಡುವುದು, ವಿಚಿತ್ರವಾಗಿ ಕಾಣುತ್ತದೆ. ಅದರಲ್ಲೂ 'ಜಾಗತಿಕ ಮಾರುಕಟ್ಟೆಯ ಭಾಷೆಯಾದ ಇಂಗ್ಲಿಶು ಕ್ರಮೇಣ ಕನ್ನಡದಂತಹ ದೇಶಭಾಷೆಗಳನ್ನು ಕೊಲ್ಲುತ್ತದೆ. ಭಾಷೆಯೇ ಇಲ್ಲವಾದ ಬಳಿಕ, ಅದರ ಸಾಹಿತ್ಯ ಓದಲು ಓದುಗರು ಇರುತ್ತಾರೋ ಇಲ್ಲವೋ. ಈಗಾಗಲೇ ಕನ್ನಡ ಕಾವ್ಯಕ್ಕೆ ಗಂಭೀರ ಓದುಗರು ಇಲ್ಲದಂತಾಗಿದೆ' ಎಂದೆಲ್ಲಾ ಕಳವಳ ಪಡುವುದನ್ನು ಕಂಡಾಗ, ನಮ್ಮ ಸಮಾಜದ ಒಂದು ಸಣ್ಣ ವರ್ಗವು ತನ್ನ ಹಿತಾಸಕ್ತಿಯನ್ನು ಬಹಳ ಮುಖ್ಯ ಮಾಡಿಕೊಂಡು ಅಗತ್ಯಕ್ಕಿಂತ ಹೆಚ್ಚು ಗದ್ದಲ ಎಬ್ಬಿಸುತ್ತಿದೆಯೇ ಎಂದು ಕೂಡ ತೋರುತ್ತದೆ. ಹೀಗಾಗಿ ಲೇಖಕರು ಮಾಡುತ್ತಿರುವ ಸಾಹಿತ್ಯ ಸಂಸ್ಕೃತಿ ಕೇಂದ್ರಿತ ಆತಂಕಗಳ ಪರಿಮಿತಿಯನ್ನು ಕುರಿತು ತೀವ್ರವಾದ ಚರ್ಚೆ ಮಾಡುವ ಅಗತ್ಯವಿದೆ.

ಈ ಬಗೆಯ ಆತಂಕದಲ್ಲಿ ಇರುವ ಎರಡು ಪ್ರಮುಖ ಪರಿಮಿತಿಗಳಿವೆ. ಮೊದಲನೆಯದಾಗಿ ಕನ್ನಡ ಸಾಹಿತ್ಯಕ್ಕೆ ಆತಂಕಗಳು ಬಿಕ್ಕಟ್ಟುಗಳು ಹಿಂದೆ ಇರಲಿಲ್ಲ, ಈಗ ಮಾತ್ರ ಬಂದಿವೆ ಎಂಬಂತಹ ಗ್ರಹಿಕೆಯದು. ಹಾಗೆ ನೋಡಿದರೆ, ಕನ್ನಡಭಾಷೆ ಮತ್ತು ಸಾಹಿತ್ಯಗಳು, ಎಲ್ಲ ಕಾಲಘಟ್ಟಗಳಲ್ಲೂ ಒಂದಲ್ಲ ಒಂದು ಬಗೆಯ ಬಿಕ್ಕಟ್ಟುಗಳನ್ನು ಎದುರಿಸಿಕೊಂಡೇ ಬಂದಿವೆ.

ಬಿಕ್ಕಟ್ಟುಗಳನ್ನು ತಮ್ಮದೇ ಆದ ಬಗೆಯಲ್ಲಿ ನಿವಾರಿಸಿಕೊಂಡೂ ಇವೆ. ಹೀಗೆ ನಿವಾರಿಸಿಕೊಳ್ಳುವಾಗ, ಕೆಲವೊಮ್ಮೆ 'ಸೋತು' ರಾಜಿ ಮಾಡಿಕೊಂಡಿರಬಹುದು. ಆದರೆ ಬಿಕ್ಕಟ್ಟುಗಳು ಕೇವಲ ಹಿಂಜರಿಕೆ ಸೋಲು ರಾಜಿಗಳಿಗೆ ಕಾರಣವಾಗುವುದಿಲ್ಲ. ಹೊಸಹಾದಿಗಳ ಶೋಧನೆಗೂ ಹೊಸ ಸಂಕಲ್ಪಗಳ ತೊಡುವಿಕೆಗೂ ಪ್ರೇರಕವಾಗಿರುತ್ತವೆ. ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಬಿಕ್ಕಟ್ಟುಗಳು ಹೊಸ ಕ್ಷಿತಿಜದತ್ತ ಕರೆದುಕೊಂಡು ಹೋಗಿವೆ. ಇದರರ್ಥ ಜಾಗತೀಕರಣದ ಬಿಕ್ಕಟ್ಟನ್ನು ನಿರಾಳವಾಗಿ ಸಮರ್ಥನೆ ಮಾಡಬೇಕು ಎನ್ನುವುದಲ್ಲ. ಜಾಗತೀಕರಣದಿಂದ ಕೆಲವರಿಗೆ ಕೆಲವು ಬಗೆಯಲ್ಲಿ ಪ್ರಯೋಜನವೂ ಆಗುತ್ತಿರಬಹುದು. ಆದರೆ ಈ ಕೆಲವರು ಯಾರು, ಜಾಗತೀಕರಣದ ಹೊಡೆತಗಳು ನಿಜವಾಗಿ ಯಾರಿಗೆ ಬೀಳುತ್ತಿವೆ ಎಂಬ ಪ್ರಶ್ನೆಗಳನ್ನು ಎತ್ತಲೇಬೇಕು. ಎರಡನೆಯದಾಗಿ ಕನ್ನಡ ಸಾಹಿತ್ಯಕ್ಕೆ ಆತಂಕಗಳು ಬೇರೆ ಯಾವ ದೇಶದ ಯಾವ ಭಾಷೆಯ ಲೇಖಕರಿಗೂ ಬಂದಿಲ್ಲ, ಕನ್ನಡಕ್ಕೆ ಮಾತ್ರ ಬಂದಿವೆ ಎಂಬಂತಹ ಗ್ರಹಿಕೆ. ಇದರಿಂದ ದೂರದ ಆಫ್ರಿಕ ದಕ್ಷಿಣ ಅಮೆರಿಕ ದೇಶಗಳಿರಲಿ, ನೆರೆಯ ತಮಿಳು ಮಲೆಯಾಳ ಮರಾಠಿ ಭಾಷೆಗಳ ಲೇಖಕರು ಜಾಗತೀಕರಣದ ವಿದ್ಯಮಾನಕ್ಕೆ ಹೇಗೆ ಮುಖಾಮುಖಿ ಮಾಡುತ್ತಿದ್ದಾರೆ ಎಂದು ತಿಳಿಯುವುದು ಸಾಧ್ಯವಾಗಿಲ್ಲ.

### ಹಲವು ನಿಲುವುಗಳು

ಜಾಗತೀಕರಣವೆಂಬ ಗುಮ್ಮವು ಲೇಖಕರನ್ನು ಕಾಡಿಸುತ್ತಿರುವುದೇನೋ ನಿಜ. ಆದರೆ, ಜಾಗತೀಕರಣ ಎಂದರೇನು, ಅದು ನಮ್ಮ ಸಮಾಜವನ್ನು ಹೇಗೆ ಆವರಿಸಿಕೊಳ್ಳುತ್ತದೆ, ಹೇಗೆ ಬಾಧಿಸುತ್ತದೆ- ಈ ಬಗ್ಗೆ ಲೇಖಕರಲ್ಲಿರುವ ಕಲ್ಪನೆಗಳು ಮಾತ್ರ ಬಗೆಬಗೆಯಾಗಿವೆ. ಈ ಕುರಿತಂತೆ ಕನ್ನಡ ಲೇಖಕರ ಗ್ರಹಿಕೆಗಳನ್ನು, ನಾಲ್ಕು ನಿಲುವುಗಳಲ್ಲಿ ಕ್ರೋಢೀಕರಿಸಬಹುದು ಅನಿಸುತ್ತದೆ:

೧. ಜಾಗತೀಕರಣವು ನಮ್ಮ ಆರ್ಥಿಕತೆ ರಾಜಕಾರಣ ಸಮಾಜವ್ಯವಸ್ಥೆಗಳ ಮೇಲೆ ಕೆಡುಕಿನ ಪರಿಣಾಮ ಬೀರುತ್ತಿದೆ. ಇದರ ಬಗ್ಗೆ ತಾತ್ವಿಕ ಅರಿವು, ರಾಜಕೀಯ ಎಚ್ಚರ ಹಾಗೂ ಸಾಮೂಹಿಕ ಪ್ರತಿರೋಧ ಬೇಕಾಗಿದೆ ಎಂಬ ನಿಲುವು. ಇದು ಸಾಹಿತ್ಯ ಲೋಕದೊಳಗೆ ಸಂಭವಿಸುತ್ತಿರುವ ಬದಲಾವಣೆಗಳನ್ನು ಒಟ್ಟು ಸಮಾಜದ ನಾಡಿನ ಸುಖದುಃಖಗಳ ಭಾಗವಾಗಿ ನೋಡುತ್ತ, ಒಂದರ ಮೂಲಕ ಇನ್ನೊಂದನ್ನು ಗ್ರಹಿಸಲು ಯತ್ನಿಸುತ್ತದೆ.

೨. ಜಾಗತೀಕರಣ, ಮಾರುಕಟ್ಟೆ, ಆರ್ಥಿಕನೀತಿ ಇವನ್ನೆಲ್ಲ ಒಂದು ಪೆದರುವ ಪ್ರಶ್ನೆಯನ್ನಾಗಿ ಮಾಡಿಕೊಂಡಿರದ ನಿರಾತಂಕವಾದಿ ನಿಲುವು. ಬದಲಾಗುತ್ತಿರುವ ಪರಿಸ್ಥಿತಿಯನ್ನು ಅರಿಯಲು ಹಾಗೂ ಮುಖಾಮುಖಿ ಮಾಡಲು, 'ವಸಾಹತುಶಾಹಿ' 'ಜಾಗತೀಕರಣ' 'ಸಾಮ್ರಾಜ್ಯಶಾಹಿ' ಮುಂತಾದ ಹಳೆಯ ಜಡ ಪರಿಭಾಷೆಗಳಿಂದ ಸಾಧ್ಯವಿಲ್ಲ. ಇದನ್ನು ಅರ್ಥ ಮಾಡಿಕೊಳ್ಳಲು ಹೊಸ ಪರಿಭಾಷೆ ಮತ್ತು ಹೊಸ ದೃಷ್ಟಿಕೋನವೇ ಬೇಕಾಗಿದೆ ಎಂದು ಇದು ಭಾವಿಸಿದೆ. ಪೂರ್ಣಚಂದ್ರ ತೇಜಸ್ವಿ ಅವರ ಈಚಿನ ಸಂದರ್ಶನಗಳಲ್ಲಿ ಈ ದನಿ ವ್ಯಕ್ತವಾಗಿದೆ.

೩. ಜಾಗತೀಕರಣವನ್ನೇ ಆಧುನಿಕತೆಯೆಂದು ಭಾವಿಸಿ, ಈ ಆಧುನಿಕತೆಯು ಸಾಂಪ್ರದಾಯಕ ಸಮಾಜದ ಬಂಧನಗಳೀಂದ ದಲಿತ-ಕೆಳಜಾತಿಯವರನ್ನು ಬಿಡುಗಡೆಗೊಳಿಸುವ ಹರಿಕಾರ ಎಂಬ

ಆತ್ಮವಿಶ್ವಾಸವುಳ್ಳ ನಿಲುವು. ಜಾಗತೀಕರಣವು ಮೂಲತ: ಜಾಗತಿಕ ಬಂಡವಾಳಗಾರರ ಒಂದು ಸಂಘಟಿತ ಯತ್ನವಾಗಿದ್ದು, ವಸಾಹತುಶಾಹಿ ಘಟ್ಟದಲ್ಲಿ ಬಂದ ಆಧುನಿಕತೆಗೂ ಹಾಗೂ ಈ ಹೊತ್ತಿನ ಜಾಗತೀಕರಣಕ್ಕೂ ಬಹಳ ವ್ಯತ್ಯಾಸವಿದೆ ಎಂಬ ಮೂಲಭೂತ ಅರಿವೂ ಈ ನಿಲುವಿಗೆ ಇದ್ದಂತಿಲ್ಲ.

೪. ಜಾಗತೀಕರಣವು ಒಂದು ರಾಕ್ಷಸ ಶಕ್ತಿಯಾಗಿದ್ದು, ಸೂಕ್ಷ್ಮವೂ ಸುಂದರವೂ ಪವಿತ್ರವೂ ಆದ ಸಾಹಿತ್ಯ ಸಂಸ್ಕೃತಿಗಳ ಲೋಕವನ್ನು ಮಲಿನಗೊಳಿಸುತ್ತದೆ ಎಂಬ ನಿಲುವು. ನಮ್ಮ 'ಸಂಸ್ಕೃತಿ' ಕ್ಷೇತ್ರದಲ್ಲಿ ಸಂಭವಿಸಲಿರುವ ಸಮಸ್ತ ಕೇಡುಗಳಿಗೂ ಇದು ಕಾರಣವಾಗಲಿದೆ ಎಂಬ ಕಳವಳ ಇಲ್ಲಿನದು.

ಕೊನೆಯ ಮೂರೂ ನಿಲುವುಗಳು ಸಮಸ್ಯಾತ್ಮಕವಾಗಿವೆ. ಇವುಗಳಲ್ಲಿ ಕನ್ನಡದ ಮಟ್ಟಿಗೆ ತುಂಬ ವ್ಯಾಪಕವೂ ಜನಪ್ರಿಯವೂ ಆಗಿರುವುದು ನಾಲ್ಕನೆಯ ನಿಲುವು. ಇದರ ಸ್ವರೂಪವನ್ನು ಇಲ್ಲಿ ಚರ್ಚಿಸಬಹುದು.

ಸಾಮಾನ್ಯ ರಾಜಕೀಯ ಪ್ರಜ್ಞೆಯುಳ್ಳ ಎಲ್ಲರಿಗೂ ಗೊತ್ತಿದೆ, 'ಜಾಗತೀಕರಣ ಎನ್ನುವುದು, ಜಗತ್ತಿನ ಮಾರುಕಟ್ಟೆ ಶಕ್ತಿಗಳು ಶೋಧಿಸಿರುವ ಒಂದು ಹೊಸ ಆರ್ಥಿಕ ರಾಜಕೀಯ ವ್ಯವಸ್ಥೆ; ಇಡೀ ಜಗತ್ತು ಒಂದು ಹಳ್ಳಿಯಂತೆ ನೇರವಾದ ಕೊಡುಕೊಳು ಸಂಬಂಧವಿರುವಂತೆ ಚಿಕ್ಕದಾಗಬೇಕು. ಸಂಪನ್ಮೂಲಗಳನ್ನು ಪಡೆಯಲು ಮತ್ತು ಮಾರುಕಟ್ಟೆಗಳನ್ನು ಪ್ರವೇಶಿಸಲು ದೇಶದೇಶಗಳ ನಡುವೆ ಅನಗತ್ಯ ನಿರ್ಬಂಧಗಳಿರಬಾರದು. ಮುಕ್ತ ಹರಿದಾಟ ಸಾಧ್ಯವಾಗಬೇಕು- ಎಂಬ ಉದ್ದೇಶದಲ್ಲಿ, ಜಗತ್ತಿನ ದೇಶಗಳು ಪರಸ್ಪರ ಸಮ್ಮತಿಯಿಂದ ಮಾಡಿಕೊಂಡಿರುವ ಒಂದು ಒಪ್ಪಂದವಿದು. ಮೇಲುನೋಟಕ್ಕೆ ಈ ಒಪ್ಪಂದವು ಪ್ರಜಾಪ್ರಭುತ್ವ, ಮುಕ್ತತೆ ಸಮಾನತೆಗಳ ನೆಲೆಯಲ್ಲಿದ್ದಂತೆ ತೋರುತ್ತದೆ. ವಾಸ್ತವದಲ್ಲಿ ಇದು ಬಲಿಷ್ಠ ರಾಷ್ಟ್ರಗಳು ಬಡದೇಶಗಳನ್ನು ದೋಚಲು ಬಲವಂತವಾಗಿ ಹೆದರಿಸಿ ಒಪ್ಪಿಗೆ ಪಡೆದು, ಮಾಡಿಕೊಂಡಿರುವ ಕಾನೂನುಬದ್ಧ ಹುನ್ನಾರ. ಇದನ್ನು ಅಮೆರಿಕದ ರಾಜಕೀಯ ಚಿಂತಕ ನೋಮ್ ಚೋಮ್‌ಸ್ಕಿ 'ಒಪ್ಪಿಗೆಯನ್ನು ಉತ್ಪಾದಿಸುವುದು' (Manufacturing the Consent) ಎಂದು ಕರೆಯುತ್ತಾರೆ ಬಲವುಳ್ಳವರು ಬದುಕಬೇಕು ಎಂಬ ನೀತಿಯುಳ್ಳ ಈ ವ್ಯವಸ್ಥೆಯಲ್ಲಿ ಸ್ಪರ್ಧೆ ಲಾಭಗಳೇ ಮೌಲ್ಯಗಳು. ಸಾಹಿತ್ಯವನ್ನು ಒಳಗೊಂಡಂತೆ ಎಲ್ಲ ಮಾನವ ಭಾವನೆಗಳೂ ಇಲ್ಲಿ ಸರಕೀಕರಣ ಆಗಿರುತ್ತವೆ. ಈ ವ್ಯವಸ್ಥೆಯು ಬಡದೇಶಗಳ ರಾಜಕಾರಣ ಹಾಗೂ ಸಮಾಜ ರಚನೆಗಳ ಮೇಲೆ ತೀವ್ರವಾದ ಪ್ರಭಾವ ಬೀರುತ್ತಿರುವುದು ಕಳೆದ ಹತ್ತು ವರುಷಗಳಲ್ಲಿ ಗೊತ್ತಾಗಿದೆ. ಮುಖ್ಯವಾಗಿ ದುಡಿವ ಜನರ ಮೇಲೆ, ರೈತರು ಸಣ್ಣಪುಟ್ಟ ವ್ಯಾಪಾರಿಗಳ ಮೇಲೆ ಮಾಡುವ ಪರಿಣಾಮ ಬೀರುತ್ತಿದೆ. ಈಗೀಗ ಸಣ್ಣ ಉದ್ದಿಮೆದಾರರೂ ಕಾಫಿಪ್ಲಾಂಟರುಗಳೂ ಅಡಿಕೆ ಸಾಹುಕಾರರೂ ಬೀದಿಗೆ ಬೀಳುತ್ತಿದ್ದಾರೆ. ಬಹಳ ಮುಖ್ಯವಾಗಿ ಶಿಕ್ಷಣವನ್ನು ಅದು ಗುರಿಗೆ ತಕ್ಕಂತೆ ಬದಲಿಸುವ ಕೆಲಸ ಮಾಡುತ್ತದೆ. ಇದಕ್ಕೆ ಸಣ್ಣ ನಿದರ್ಶನವೆಂದರೆ, ಕರ್ನಾಟಕದಲ್ಲಿ ಶಿಕ್ಷಣ ತಜ್ಞರಲ್ಲ - ಸಾಫ್ಟ್ ವೇರ್ ಉದ್ಯಮಿಗಳು ನಾಡಿನ ಶಿಕ್ಷಣ ಮಾಧ್ಯಮ ಇಂಗ್ಲೀಶಿರಬೇಕು

ಎಂದು ಸೂಚನೆ ಕೊಡುವ ಮಟ್ಟ ತಲುಪಿರುವುದು. ಇಂತಹ ಬದಲಾವಣೆಗಳೆಲ್ಲ ಸಹಜವಾಗಿಯೇ ಸಾಹಿತ್ಯದ ಮೇಲೂ ತಮ್ಮ ನೆರಳು ಚೆಲ್ಲುತ್ತವೆ.

**ಹುಸಿಪರ್ಯಾಯಗಳು**

ಹಾಗೆ ಕಂಡರೆ, ಜಾಗತೀಕರಣದಿಂದ ಆಗುತ್ತಿರುವ ಅನುಭವಗಳು ಭಾರತೀಯರಿಗೆ ಹೊಸವೇನಲ್ಲ. ಬ್ರಿಟಿಶರು ಆಳುವಾಗ ಮಾತ್ರವಲ್ಲ, ಅವರು ಅಧಿಕಾರ ಬಿಟ್ಟುಹೋದ ನಂತರ, ನಮ್ಮ ದೇಶವು ಖಾಸಗಿ ಬಂಡವಾಳವೂ ಜತೆಯಲ್ಲಿ ಇರಬೇಕು ಎಂಬ ಆರ್ಥಿಕ ನೀತಿಯನ್ನು ಅನುಸರಿಸುತ್ತಿರುವ ದಿನದಿಂದಲೂ ಇದೆ. ಈಗ ಈ ನೀತಿಗೆ ಒಂದು ಜಾಗತಿಕವಾದ ವ್ಯಾಪ್ತಿಯೂ ಪ್ರವಾಹ ಬಲವೂ ಬಂದಿದೆ ಅಷ್ಟೆ. ಈ ಹಿನ್ನೆಲೆಯಲ್ಲಿ ಜಾಗತೀಕರಣ ಕುರಿತು ಆತಂಕಗಳು ಹುಟ್ಟುವುದು ಸಹಜವಾಗಿವೆ. ಇರುವುದು ಆತಂಕಗಳ ತಾತ್ವಿಕ ಗ್ರಹಿಕೆಯ ಮೇಲೆ. ಆತಂಕವು ಆಸುಪಾಸಿನ ಪರಿಸರವನ್ನು ಮತ್ತಷ್ಟು ಸೂಕ್ಷ್ಮವಾಗಿ ಜಾಗರೂಕವಾಗಿ ನೋಡಲು ಕಾರಣವಾಗುವುದಾದರೆ ಅದೊಂದು ತೆರ. ಆಗ ಅದು ಸರಿಯಾದ ತಿಳಿವಳಿಕೆಗೂ ಸೂಕ್ತ ಕ್ರಿಯೆಗೂ ಕಾರಣವಾಗಬಲ್ಲದು. ಆದರೆ ಆತಂಕವು ಭಾವುಕವೂ ಮಂಜಿನಂತೆ ಅಸ್ಪಷ್ಟವೂ ಆದಾಗ, ಅನಗತ್ಯವಾದ ಭಯವನ್ನು ನಿರ್ಮಿಸುತ್ತದೆ. ಕ್ಲೀಷೆಯಾಗಿರುವ ರಾಜಕೀಯ ಸಿದ್ಧ ಪರಿಭಾಷೆಗಳಲ್ಲಿ ವ್ಯಕ್ತವಾಗತೊಡಗಿದಾಗ ಕೂಡ ಅದು ನಿರುಪಯುಕ್ತವಾಗುತ್ತದೆ. ಆತಂಕಕ್ಕೆ ಜನಪರವಾದ ರಾಜಕೀಯ ಪ್ರಜ್ಞೆ ಹಾಗೂ ಸಾಮಾಜಿಕ ದರ್ಶನಗಳಿಲ್ಲದೆ ಹೋದಾಗ, ಮಾನವೀಯ ಆಯಾಮವನ್ನು ಪಡೆಯುವುದಿಲ್ಲ. ಸೀಮಿತ ಹಿತಾಸಕ್ತಿಗಳಿಗಾಗಿ ಹೇಗಾದರೂ ಬದುಕುವ ಅವಕಾಶವಾದಿತನದತ್ತ ಇಲ್ಲವೇ ನಿಷ್ಕ್ರಿಯತೆ ಸಿನಿಕತೆಗಳತ್ತ ಕರೆದುಕೊಂಡು ಹೋಗುತ್ತದೆ. ಅಸ್ಪಷ್ಟತೆ ಅರೆತಿಳಿವಳಿಕೆ, ಹತಾಶೆಗಳು ಮೂಡಿಸುವ ಪರ್ಯಾಯಗಳು ವಿಚಿತ್ರವಾಗಿರಬಲ್ಲವು. ಉದಾಹರಣೆಗೆ -

ಅ. ಅನೇಕ ಕನ್ನಡ ಲೇಖಕರು ಆಧುನಿಕ ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆಯನ್ನೇ ಜಾಗತೀಕರಣ ಎಂದು ವ್ಯಾಖ್ಯಾನಿಸಿಕೊಂಡು, ಆಧುನಿಕತೆಯನ್ನು ಸಾರಾಸಗಟು ತಿರಸ್ಕರಿಸುವಂತಹ ಚಿಂತನೆ ಮಾಡುತ್ತಿರುವುದು.

ಆ. ಜಾಗತೀಕರಣದ ಆತಂಕವು ಕೆಲವರಿಗೆ ಗತಕಾಲದ ಸಾಧನೆಗಳಲ್ಲಿ ತಲೆಮರೆಸಿಕೊಂಡು, ಆ ಕಾಲವನ್ನು ಭಾವುಕವಾಗಿ ಮರುಕೊಳಿಸಿಕೊಳ್ಳುವುದಕ್ಕೆ ನೆಪವಾಗಿರುವುದು. ೨೦ನೇ ಶತಮಾನದ ದೊಡ್ಡ ಲೇಖಕರ ಜನ್ಮಶತಮಾನಗಳು ಬರುತ್ತಿರುವ ಸಂದರ್ಭವು, ಈ ಹಳಹಳಿಕೆ ಮರುಕೊಳಿಕೆಗೆ ಅಧಿಕೃತ ನೆಪ ಒದಗಿಸಿದಂತಿದೆ.

ಇ. ಕೆಲವರು ಜಾಗತೀಕರಣದ ಆತಂಕದಿಂದ ರಕ್ಷಿಸಿಕೊಳ್ಳಲು 'ದೇಶೀಸಂಸ್ಕೃತಿ'ಯನ್ನು (ಕನ್ನಡದಲ್ಲಿ ಖಚಿತವಾದ ವ್ಯಾಖ್ಯೆಯಿಲ್ಲದ ಪರಿಕಲ್ಪನೆಗಳಲ್ಲಿ ಇದೂ ಒಂದು.) ಅಗೆದುತೆಗೆದು, ಅಲ್ಲಿ ಮಿರುಗುವ ಚಿನ್ನದದಿರನ್ನು ಶೋಧಿಸಬೇಕು ಎಂಬ ಉಪಾಯವನ್ನು ಸೂಚಿಸುತ್ತಿರುವುದು. ಇವರು ಜಾಗತೀಕರಣವೆಂಬ ರಾಕ್ಷಸನನ್ನು ಸೋಲಿಸುವ ಗೆಲ್ಲುವ ಶಕ್ತಿ ನಮ್ಮ ಜನಸಮುದಾಯಗಳ ಜಾನಪದ ಸಂಸ್ಕೃತಿಯಲ್ಲಿದೆ ಎಂದು ತಣ್ಣನೆಯ ನಂಬಿಕೆಯನ್ನೂ ವ್ಯಕ್ತಪಡಿಸುವವರು.

ಇನ್ನೂ ಮುಂದೆ ಹೋಗಿ, ಬಡವರು ಅಶಿಕ್ಷಿತರು ಹಳ್ಳಿಗರು ಮಾತ್ರ ಜಾಗತೀಕರಣದ ಸಾಂಸ್ಕೃತಿಕ ವಿನಾಶದಿಂದ ಸಂಸ್ಕೃತಿಯನ್ನು ರಕ್ಷಿಸಬಲ್ಲರು ಎನ್ನುವವರು. ಮುಖ್ಯವಾಗಿ ಯು ಆರ್. ಅನಂತಮೂರ್ತಿಯವರಲ್ಲಿ ಈ ಬಗೆಯ ಗ್ರಹಿಕೆ ಇದೆ.

ಈ. ಮತ್ತೆ ಕೆಲವರಲ್ಲಿ ಜಾಗತೀಕರಣದ ಕೇಡುಗಳನ್ನು ದೇಶೀಯ ಅನುಭಾವಿ ಪರಂಪರೆಗಳ ಅನುಸಂಧಾನದ ಮೂಲಕ ಎದುರಿಸುವ ಆಶಯ ವ್ಯಕ್ತವಾಗುತ್ತಿದೆ. ಮಂಟೆಸ್ವಾಮಿ ಪರಂಪರೆಯನ್ನು ಅಪ್ಪಿಕೊಂಡ ಕೆಲವರಲ್ಲಿ ಇದನ್ನು ಕಾಣಬಹುದು. ಸೂಜಿ ಗಿರಣಿ ಮುಂತಾದ ಆಧುನಿಕ ಸಂಗತಿಗಳನ್ನು ರೂಪಕವಾಗಿಸಿಕೊಂಡು ಶಿಶುನಾಳ ಶರೀಫನು ರಚಿಸಿದ ಬೆಡಗಿನ ಪದಗಳು, ಅಲ್ಲಮಪ್ರಭುವಿನ ಬೆಡಗಿನ ವಚನಗಳು ಈ ಹೊತ್ತು ಜಾಗತೀಕರಣದ ವಿರೋಧಿ ಅರ್ಥದಲ್ಲಿ ವಿಶ್ಲೇಷಣೆಗೆ ಒಳಗಾಗುತ್ತಿವೆ.

## ಯುದ್ಧ ಸೋತದನಿ

ಈ ಎಲ್ಲ ಬಗೆಯ ಪ್ರತಿರೋಧಗಳು ಪರ್ಯಾಯ ಶೋಧಗಳು ನಮ್ಮೆದುರು ಮೈ ತಳೆಯುತ್ತಿರುವ ರಾಜಕೀಯ ಆರ್ಥಿಕ ಪರಿಸ್ಥಿತಿಯನ್ನು ಅರಿಯಲು, ಎದುರಿಸಲು, ಬದಲಿಸಲು ಹೇಗೆ ನೆರವಾಗಬಲ್ಲವು ? ಇದಕ್ಕೆ ಸಿದ್ಧ ಉತ್ತರವಿಲ್ಲ. ಆದರೆ ಯುದ್ಧಕ್ಕೆ ಮುನ್ನವೇ ಸೋಲೊಪ್ಪಿಕೊಂಡ ದನಿ ಬರುತ್ತಿರುವುದು, ನಿಜವಾದ ಆತಂಕದ ಸಂಗತಿ. ಜಾಗತೀಕರಣ ಕುರಿತು ತಾತ್ವಿಕವಾಗಿ ಗೊಂದಲದ, ರಾಜಕೀಯವಾಗಿ ಗುರಿಹೀನವಾದ, ಸಾಮಾಜಿಕ ವ್ಯಾಪಕತೆ ಇಲ್ಲದ, ಹತಾಶ ಚಿಂತನೆಗೆ ಇನ್ನೊಂದು ಮೂಲಭೂತ ಕಾರಣವಿದ್ದಂತಿದೆ. ಅದೆಂದರೆ- 'ಜಾಗತೀಕರಣ ಕೆಟ್ಟದ್ದು ನಿಜ, ಆದರೆ ಜಾಗತೀಕರಣದ ನಿಜ. ಅವತಾರವಾದ ಮುಕ್ತ ಮಾರುಕಟ್ಟೆ ಆರ್ಥಿಕನೀತಿಯನ್ನು ನಮ್ಮನ್ನಾಳುವ ಪ್ರಭುತ್ವಗಳು ತಮ್ಮ ಅಧಿಕೃತ ಪಾಲಿಸಿಯಾಗಿ ಒಪ್ಪಿಕೊಂಡುಬಿಟ್ಟಿವೆ. ಹೀಗಿರುವಾಗ ಅದನ್ನು ವಿರೋಧಿಸುವುದು ಕಷ್ಟ. ಮಾತ್ರವಲ್ಲ ವ್ಯರ್ಥ' ಎಂಬ 'ವಾಸ್ತವವಾದಿ' ಗ್ರಹಿಕೆ ಆಳವಾಗಿ ಬೇರು ತಳೆದಂತಿರುವುದು. ಒಮ್ಮೆ ಈ 'ವಾಸ್ತವ'ವಕ್ಕೆ ತಲೆ ಒಪ್ಪಿಸಿದರೆ, ಮುಂದೆ ಯಾವ ಪ್ರತಿರೋಧವೂ ಪರ್ಯಾಯ ಹುಡುಕಾಟವೂ ಸಾಧ್ಯವಾಗುವುದಿಲ್ಲ.

ಈ ಗ್ರಹಿಕೆಯು ಕೆಲವು 'ವಾಸ್ತವ'ವಾದಿಗಳ ಮನಸ್ಸಲ್ಲಿ ಬೇರುತಳೆದು, ಜಾಗತೀಕರಣವನ್ನು ನಿವಾರಿಸುವ ವ್ಯರ್ಥ ಯತ್ನಕ್ಕೆ ಬದಲಾಗಿ, ಈ ಸಂದರ್ಭದ 'ರಿಯಾಲಿಟಿ'ಯನ್ನು ಒಪ್ಪಿಕೊಂಡು, ಇದಕ್ಕೆ ನಮಗೆ ಬೇಕಾದ ಸಾಂಸ್ಕೃತಿಕ ನಿಯಂತ್ರಣವನ್ನು ಜಾಣ್ಮೆಯಿಂದ ಮಾಡಬಹುದು ಎಂಬ ಉಪಾಯವನ್ನು ಹುಟ್ಟಿಸಿದೆ. ಉದಾಹರಣೆಗೆ- ಬಹುರಾಷ್ಟ್ರೀಯ ಕಂಪನಿಗಳು ಸಾಮಾಜಿಕ ನ್ಯಾಯದ ಮೀಸಲಾತಿ ಪಾಲಿಸುವಂತೆ ಮಾಡುವುದು, ಕನ್ನಡ ಭಾಷೆಯ ಬಳಕೆ ಮಾಡುವಂತೆ ಮಾಡುವುದು, ಸ್ಥಳೀಯರಿಗೆ ಉದ್ಯೋಗ ಕೊಡುವುದು, ತಮ್ಮ ಲಾಭದ ಒಂದು ಪಾಲನ್ನು ಸ್ಥಳೀಯ ಪರಿಸರದ ಜನೋಪಯೋಗಿ ಕೆಲಸಕ್ಕೆ ಮೀಸಲಿಡುವುದು - ಈ ಮುಂತಾದ ವಿಧಾನದಲ್ಲಿ ಅದನ್ನು ಅಂಕೆಯಲ್ಲಿಡಬಹುದು ಎಂಬ ನಂಬಿಕೆ ಇಲ್ಲಿದ್ದಂತಿದೆ. ನಿರ್ದಿಷ್ಟ ವ್ಯವಸ್ಥೆಯನ್ನು ಮೂಲತ: ಅದು ಕೇಡೆಂದು ನಂಬಿ, ಅದನ್ನು ಎದುರಿಸಲಾಗದು ಎಂಬ ಸೋಲನ್ನು ಒಪ್ಪಿಕೊಂಡು,

ನಂತರ ಅದರಲ್ಲೇ ಹೇಗೆ ಪ್ರಯೋಜನ ಎತ್ತಬಹುದು ಎಂದು ಉಪಾಯ ಹುಡುಕುವುದು ಈ ಮಾದರಿಯ ಲಕ್ಷಣ. ಅಂತಿಮವಾಗಿ ಇದು ಎರಡನೇ ದರ್ಜೆಯ ಪ್ರಜೆಯಾಗಿರಲು ಒಪ್ಪಿಕೊಂಡು, ಪರಿಣಾಮದಲ್ಲಿ ಅವಕಾಶವಾದಿ ಮಾದರಿಯಾಗುವುದಿಲ್ಲವೇ? ಪೂರ್ಣ ಬಿಡುಗಡೆಯ ಸಾಧ್ಯತೆಯೇ ಇಲ್ಲಿ ಇಲ್ಲ.

ಇಂತಹ ಅವಕಾಶವಾದಿ ಮಾದರಿಗಳಿಗೆ ತಕ್ಕಂತೆ, ತನ್ನದೇ ಆದ ನೂರಾರು ಪರ್ಯಾಯಗಳನ್ನು ಜಾಗತೀಕರಣ ಶಕ್ತಿಗಳು ಈಗಾಗಲೆ ಒದಗಿಸಿವೆ. ಇದರಲ್ಲಿ ನಮ್ಮ ಸಮಾಜದಲ್ಲಿರುವ ವಿಭಿನ್ನ ಸಮುದಾಯಗಳ ಸಂಸ್ಕೃತಿಯನ್ನು ಅದರ ವೈವಿಧ್ಯವನ್ನು ಉಳಿಸುವ ಯೋಜನೆಯೂ ಒಂದು. ಈ ಯೋಜನೆಗಳನ್ನು ಜಾರಿಗೊಳಿಸಲು, ಅನೇಕ ಫೌಂಡೇಶನ್ನುಗಳು ಎನ್ ಜಿಓಗಳ ಮೂಲಕ ಸಾವಿರಾರು ನಿರುದ್ಯೋಗಿ ಯುವಕರನ್ನು ತೊಡಗಿಸಿಕೊಂಡು ಅಹೋರಾತ್ರಿ ಕೆಲಸ ಮಾಡುತ್ತಿವೆ. ಯಾಕೆ ಎನ್‌ಜಿಓಗಳು, ಬಹುರೂಪಿ ಸಂಸ್ಕೃತಿಯ ಹುಡುಕಾಟ ಅಥವಾ ದಲಿತ ಮುಸ್ಲಿಂ ಮಹಿಳಾ ಗಿರಿಜನ ಮುಂತಾದ ಚಿಕ್ಕಚಿಕ್ಕ ಸಮುದಾಯಗಳ ಸಾಂಸ್ಕೃತಿಕ ಅನನ್ಯತೆಯಂತಹ ಪ್ರಶ್ನೆಯನ್ನು ಮುಖ್ಯ ಮಾಡಿಕೊಂಡಿವೆ?- ಈ ಪ್ರಶ್ನೆಯನ್ನು ತೀಕ್ಷ್ಣವಾದ ಪರೀಶೀಲನೆಗೆ ಒಳಪಡಿಸುವ ಅಗತ್ಯವಿದೆ. ಜಾಗತೀಕರಣದ ಪರಿಣಾಮಗಳು ಜನರಲ್ಲಿ ನಿರ್ಮಿಸುವ ಹತಾಶೆಯ ಬೆಂಕಿಯನ್ನು ತಣಿಸುವ ಹುಸಿಪರ್ಯಾಯಗಳಾಗಿ ಇವು ತೊಡಗಿವೆಯೇ?

ಇಂತಹದೊಂದು ಸಂಕೀರ್ಣ ಸಂದರ್ಭದಲ್ಲಿ ಜಾಗತೀಕರಣ ಕುರಿತ ಆತಂಕವು, ಸಾಹಿತ್ಯ 'ಸಂಸ್ಕೃತಿ'ಗಳ ನೆಲೆಯಲ್ಲೇ ಸುಳಿಯುವುದು, ಅದರಲ್ಲೂ ಸಂಸ್ಕೃತಿಯನ್ನು ಕೇವಲ ಸಾಹಿತ್ಯ ಕೇಂದ್ರಿತವಾಗಿ ನೋಡುವುದು, ತೀವ್ರ ಮಿತಿಗಳುಳ್ಳ ರಾಜಕೀಯ ಗ್ರಹಿಕೆಯಾಗಿದೆ. ಜಾಗತೀಕರಣ ಕುರಿತ ಚರ್ಚೆಗಳಲ್ಲಿ ಸಮಾಜವಿಜ್ಞಾನ ಕ್ಷೇತ್ರಗಳಲ್ಲಿ ಕೆಲಸ ಮಾಡುವವರು ಸೇರಬೇಕಾದಷ್ಟು ಪ್ರಮಾಣದಲ್ಲಿ ಇಲ್ಲದಿರುವುದು ಇದಕ್ಕೊಂದು ಕಾರಣವಿರಬಹುದೇ? ಕರ್ನಾಟಕದ ಹೆಚ್ಚಿನ ಸಮಾಜ ವಿಜ್ಞಾನಿಗಳು ಇದನ್ನು ಒಂದು ಆತಂಕಕಾರಿ ಸಂಗತಿ ಎಂದು ತಿಳಿದಿಲ್ಲವೆ? ಅಥವಾ ಜಾಗತೀಕರಣದ ಮೇಲೆ 'ಸಾಂಸ್ಕೃತಿಕ' ಕಾರಣಗಳಿಗಾಗಿ ಆತಂಕ ಮಾಡುವವರಿಗೆ, ಇದರ ವಿರುದ್ಧ ಹೋರಾಟ ಮಾಡುತ್ತಿರುವ ರೈತರ ಕಾರ್ಮಿಕರ ಚಳುವಳಿಗಳ ಜತೆ ಗಾಢ ಸಂಬಂಧ ಇಲ್ಲದಿರುವುದು ಕಾರಣವಿರಬಹುದೇ? ಒಟ್ಟಿನಲ್ಲಿ ಕನ್ನಡ ಮಟ್ಟಿಗೆ ಹೀಗಾಗಿ ಜಾಗತೀಕರಣವನ್ನು ರಾಜಕೀಯ ಅರ್ಥಶಾಸ್ತ್ರದ ನೆಲೆಯಲ್ಲಿ ಗ್ರಹಿಸುವ, ರಾಜಕೀಯ ಕ್ರಿಯೆಗಳ ಜತೆ ಬೆಸೆಯುವ ಹಾಗೂ ಭಾಷೆ ಸಾಹಿತ್ಯದಿಂದ ಹಿಡಿದು ರೈತರು ಮಹಿಳೆಯರ ತನಕ ನಾಡಿನ ಬದುಕಿನ ಮೇಲೆ ಜಾಗತೀಕರಣದಿಂದಾಗುವ ಪರಿಣಾಮಗಳನ್ನು ಏಕಕಾಲಕ್ಕೆ ಚಿಂತಿಸುವ, ತಾತ್ವಿಕ ಸೂಕ್ಷ್ಮತೆ ಮತ್ತು ಎಚ್ಚರ ಮತ್ತಷ್ಟು ಜರೂರಾಗಿದೆ ಎಂದು ಮಾತ್ರ ಹೇಳಬಹುದು.

## ನಾನಾ ಹವಣಿಕೆಯಲ್ಲಿ ಸಾಹಿತ್ಯ

'ಜಾಗತೀಕರಣ'ದ ವಿದ್ಯಮಾನಕ್ಕೆ ಕರ್ನಾಟಕ ಸಮಾಜದ ವಿಭಿನ್ನ ಸ್ತರಗಳು, ತಮ್ಮದೇ ಆದ ಪ್ರತಿರೋಧ ಹಾಗೂ ಪರ್ಯಾಯ ಹುಡುಕಾಟಗಳನ್ನು ಹೇಗೆಲ್ಲ ಮಾಡುತ್ತಿವೆಯೋ, ಅವನ್ನಿನ್ನೂ ಅರಿಯಬೇಕಿದೆ. ಹೋರಾಟದ ಚರಿತ್ರೆಯಳ್ಳನ್ನು ಎಲ್ಲ ಸಮುದಾಯಗಳೂ, ತಮ್ಮ

ಮೇಲೆರಗಿ ಬರುವ ವಿದ್ಯಮಾನಗಳಿಗೆ, ಪ್ರತಿರೋಧಿಸುವ ಚೈತನ್ಯ ಪಡೆದೇ ಇರುತ್ತವೆ. ಸಾಹಿತ್ಯ ಮಟ್ಟಿಗೆ ಹೇಳುವುದಾದರೆ, ಕನ್ನಡದಲ್ಲಿ ಜನರ ಬದುಕನ್ನು ಪ್ರೀತಿಸುವ ಮನಸ್ಸುಗಳಿಂದ ಜಾಗತೀಕರಣವನ್ನು ವಿಶ್ಲೇಷಿಸುವ ವಿಚಾರರೂಪಿಯಾದ ಚಿಂತನ ಸಾಹಿತ್ಯವು ಸಾಕಷ್ಟು ಸೃಷ್ಟಿಯಾಗುತ್ತಿದೆ. ಇದರ ಸೃಷ್ಟಿಯಲ್ಲಿ 'ಸಾಹಿತಿ'ಗಳು ಮಾತ್ರವಲ್ಲ, ಕನ್ನಡದಲ್ಲಿ ಬರೆಯುವ ಸಮಾಜವಿಜ್ಞಾನ ಕ್ಷೇತ್ರದ ಕೆಲವು ಚಿಂತಕರೂ ಸೇರಿದ್ದಾರೆ. ಕರ್ನಾಟಕದಲ್ಲಿ ಕಳೆದ ೧೦ ವರುಷಗಳಿಂದ ರೈತಚಳುವಳಿ, ಪರಿಸರ ಚಳುವಳಿ, ಕಾರ್ಮಿಕರ ಚಳುವಳಿಗಳು ಸಾಮ್ರಾಜ್ಯಶಾಹಿ ಆರ್ಥಿಕ ನೀತಿಗಳ ವಿರುದ್ಧ ನಡೆಸುತ್ತಿರುವ ಹೋರಾಟಗಳ ಗಾಳಿಯಿಂದ ಚಿಗುರಿದ ಕುಡಿಗಳಿವು. ಕನ್ನಡದ ವಿಚಾರ ಸಾಹಿತ್ಯವು, ಯಾಕೆ ವಿಶಾಲ ಓದುಗ ಸಮುದಾಯವನ್ನು ಪಡೆದುಕೊಳ್ಳುತ್ತಿದೆ, ಪುಸ್ತಕಗಳ ಮಾರಾಟದಲ್ಲಿ ಯಾಕೆ ಕಾವ್ಯ ಎದುರಿಸುತ್ತಿರುವ ಬಿಕ್ಕಟ್ಟು ವೈಚಾರಿಕ ಕೃತಿಗಳು ಎದುರಿಸುತ್ತಿಲ್ಲ-ಈ ಪ್ರಶ್ನೆಗಳಿಗೆ ಇಲ್ಲಿ ಉತ್ತರವಿದೆ. ಈಹೊತ್ತಿನ ಕನ್ನಡದ ಓದುಗ ಸಮುದಾಯವು ಸಾವಿರಾರು ನದಿಗಳು ಬಂದು ಕೂಡಿದ ಕಡಲಿದ್ದಂತೆ. ಅದಕ್ಕೆ ರೋಮಾಂಚ ಕವೆನಿಸುವ ಅನುಭವ ಜಗತ್ತನ್ನು ತೆರೆವ ಬರೆಹಕ್ಕಿಂತ, ಈ ಲೋಕವನ್ನು ಅರ್ಥ ಮಾಡಿ ಕೊಳ್ಳುವುದಕ್ಕೂ ಎದುರಿಸುವುದಕ್ಕೂ ಬೇಕಾದ ವೈಚಾರಿಕತೆಯ ಹಸಿವಿದ್ದಂತಿದೆ. ಕಳೆದ ೧೦ ವರುಷಗಳಲ್ಲಿ ಲಂಕೇಶ್ ಹಾಗೂ ತೇಜಸ್ವಿಯವರು ಹದಿಹರೆಯದ ವಿಶಾಲ ಓದುಗ ಸಮುದಾಯವನ್ನು ಪಡೆಯಲು ಇರುವ ಕಾರಣಗಳನ್ನು ಇನ್ನೂ ವಿಶ್ಲೇಷಿಸಬೇಕಿದೆ. ಹೊಸ ತಲೆಮಾರಿನ ಓದುಗ ಸಮುದಾಯಕ್ಕೆ, ಲೋಕದ ವಾಸ್ತವವನ್ನು ಎದೆಗಾರಿಕೆ ಮತ್ತು ಸಂಘರ್ಷ ಗಳ ಮೂಲಕ ಎದುರಿಸಿ ಗೆಲ್ಲುವ ಚಿಂತನೆಯನ್ನುಳ್ಳ ಸಾಹಿತ್ಯವು ಸೆಳೆಯುತ್ತಿದೆ ಎಂಬುದು ಇದರ ಅರ್ಥವಿರಬೇಕು. ವ್ಯಂಗ್ಯವೆಂದರೆ, ಜಾಗತೀಕರಣದ ಬಗ್ಗೆ ಬಹಳ ಆತಂಕ ವ್ಯಕ್ತ ಮಾಡದ ಲೇಖಕರು ಇವರು. ಅದನ್ನು ಪೈಪೋಟಿ ಶಿಸ್ತು ದುಡಿಮೆ ಪ್ರಾಮಾಣಿಕತೆ ಮುಂತಾದ ಗುಣಗಳಿಂದ ಎದುರಿಸಬೇಕು ಎಂದು ನಂಬಿದವರು.

ಜಾಗತೀಕರಣದ ಪರಿಣಾಮಗಳನ್ನು ಕತೆಕಾದಂಬರಿ ಮುಂತಾದ ಅನುಭವ ಪ್ರಧಾನವಾದ ಕೃತಿಗಳು, ಪ್ರಕಟಿಸುತ್ತಿರುವ ಪರಿ ಯಾವುದು? ಈ ಪ್ರಶ್ನೆಗೆ ಉತ್ತರಿಸುವುದು ಸುಲಭವಲ್ಲ. ಈ ಕೃತಿಗಳು ಹಿಂದೆ ಪ್ರಸ್ತಾಪಿಸಿದ ವಿಚಾರರೂಪಿ ಕೃತಿಗಳಂತೆ, ತಮ್ಮ ಕಾಣ್ಕೆಯನ್ನು ಸೈದ್ಧಾಂತಿಕವಾಗಿ ಗ್ರಹಿಸಿ ಚಿಂತನ ರೂಪಿಯಾಗಿಯೇ ಕಂಡರಿಸಬೇಕು ಎಂದು ಅಪೇಕ್ಷಿಸುವಂತಿಲ್ಲ. ತಮ್ಮ ಕಣ್ಮುಂದೆ ನಡೆವ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗ್ರಹಿಸುವ, ಅಸಹಾಯಕ ಜನರ ನೋವು ನಲಿವುಗಳಿಗೆ ಮಿಡಿಯುವ ಪ್ರತಿಭಾವಂತ ಲೇಖಕರು, ತಾವು ತುಡುಕುವ ಅನುಭವದ ಮೂಲಕವೆ ಇದನ್ನು ಕಂಡರಿಸಬಲ್ಲರು. 'ನಾಗರಬೆತ್ತ' ಕತೆ ಬರೆದ ಸೇಡಿಯಾಪು ವಸಾಹತುಶಾಹಿಯನ್ನು ಕುರಿತು ರಾಜಕೀಯ ಸಿದ್ಧಾಂತಗಳನ್ನು ಓದಿಕೊಂಡಿದ್ದರೆ? ನಮಗೆ ತಿಳಿಯದು. ಆದರೆ ಒಬ್ಬ ಅಮಾಯಕ ಮದುಮಗನ ದುರುಂತವನ್ನು ಪ್ರಾಮಾಣಿಕವಾಗಿ ವಾಸ್ತವವಾದಿಯಾಗಿಲ್ಲಿ ಹಿಡಿಯುವ ಆರ್ತ ಕ್ರಮದಲ್ಲಿಯೇ, ಅವರ ಕತೆ ತನ್ನ ಕಾಣ್ಕೆಯನ್ನು ಪ್ರಕಟಿಸುತ್ತದೆ.

ಬೆಳೆದಂತೆ ಬೆಳೆದಂತೆ ಕಳಕೊಂಡ ಕನಸು, ಭಾವನೆಗಳು ಮನಸ್ಸಿನಲ್ಲೆ ಹುತ್ತ ಕಟ್ಟಿ ಹೊರ ಬರಲು ಚಡಪಡಿಸತೊಡಗಿದವು. ಬಚ್ಚಿಟ್ಟ ಭಾವನೆಗಳಲ್ಲೆ ಕಳೆದು ಹೋಗದೆ ನನ್ನ-ನನ್ನ ಹೆಂಗೆಳೆಯರ ಭಾವನೆಗಳಿಗೆ ಧ್ವನಿಯಾಗಬೇಕು, ಎದೆಯೊಳಗೆ ಮಡುವು ಗಟ್ಟಿದ ವೇದನೆ ಹಾಡಾಗಿ ಹರಿಯಬೇಕೆನ್ನಿಸಿತು. ಅದೇ ನನ್ನ ಕಾವ್ಯ.

ನಿಜ ಹೇಳಬೇಕೆಂದರೆ ಬರೆಯ ತೊಡಗಿದಾಗ ಯಾವ ನಿರಾಶಾದಾಯಕ ಗೊಂದಲಮಯ ವಾತಾವರಣವೂ ನನ್ನನ್ನು ಕಾಡಲಿಲ್ಲ. ನನ್ನ ಬರವಣಿಗೆ ನನ್ನ ಸಂಗಾತಿಗಳ ಧ್ವನಿಯಾಗಬೇಕೆಂದು ನಾನು ಬಯಸಿದ್ದರಿಂದ, ನನ್ನ ಕವನಗಳಲ್ಲಿ ನನ್ನ ಗೆಳತಿಯರು ತಮ್ಮನ್ನು ಕಂಡುಕೊಳ್ಳಬೇಕೆಂದು ಬಯಸಿದೆ. ಎಷ್ಟೋ ಕತೆ ಕವಿತೆಗಳನ್ನು ಓದಿದಾಗ 'ಅಯ್ಯೋ, ಇವರು ನನ್ನನ್ನೇ ಸೃಷ್ಟಿಸಿ ಬಿಟ್ಟಿದ್ದಾರಲ್ಲಾ!' ಎಂದು ನಾನು ಅಂದುಕೊಳ್ಳುವಂತೆ, ಆ ಕ್ಷಣ ನಾನು ನಿರುಮ್ಮಳಳಾದಂತೆ, ನನ್ನ ಓದುಗ ಸಂಗಾತಿಗಳು ನನ್ನ ಭಾವಾಭಿವ್ಯಕ್ತಿ ತನ್ನದೇ ಆಗಿವೆಯಲ್ಲಾ ಅಂದುಕೊಂಡರೆ ಅದೇ ನನ್ನ ಕವನದ ಸಾರ್ಥಕತೆ.

ನನ್ನ ಹೆಂಗಳೆಯರಿಗೆ ದಿನ ನಿತ್ಯದ ಕೆಲಸದ ಮಧ್ಯೆ ಸಿಗುವ ಸಮಯವೇ ಅತ್ಯಲ್ಪ. ಒಂದು ಕವನವನ್ನು ಹತ್ತಾರು ಬಾರಿ ಓದಿ ಅರ್ಥೈಸಿಕೊಳ್ಳುವ ಪುರುಸೊತ್ತು, ಬಹುಶಃ ವ್ಯವಧಾನ ಕೂಡ ನನಗಿರುವಷ್ಟೇ ಎಂದು ಕೊಂಡಿದ್ದೇನೆ. ಹೀಗಾಗಿ ಸಾಧ್ಯವಾದಷ್ಟು ಬೇಗ ಅವರನ್ನು ತಟ್ಟಬೇಕು, ಕಲಕಬೇಕು ಎನ್ನುವ ಹಂಬಲದಲ್ಲೆ ಗೂಢಾತಿಗೂಢವಾಗಿ ನನಗೆ ಬರೆಯಲು ಸಾಧ್ಯವಾಗಿಲ್ಲ.

ಒಮ್ಮೊಮ್ಮೆ 'ಕಾವ್ಯದಲ್ಲೆ ಸಂಪೂರ್ಣವಾಗಿ ನಾನು ಬಿಚ್ಚಿಕೊಂಡಿಲ್ಲವೇನೋ' ಎನ್ನುವ ಭಾವನೆ ಕಾಡುತ್ತದೆ. ನನ್ನ ಭಾವಾಭಿವ್ಯಕ್ತಿಗೆ ಕಾವ್ಯದಲ್ಲಿ ಯಾವುದೋ ರೂಪಕ-ಪ್ರತಿಮೆಗಳನ್ನು ಹುಡುಕಿಕೊಳ್ಳಬೇಕಾದ ಸಂದರ್ಭದಲ್ಲಿ ಅಥವಾ ನನ್ನ ಕಾವ್ಯ ಕಟ್ಟುವ ಕೌಶಲ್ಯದ ಪರಿಮಿತಿಯಲ್ಲಿ, ನನ್ನಲ್ಲಿ ಇನ್ನೂ ಏನೋ ಉಳಿದುಕೊಂಡಂತೆ. ಹೀಗಾಗಿ ಕಥಾಲೋಕದಲ್ಲಿ ನನ್ನನ್ನು ಇನ್ನೂ ಹೆಚ್ಚು ಹೂಚೇ ಹೂಚಾಗಿ ತೆರೆದುಕೊಳ್ಳಬಹುದೇನೋ ಅನ್ನಿಸುವದಿದೆ. ಆದರೆ ನಾನಿನ್ನೂ ಪ್ರಯೋಗಕ್ಕಿಳಿದಿಲ್ಲ. ಮನಸ್ಸಂತೂ ಖಂಡಿತ ಇದೆ.

ಮನೆಗೆ ಬರುವ ಒಂದಿಲ್ಲೊಂದು ಪುಸ್ತಕದ ಮೇಲೆ ಕಣ್ಣು ಹಾಯಿಸುತ್ತಿದ್ದೆ. ಆದರೆ ನಾನೂ ಬರೆಯಬೇಕು, ನನ್ನ ಬರವಣಿಗೆಗೆ ಈ ಓದು ಹಿನ್ನೆಲೆಯಾಗಬೇಕು ಅನ್ನುವ ದೃಷ್ಟಿಯಿಂದ ಓದಲಿಲ್ಲ. ಹೀಗಾಗಿ ಯಾವುದೇ ತತ್ವ-ಸಿದ್ಧಾಂತ, ಮೀಮಾಂಸೆಗಾಗಿ ತಲೆಕೆಡಿಸಿಕೊಳ್ಳಲೇ ಇಲ್ಲ. ಓದಿದೆ, ರಸದಲ್ಲಿ ತೇಲಿದೆ, ಭಾವನೆಗಳಲ್ಲಿ ಲೀನವಾದೆ. ಆದರೂ ನಾನು ನಾನಾಗೇ ಉಳಿದೆ. ಆದ್ದರಿಂದ ನವ್ಯದ ಗೂಢತೆ, ಬಂಡಾಯದ ಆಕ್ರೋಶ ಯಾವುದನ್ನೂ ನನ್ನದಾಗಿಸಿಕೊಳ್ಳದೆ, ಈ ನಡುವಿನ ನನ್ನದೇ ಆದ ದಿಶೆಯಲ್ಲಿ ಸಾಗುತ್ತಿದ್ದೇನೆ.

ಇನ್ನೊಬ್ಬರ ದುಃಖ ದುಮ್ಮಾನ, ನೋವು ತಲ್ಲಣಗಳಿಗೆ ಮಾತಿನ ರೂಪ ಕೊಡುವುದಷ್ಟೇ ಮುಖ್ಯವೇ ಹೊರತು ಇನ್ನಾವುದೇ ಮಹತ್ವಾಕಾಂಕ್ಷೆ ನನ್ನಲ್ಲಿ ಇಲ್ಲ. ಹೀಗಾಗಿ ಈ ಶ್ರೇಷ್ಠ ಸಾಹಿತ್ಯ, ಜನಪರ ಸಾಹಿತ್ಯ ಈ ದ್ವಂದ್ವಗಳೆಲ್ಲ ನನ್ನನ್ನು, ಬಾಧಿಸುವುದಿಲ್ಲ. ನನ್ನದಿಷ್ಟೆ:ನನ್ನ

ಅಂತರಂಗದ ಅಭಿವ್ಯಕ್ತಿ ಸಾಮಾಜಿಕ ಸ್ಪಂದನವಾಗಬೇಕು. ನನ್ನ ವೇದನೆ ಓದುಗರ ಸಂವೇದನೆಯಾಗಬೇಕಾದ್ದರಿಂದ ಕೇವಲ ನನ್ನ ಅಪ್ಪಟ ಅನುಭವದ ಹಿನ್ನೆಲೆಯಲ್ಲಿ, ನನ್ನ ಖಾಸಾ ಅನುಭವದ ಹಿನ್ನೆಲೆಯಲ್ಲಿ ನನ್ನದೇ ಶೈಲಿಯಲ್ಲಿ ನನಗಿಂದು ಬರೆಯಲು ಸಾಧ್ಯವಾಗಿದೆ.

ಈ ವರೆಗೆ ಹೀಗೆ. ಮುಂದೆ ಹೇಗೋ?

## ನಿರಾಶಾದಾಯಕ ವಾತಾವರಣವೇನೂ ಇಲ್ಲ

● ಮಮತಾ ಜಿ. ಸಾಗರ

ಸಾಮಾನ್ಯವಾಗಿ ಹೊಸದೇನನ್ನಾದರೂ ಗುರುತಿಸಬೇಕಾದರೆ, ಈಗಾಗಲೇ ಚಾಲ್ತಿಯಲ್ಲಿ ಇರುವಂಥದ್ದಕ್ಕೆ ಹೋಲಿಸಲಾಗುತ್ತದೆ. ಚಾಲ್ತಿಯಲ್ಲಿರುವಂಥಾದ್ದು ಅಸಾಮಾನ್ಯದ್ದಾದರೆ, ಅಂದರೆ; ಒಂದಾ, ಆ ಸರಕು ಉಳಿದೆಲ್ಲವನ್ನೂ ಹತ್ತಿಕ್ಕಿ ದೀರ್ಘ ಕಾಲದವರೆಗೆ ಮಾರುಕಟ್ಟೆಯನ್ನು ಮೊನಾಪೊಲೈಜ್ ಮಾಡಿದಾಗ (ಕೋಕಾಕೋಲದ ಹಾಗೆ), ಬಳಕೆದಾರರು ವಿಧಿಯಿಲ್ಲದೆ ಅದಕ್ಕೆ ಒಗ್ಗಿ ಹೋಗುತ್ತಾರೆ. ಅಥವಾ ಬಳಸುವವರು ಈ ರೀತಿಯ ಅಡಿಕ್ಷನ್ನಿಗೆ ಒಳಗಾದಾಗ, (ಮಸಾಲೆ ಪುಡಿಗಳು, ಸಿಗರೇಟು, ಚಹಾ ಅಥವಾ ಕಾಫಿ ಪುಡಿಗಳ 'ಬ್ರಾಂಡ್ ನೇಮ್'ಗೆ ಅಡಿಕ್ಟ್ ಆಗುವ ಹಾಗೆ) ಅನಂತರ ಹೊಸದು ಏನೇ ಬಂದರೂ, ಅವರಿಗೆ ಹಳೆಯದ್ದೇ ಛಲೋ ಅನ್ನಿಸುತ್ತದೆ. ಹೊಸದನ್ನು ಗುರುತಿಸುವಾಗ, ಸಾಮಾನ್ಯವಾಗಿ ಚಾಲನೆಯಲ್ಲಿರುವ ಹಳೆಯದಕ್ಕೆ ಹೋಲಿಸಲಾಗುತ್ತದೆ. ಹೀಗಾಗಿ, ಹೊಸ (ವಿಚಾರ)ದು ಏನೇ ಹುಟ್ಟಿದರೂ ಸಹ, ಅದು ತನ್ನ ಬುನಾದಿಯನ್ನು ಭದ್ರಪಡಿಸಿಕೊಳ್ಳುವವರೆಗೆ, ಗುಮಾನಿ ಅಸಮಾಧಾನ ಅತೃಪ್ತಿಗಳನ್ನು ಎದುರಿಸಲೇಬೇಕಾಗುತ್ತದೆ. ಉಳಿದೆಲ್ಲ ಸರಕುಗಳ ಹಾಗೆ ಸಾಹಿತ್ಯವೂ ಒಂದು ಸಾಮಾಜಿಕ ಸರಕು. ಈವರೆಗೂ ಕನ್ನಡದ ಸಾಹಿತ್ಯ ಹಾಗೂ ಸಾಂಸ್ಕೃತಿಕ ವಲಯಗಳಲ್ಲಿ ಪ್ರಚಾರದಲ್ಲಿರುವ ವ್ಯಕ್ತಿಕೇಂದ್ರಿತ ಸಾಹಿತ್ಯವು ತನ್ನದೇ ಆದ ರೀತಿಯಲ್ಲಿ ಕನ್ನಡ ಸಾಹಿತ್ಯವನ್ನು ರೂಪಿಸುತ್ತಾ ಬಂದಿದೆ.

'ಸಾಹಿತ್ಯವನ್ನು ಪರಿಗಣಿಸುವಾಗ ಅದು ಹೆಣ್ಣು ಬರೆದದ್ದೋ, ಗಂಡು ಬರೆದದ್ದೋ, ಯಾವ ಜಾತಿಯವರು ಬರೆದದ್ದು ಎಂಬುದು ಮುಖ್ಯವಲ್ಲ. ಅದು 'ಉತ್ತಮ' ಸಾಹಿತ್ಯವಾಗಿರುವದಷ್ಟೇ ಮುಖ್ಯ-ಎಂಬಂಥಾ ಮಾತುಗಳನ್ನು ಕೇಳುತ್ತಲೇ ನಾವು ಕೆಲವರು ಬರೆಯಲಾರಂಭಿಸಿದ್ದು. ಎಷ್ಟೇ ಕಷ್ಟಪಟ್ಟರೂ ಈ 'ಉತ್ತಮ' ಸಾಹಿತ್ಯವನ್ನು ಬರೆಯುವುದು ಆಗುತ್ತಲೇ ಯಿರಲಿಲ್ಲ. ಪ್ರಪಂಚವನ್ನು ಮುಖ್ಯವಾಗಿ ಸ್ತ್ರೀ-ಪುರುಷ ಸಂಬಂಧಗಳನ್ನು ಕೇವಲ ಪುರುಷರ

ದೃಷ್ಟಿಕೋನದಿಂದ ಮಾತ್ರ ಅರ್ಥ ಮಾಡಿಕೊಳ್ಳುವುದು 'ಉತ್ತಮ ಸಾಹಿತ್ಯ'ದ ಬಹುಮುಖ್ಯ ಲಕ್ಷಣ' ಅನ್ನುವುದನ್ನು ತಿಳಿಯಲು ಹೆಚ್ಚು ಸಮಯ ಬೇಕಾಗಲಿಲ್ಲ. ಹೀಗೆ ವ್ಯಕ್ತಿಕೇಂದ್ರಿತ ಹಾಗೂ ಪುರುಷ ಕೇಂದ್ರಿತ ನವ್ಯದ ಹಿನ್ನೆಲೆಯಲ್ಲಿ ಬರವಣಿಗೆಯನ್ನು ಆರಂಭಿಸಿದ ಹೆಚ್ಚು ಕಡಿಮೆ ಎಲ್ಲ ಬರಹಗಾರ್ತಿಯರೂ, ಈ 'ಉತ್ತಮ ಸಾಹಿತ್ಯ'ದ ಅಧಮ ಲಕ್ಷಣಗಳನ್ನು ಅರ್ಥೈಸಿಕೊಳ್ಳುವ ಪ್ರಕ್ರಿಯೆಯಲ್ಲಿ, ಕ್ರಮೇಣ ಇದರ ಮಾಯಾಜಾಲದಿಂದ ಹೊರಬಂದಿದ್ದಾರೆ. 'ಮಹಿಳಾ ಸಾಹಿತ್ಯ'ವೆಂಬ ನಿರ್ದಿಷ್ಟ ವರ್ಗದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ.

'ಸಾಹಿತ್ಯ'ವು ವಿಶೇಷವಾದ್ದು, ಅದು ಎಲ್ಲ ರೀತಿಯ ಗಡಿಗಳನ್ನೂ ಮೀರಬಲ್ಲಂಥ ಶಕ್ತಿಯನ್ನುಳ್ಳ ಸಾರ್ವಕಾಲಿಕವಾದ ಅನುಭವವನ್ನು ಒಳಗೊಂಡ ವಿಶಿಷ್ಟವಾದ ವರ್ಗ-ಅನ್ನುವ ಇಲ್ಲಿಯವರೆಗಿನ ಮೂಲಭೂತ ನಂಬಿಕೆಯ ಬುನಾದಿಯನ್ನೇ ಹೊಸ ಬರವಣಿಗೆಯು ಪ್ರಶ್ನಿಸುತ್ತಿದೆ. ಬದಲಿಗೆ, ಸಾಹಿತ್ಯವು ನಿರ್ದಿಷ್ಟತೆಗಳಲ್ಲಿ ಬೇರುಬಿಟ್ಟಂಥಾ ಬಹು ಆಯಾಮಗಳ ನ್ನುಳ್ಳಂಥಾ ಬಹುಮುಖೀನ ವರ್ಗ. ಇದರ ರೂಪು, ರೇಖೆ, ಅರ್ಥಗಳು ಸಾಮಾಜಿಕ ಸಂದರ್ಭಗಳಿಗನುಗುಣವಾಗಿ ಬದಲಾಗುತ್ತಿರುತ್ತವೆ ಎಂಬುದನ್ನು ಹೊಸ ಬರವಣಿಗೆಯು ಸ್ಪಷ್ಟಪಡಿಸುತ್ತಿದೆ. ಪ್ರತಿಯೊಂದು ಆಲೋಚನ ಮಾದರಿಯ ತಾತ್ವಿಕ ನಿಲುವೂ ವಿಭಿನ್ನವಾಗಿರುವುದರಿಂದ, ಅದಕ್ಕೆ ಸಂಬಂಧಿಸಿದಂತೆ ಅದರ ಪರಿಕರಗಳೂ ದೃಷ್ಟಿಕೋನವೂ ಬದಲಾಗುತ್ತದೆ. ಈ ಬದಲಾವಣೆಯನ್ನು ಒಪ್ಪಿಕೊಳ್ಳದೇ ಹೋದಲ್ಲಿ, ಕನ್ನಡದಲ್ಲಿ ಹೊಸದಾಗಿ ಸಾಹಿತ್ಯ ಸೃಷ್ಟಿಸುವವರಿಗೆ ನಿರಾಶಾದಾಯಕವಾದ ಗೊಂದಲಮಯವಾದ ವಾತಾವರಣ ಇದೆ ಅನ್ನಿಸುವುದು ಸಹಜ.

ನನ್ನ ಮೊದಲ ಕವನ ಸಂಕಲನ 'ಕಾಡ ನವಿಲಿನ ಹೆಜ್ಜೆ' ಪ್ರಕಟವಾದ ಸಂದರ್ಭದಲ್ಲಿ ಅದರಲ್ಲಿದ್ದ ಕವನಗಳಲ್ಲಿ ಬಳೆಗಳ ಧ್ವನಿಯಿಲ್ಲ, ಗೆಜ್ಜೆಯ ಸದ್ದಿಲ್ಲ, ಹೂವಿನ ಕಂಪಿಲ್ಲ... ಅದಿಲ್ಲ...ಎಂದು ಒಬ್ಬ ವಿಮರ್ಶಕರು ಬರೆದಿದ್ದರು. ಚಂಪಾವತಿ ಬರೆದ 'ಶಿವಗಂಗ' ಕಾದಂಬರಿಯಲ್ಲಿನ ಒಂದು ಸಂದರ್ಭವನ್ನು ಗಮನಿಸುತ್ತಾ, ಹೆಂಗಸರನ್ನು ಲೇಬರ್ ವಾರ್ಡಿಗೆ ಕೊಂಡೊಯ್ಯುತ್ತಿರುವಾಗ ಆ ಪ್ರಸವ ವೇದನೆಯಲ್ಲೂ, ಕಾದಂಬರಿಯ ಮುಖ್ಯ ಪಾತ್ರದ ಹೆಣ್ಣುಮಗಳು 'ಲೇಬರ್' ಪದದ ಬಗ್ಗೆ ಅಷ್ಟೊಂದು ಆಲೋಚಿಸುವುದು ಕೃತಕವಾಗಿ ಕಾಣುತ್ತದೆ ಎಂಬ ರೀತಿಯಲ್ಲಿ, ಒಬ್ಬ ವಿಮರ್ಶಕರು ತಮ್ಮ ಲೇಖನದಲ್ಲಿ ಅನುಮಾನವನ್ನೂ ಆಶ್ಚರ್ಯವನ್ನೂ ವ್ಯಕ್ತಪಡಿಸಿದ್ದ ನೆನಪು. ಮಹಿಳೆಯರ ಸಾಹಿತ್ಯದಲ್ಲಿ ಇಂಥಿಂಥಾದ್ದೇ ಇರಬೇಕು, ಅವರ ಬರವಣಿಗೆ ಹೀಗೇ ಇರಬೇಕು, ಅವರ ಆಲೋಚನಾ ದೃಷ್ಟಿಯೂ ಇದೇ ರೀತಿಯಲ್ಲಿರಬೇಕು ಎಂಬ ಕೆಲವು ನಿರ್ದಿಷ್ಟವಾದ ಕರಾರುವಾಕ್ಕಾದ ನಿಯಮಗಳು ಹುಟ್ಟಿಕೊಳ್ಳುತ್ತವೆ. ಮಹಿಳೆಯರ ಬರವಣಿಗೆ ಸಹ ಅವರ ಅನುಭವ ಮತ್ತು ಹಿನ್ನೆಲೆಯನ್ನು ಆಧರಿಸಿದ್ದಾಗಿರುತ್ತದೆ. ಈ ಅನುಭವ ಹಾಗೂ ಹಿನ್ನೆಲೆಗಳು ಸಮಯ, ಸಂದರ್ಭ ಮತ್ತು ಸಾಮಾಜಿಕ ಹಿನ್ನೆಲೆಗನುಗುಣವಾಗಿ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಆದ್ದರಿಂದ ಮಹಿಳೆಯರ ಬರವಣಿಗೆಯೂ ಸಹ (ಹೋಮೋಜೀನಿಯಸ್) ಆಗಿರುವುದಿಲ್ಲ ಅನ್ನುವುದನ್ನು ಕನ್ನಡ ಸಾಹಿತ್ಯವು ಸಂದರ್ಭವು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬೇಕಾಗಿದೆ.

ಯಾವುದೇ ಸಂಸ್ಕೃತಿಯಾದರೂ ಏಕಮುಖೀನವಾಗಿರುವುದಿಲ್ಲ. ಅದಕ್ಕೆ ಬದಲಾಗದ ನಿರ್ದಿಷ್ಟವಾದ ರೂಪವಿರುವುದಿಲ್ಲ. ಸಂಸ್ಕೃತಿಯನ್ನು ಪ್ರತಿನಿಧಿಸುವ ಭಾಷೆ ಅಥವಾ ರಾಜ್ಯವು ವಿಭಿನ್ನ ಸಾಮಾಜಿಕ ಹಿನ್ನೆಲೆಗಳನ್ನುಳ್ಳ ಅನುಭವಗಳನ್ನು ಪ್ರತಿನಿಧಿಸುತ್ತಿರುತ್ತದೆ. ಆದ್ದರಿಂದ, ಭಾಷೆ ಅಥವಾ ರಾಜ್ಯವು ಪ್ರತಿನಿಧಿಸುವ ಸಂಸ್ಕೃತಿಗೂ ಸಹ ಹತ್ತು ಹಲವು ಆಯಾಮಗಳಿರುತ್ತವೆ. ಸಾಹಿತ್ಯವೂ ಸಹ ಸಂಸ್ಕೃತಿಯನ್ನು ಪ್ರತಿನಿಧಿಸುವ ಮತ್ತೊಂದು ಆಯಾಮವಾದ್ದರಿಂದ, ಸಂಸ್ಕೃತಿಯ ಹಾಗೆ ಸಾಹಿತ್ಯದ ಅರ್ಥವೂ ಸಮಯ, ಸಂದರ್ಭ ಮತ್ತು ಬರೆಯುವವರ ಹಾಗೂ ಅರ್ಥಮಾಡಿಕೊಳ್ಳುವವರ ಹಿನ್ನೆಲೆಗನುಗುಣವಾಗಿ ಬದಲಾಗುತ್ತದೆ.

ಆರ್ಥಿಕ-ಸಾಮಾಜಿಕ ಹೈರಾರ್ಕಿ ಬದಲಾಗುತ್ತಿರುವ ಈ ಸಂದರ್ಭದಲ್ಲಿ ಮಹಿಳೆಯರು ಮತ್ತಿತರ ವರ್ಗಗಳಿಗೆ ಸಂಬಂಧಿಸಿದವರು ರಾಜಕೀಯ ಹಾಗೂ ಸಾಮಾಜಿಕ ಕಾಳಜಿಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬಲ್ಲರು ಎಂಬುದನ್ನು ನಾವು ಮರೆಯಬಾರದು. ಈ ಬದಲಾವಣೆಗೊಂದು ಖಚಿತತೆಯನ್ನು ಹೊಸ ಸಾಹಿತ್ಯವು ನಿರೂಪಿಸುತ್ತಿದೆ.

ಇತ್ತೀಚೆಗೆ ಪ್ರಕಟಗೊಂಡ ಪ್ರಕಾಶ್ ಮೇಹು ಅವರು ಬರೆದ 'ತಿಮ್ಮಜ್ಜಿಯ ಮ್ಯಾಗ್ಲುಂಡಿ' ಮತ್ತು 'ಶಿವಗಂಗ' ಕೃತಿಗಳನ್ನು ನೋಡಿದರೆ, ಈಗ ಕನ್ನಡದಲ್ಲಿ ಹೊಸದನ್ನು ಹೊಸ ರೀತಿಯಲ್ಲಿ ಹೇಳುವ ಅವಕಾಶ ಹೇರಳವಾಗಿದೆ ಅನ್ನಿಸುತ್ತದೆ. ಈಗಾಗಲೇ ದಲಿತ, ಬಂಡಾಯ, ಮುಸ್ಲಿಂ, ಮತ್ತಿತರ ಹಲವು ಧ್ವನಿಗಳು ಸಾಹಿತ್ಯದ ವಿವಿಧ ಆಯಾಮಗಳನ್ನು ತೆರೆದಿಟ್ಟಿವೆ. ಈ ಎಲ್ಲ ಗುಂಪುಗಳ ಹಿನ್ನೆಲೆಯಿಂದ ಮಹಿಳೆಯರು ಬರೆಯುತ್ತಿರುವುದರಿಂದ, ಮಹಿಳಾ ಬರವಣಿಗೆಯೂ ಸಹ ವಿಶೇಷ ರೀತಿಯಲ್ಲಿ ರೂಪುಗೊಳ್ಳುತ್ತಿದೆ. ಆದ್ದರಿಂದ ಮಹಿಳೆಯರಿಗಂತೂ ಇದು ತೆರೆದಿಟ್ಟ ಅವಕಾಶ.

ಸಾಹಿತ್ಯದಲ್ಲಿ ಸಾಮಾನ್ಯವಾಗಿ ದಲಿತ ಹಾಗೂ ಇತರ ಮಾರ್ಜಿನಲೈಸ್ಡ್ ವರ್ಗಕ್ಕೆ ಸೇರಿದವರನ್ನು ಸಾಮಾಜಿಕ ದುಷ್ಕರ್ಮಿಗಳನ್ನಾಗಿ ನೋಡುತ್ತಿದ್ದ ಕಾಲ ಬದಲಾಗುತ್ತಿದೆ. ಆದರೂ, ಹೆಂಗಸರನ್ನು ಮತ್ತು ನಿರ್ದಿಷ್ಟವಾಗಿ ಕೆಳವರ್ಗ/ಕೆಳಜಾತಿಯ ಹೆಂಗಸರನ್ನು ಭೋಗದ ವಸ್ತುವಾಗಿ ಕಾಣುವ ದೃಷ್ಟಿಯಲ್ಲಿ ಹೆಚ್ಚೇನೂ ಬದಲಾವಣೆ ಕಂಡು ಬರುವುದಿಲ್ಲ. ಈ ಮನೋಭಾವವನ್ನು ಮಹಿಳೆಯರು ತಮ್ಮ ಬರವಣಿಗೆಯಲ್ಲಿ ಹಿಂದಿನಿಂದಲೂ ಧಿಕ್ಕರಿಸುತ್ತ ಬಂದಿದ್ದಾರೆ. ಇದಕ್ಕೆ ಪ್ರತಿಯಾಗಿ, ನಾವು ಕಾಣುವುದೇನೆಂದರೆ, ಲೇಖಕಿಯರು ಅಂದ ಕೂಡಲೇ ಅವರನ್ನು ಪುರುಷ ಪ್ರಧಾನ ಏಜೆನ್ಸಿಗಳನ್ನು ಪ್ರಶ್ನಿಸುವ, ಧಿಕ್ಕರಿಸುವ ಕ್ಯಾಟಗರಿಯಾಗಿ ಮಾತ್ರ ಕಾಣಲಾಗುತ್ತದೆ.

ಇದು ಬಹಳಾ ಮುಖ್ಯ ನಿಜ, ಆದರೆ ಅವರ ಬರವಣಿಗೆಯನ್ನು ಇಷ್ಟಕ್ಕೇ ಸೀಮಿತಗೊಳಿಸುವುದು ಸರಿಯಲ್ಲ. ಸರಸ್ವತಿ, ಪ್ರತಿಭಾ, ಪುಷ್ಪ, ಸರ್ವಮಂಗಳ, ಹೇಮಾ, ಕಮಲ ಹೆಮ್ಮಿಗೆ, ಕಮಲ, ಉಷಾ, ಇನ್ನೂ ಎಷ್ಟೋ ಜನರ ಕವಿತೆಗಳು, ವೈದೇಹಿ ಬರೆದ 'ಅಸ್ಪೃಶ್ಯರು', ಸವಿತಾ ನಾಗಭೂಷಣ ಬರೆದ 'ಸ್ತ್ರೀಲೋಕ', ಚಂಪಾವತಿ ಬರೆದ 'ಶಿವಗಂಗ', ಮಹಿಳೆಯರೊಂದಿಗೆ ಸಂಯೋಜಿತವಾದ ಪ್ರಪಂಚದ ಹತ್ತು ಹಲವು ಆಯಾಮಗಳನ್ನು ತೆರೆದಿಡುತ್ತವೆ.

ಕನ್ನಡದಲ್ಲಿ ಮಹಿಳೆಯರು ತಮ್ಮ ಬರವಣಿಗೆಯಲ್ಲಿ ವರ್ಗ ಮತ್ತು ಜಾತಿಯ ಬಗ್ಗೆ ಸೆನ್ಸಿಟಿವ್ ಆಗಿರುವಷ್ಟು ಪುರುಷ ಲೇಖಕರು ತಮ್ಮ ಬರವಣಿಗೆಯಲ್ಲಿ ಲಿಂಗಭೇದವನ್ನು ಕುರಿತಂತೆ ಸೆನ್ಸಿಟಿವ್ ಆಗಿಲ್ಲ.

ಈವರೆಗೆ ನನ್ನ ಎರಡು ಕವನಸಂಕಲನಗಳು ಮತ್ತು ಒಂದು ಮಕ್ಕಳ ನಾಟಕ ಪುಸ್ತಕ ರೂಪದಲ್ಲಿ ಹೊರಬಂದಿವೆ. ಮೂರೂ ಪುಸ್ತಕಗಳನ್ನು ಮೂವರು ಬೇರೆ ಬೇರೆ ಪ್ರಕಾಶಕರು ಹೊರತಂದಿದ್ದಾರೆ. ಹೊಸ ಧ್ವನಿಗೆ ಅವಕಾಶ ಕಲ್ಪಿಸುತ್ತಿರುವ ಪ್ರಕಾಶಕರನ್ನೂ ಕನ್ನಡ ಸಾಹಿತ್ಯದ ಈಗಿನ ಬರವಣಿಗೆಗೆ ಸಂಬಂಧಿಸಿದಂತೆ ಸ್ಪರ್ಧೆಗಳನ್ನು ಏರ್ಪಡಿಸಿ (ಆಯ್ಕೆಗೆ ಸಾಧಾರಣವಾಗಿ ಯಾವುದೇ ನಿರ್ದಿಷ್ಟವಾದ ಸ್ಕೇಲ್ ಇಲ್ಲದೆ ಹೋದರು ಸಹ) ಲೇಖಕರನ್ನು ಪ್ರೋತ್ಸಾಹಿಸುತ್ತಾ ಬಂದಿವೆ.

ಯಾವುದೇ ಕಾಲದಲ್ಲಾಗಲಿ ಸೃಷ್ಟಿಗೊಳ್ಳುವ ಬರವಣಿಗೆಯ ಮೇಲೆ ಆಯಾ ಕಾಲದ ತಾತ್ವಿಕ ನಿಲುವುಗಳು ಪ್ರಭಾವ ಬೀರುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದರೆ, ಕನ್ನಡ ಸಾಹಿತ್ಯದ ಸೃಜನಶೀಲತೆಯು ಈಗ, ಹೊಸ ದಿಕ್ಕಿನಲ್ಲಿ ರೂಪುಗೊಳ್ಳುತ್ತಿದೆ. ಆದ್ದರಿಂದ ಕನ್ನಡದಲ್ಲಿ ಹೊಸದಾಗಿ ಸಾಹಿತ್ಯ ಸೃಷ್ಟಿಸುವವರಿಗೆ ನಿರಾಶಾದಾಯಕವಾದ ಗೊಂದಲಮಯವಾದ ವಾತಾವರಣವೇನೂ ಇಲ್ಲ. ಬದಲಿಗೆ ತಾವು ಏನನ್ನು, ಏಕೆ ಮತ್ತು ಹೇಗೆ ಬರೆಯಬೇಕು ಎಂಬುದರ ಬಗ್ಗೆ ಕೊಂಚ ಎಚ್ಚರಿಕೆಯಿಂದ ಇದ್ದರೆ, ಅವಕಾಶ ನಿಜಕ್ಕೂ ಇದೆ ಎಂದು ನನಗನ್ನಿಸುತ್ತದೆ.

●

## ಕೆಳಗಡೆ ಇಳಿದು ನಡೆದಾಡುತ್ತ ಬರೆಯಬೇಕು

● ಸೋಪಲೆ ಗಂಗಾಧರ

ಒಬ್ಬ ಬರಹಗಾರ ಮೊದಲು ತನಗೇನನ್ನಿಸುತ್ತದೋ ಅದನ್ನು ಪಕ್ವ ಮಾಡಿಕೊಂಡು ಅನಂತರ ತನ್ನನ್ನು ಮಧ್ಯಸ್ತಿಕೆಯಾಗಿಟ್ಟುಕೊಂಡು ತನ್ನತನವನ್ನು ಹಾಗೂ ಸಮಾಜವನ್ನು ತೂಗುತ್ತಲೇ ತನ್ನತನವನ್ನು ಮೇಲುಗೈ ಮಾಡಿಕೊಂಡು ಬರೆಯುತ್ತಾನೆ. ಇದು ಎಲ್ಲ ಬರಹಗಾರರ ಸ್ವಾಭಾವಿಕ ಗುಣ.

ಅವರ ಅನಿಸಿಕೆ ಹಾಗೂ ಬರವಣಿಗೆ ಗತಕಾಲದ್ದಿರಬಹುದು, ಪ್ರಸ್ತುತದ್ದಿರಬಹುದು, ಅಥವಾ ಮುಂದಿನ ಕಾಲದ್ದಿರಬಹುದು, ಅವುಗಳನ್ನು ಒಟ್ಟಾರೆ ಯಾವ ರೀತಿ ನಿರೂಪಿಸಿ ಓದಿನ ವಲಯಕ್ಕೆ ಹರಡುತ್ತಾನೋ ಅದು ಅವನ ಗ್ರಹಿಕೆಗೆ, ಸಮಾಜದೊಂದಿಗಿನ ಸಂಬಂಧಕ್ಕೆ ಮತ್ತು ಅವನ ಅನುಭವಕ್ಕೆ ಸೇರಿದ್ದು. ಹೊಸದಾಗಿ ಸಾಹಿತ್ಯ ಸೃಷ್ಟಿಸುವವರಿಗೆ ಗೊಂದಲವಿದೆ. ಅದರದ್ದು ನಾನಾಪರಿ. ಮನಸ್ಸಿಗೆ ಏನನ್ನಿಸುತ್ತದೊ ಅದೆಲ್ಲವನ್ನೂ ಬರೆಯಬಹುದು. ಆದರೆ ಪ್ರಸ್ತುತವು ಹೇಗೆ ಸ್ವೀಕರಿಸುತ್ತದೆ? ಹೇಗೆ ಪ್ರತಿಕ್ರಿಯಿಸುತ್ತದೆ? ನಾನು ಬರೆದದ್ದು ಮತ್ತೊಬ್ಬರ

ರೀತಿಯದೆ? ಹೀಗೆ ಒಂದಕ್ಕೊಂದು ಗೊಂದಲಗಳಿವೆ. ಬರೆಯುವಾಗ ಹುಟ್ಟಿಕೊಳ್ಳುವ ಗೊಂದಲಕ್ಕೆ ಅಪಕ್ವತೆಯೇ ಅಡ್ಡಗಾಲಾಗಿರುತ್ತದೆ. ಲೇಖಕನೊಳಗಿರುವ ವಿಷಯ, ಪದಬಳಕೆ, ಬರವಣಿಗೆಯ ವೇಗ ಈ ಮೂರು ಸಮತೋಲನದಲ್ಲಿದ್ದರೆ ಬರವಣಿಗೆ ಸಾಗುತ್ತದೆ. ಬರವಣಿಗೆಯ ವೇಗಕ್ಕಿಂತಲೂ ಮನಸ್ಸಿನ ವೇಗ ಹೆಚ್ಚಾಗಿದ್ದರೆ ಬರವಣಿಗೆ ನಿಂತೇ ಬಿಡುತ್ತದೆ. ಈ ದೃಷ್ಟಿಯಲ್ಲಿ ಹೊಸಬನಾದ ನಾನು ಮತ್ತು ನನ್ನಂತಹವರು ಅದರ ಸಮತೋಲನವನ್ನು ಒಗ್ಗಿಸಿಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಹೊಸತನ, ಹೊಸ ಬರವಣಿಗೆ, ಹೊಸ ವಿಷಯ ನಮ್ಮೊಳಗೇ ಇದ್ದುಕೊಂಡು ನಮ್ಮನ್ನೇ ಸುಟ್ಟುಬಿಡುತ್ತವೆ.

ಸಾಹಿತ್ಯ ರಚನೆಯಲ್ಲಿ ಎರಡು ಪ್ರಧಾನ ಪ್ರಕಾರಗಳಿವೆ.

೧. ಅನುಭವ ಸಾಹಿತ್ಯ ೨. ಅನುಭಾವ ಸಾಹಿತ್ಯ. ಅನುಭವ ಸಾಹಿತ್ಯ ವಾಸ್ತವ ಸ್ತರಗಳದ್ದು. ಅನುಭಾವ ಸಾಹಿತ್ಯ ಅನುಭವದ ಮೂಲಕ ಅತೀಂದ್ರಿಯದ ಸ್ತರಗಳದ್ದು. ದೇಹ ಮತ್ತು ಅದರೊಳಗಿನ ಚೈತನ್ಯವಿರುವ ಹಾಗೆ ಒಂದಕ್ಕೊಂದು ಬೆಸೆದುಕೊಂಡಿವೆ. ಇವೆರಡರಲ್ಲಿ ಯಾವ ಪ್ರಕಾರದಲ್ಲಿ ಬರೆಯುವುದು ಉತ್ತಮ ಎನ್ನುವುದಕ್ಕಿಂತ ಬರಹಗಾರರು ಎರಡರೊಳಗೂ ಲೀನವಾಗಬೇಕೆನ್ನುವುದೇ ನನ್ನ ಅನಿಸಿಕೆ. ಸಾಹಿತಿ ಮತ್ತು ಅವನ ಸಾಹಿತ್ಯ ಹೇಗಿರಬೇಕು ಅಂದರೆ ನೀರಿನ ಒಳಗಡೆ ಉಪ್ಪನ್ನು ಬಚ್ಚಿಟ್ಟಂತೆ ಇರಬೇಕು. ಉಪ್ಪಿನ ಹರಳು ನೀರಿನಲ್ಲಿ ಕರಗಿಹೋದರೂ ಅದು ನೀರಿನ ಒಂದೊಂದು ಪರಮಾಣುವಿನಲ್ಲೂ ಬೆರೆತುಕೊಂಡಿರುವಂತೆ ಸಾಹಿತಿ ಮತ್ತು ಸಾಹಿತ್ಯ ಸಮಾಜದೊಳಗೆ ಲೀನವಾಗಿ ಬಿಡಬೇಕು. ಜೀವ ಮತ್ತು ಜೀವನ ನಿಂತಿರುವುದೇ ಅನುಭವ, ಅನುಭಾವದ ಮೇಲೆಯೇ ತಾನೆ. ಒಬ್ಬ ಬರಹಗಾರ ತಾನು ಹೆಚ್ಚು ಕಾಲ ಬೆಳೆದ ಪರಿಸರದಿಂದಲೋ ಅಥವಾ ಹೆಚ್ಚು ಅಭ್ಯಸಿಸಿದ ವಿಷಯಾಧ್ಯಯನದ ಅವಲೋಕನದಿಂದಲೋ ಕಾವ್ಯಕ್ಷೇತ್ರಕ್ಕೆ ಪರಿಚಯವಾಗುತ್ತಾನೆ. ಯಾವ ಪ್ರಕಾರದಲ್ಲಿ ಬರೆದರೆ ಹೆಚ್ಚು ಶಕ್ತಿಯುತ ಎನ್ನುವುದಕ್ಕೆ ಬದಲಾಗಿ ನನ್ನದೊಂದು ಮಾತಿದೆ. ಈಗ ಶಕ್ತಿ ಎನ್ನುವುದು ಯಾವ ಪ್ರಕಾರದಲ್ಲಿದೆ ಎಂಬುದು. ನಿಜವಾಗಿ ಶಕ್ತಿ ಎಂಬುದು ಸರ್ವ ಪ್ರಕಾರದ್ದು. ಹಿರಿಯರು ಕಿರಿಯರ ಮಾರ್ಗವಾಗಬೇಕು. ಅವರನ್ನು ಸರಿಯಾದ ದಿಕ್ಕಿನಲ್ಲಿ ನಡೆಸಬೇಕು. ಒಬ್ಬರು ಮತ್ತೊಬ್ಬರನ್ನು ಮೇಲೆತ್ತುವ ಕೆಲಸ ಮಾಡಿದರೆ, ಒಬ್ಬರಿಗಿಂತ ಮತ್ತೊಬ್ಬರು ಅತಿರಥ ಮಹಾರಥರುಗಳಾಗಿ ಕಟ್ಟುವ ಕರೆಗೊಂದು ಕಲ್ಲು ಹೊರುತ್ತಾರೆ. ಕನ್ನಡ ಸಾಹಿತ್ಯ ವಲಯ ಗಟ್ಟಿಯಾಗುತ್ತದೆ. ಒಬ್ಬ ಲೇಖಕ ತನ್ನ ಜೀವಿತಾವಧಿಯಲ್ಲಿ ಒಂದೇ ಕೃತಿಯನ್ನು ಬರೆಯಲಿ, ಆ ಕೃತಿಯು ಒಬ್ಬ ತಾಯಿ ತನ್ನ ಮಗುವಿಗೆ ಜನ್ಮ ಕೊಡುವಾಗ ತನ್ನ ಜೀವವನ್ನು ಒತ್ತೆಯಿಟ್ಟು ಹಡೆಯುವುದಿಲ್ಲವೇ ಹಾಗೆ ಒಬ್ಬ ಲೇಖಕ ಒಂದು ಕೃತಿಯನ್ನು ಹಡೆಯಬೇಕು.

ಅದರ ಬದಲು ''ಕೃತಿ ಚಂದ ಕರ್ತೃ ಅಂಧ'' ಅಂತಾಗಿಬಿಟ್ಟರೆ. ಅದಕ್ಕೆ ಈಗ ನನಗನ್ನಿಸಿದ್ದನ್ನು ನೇರವಾಗಿ ಹೇಳುತ್ತೇನೆ.

''ನೀ ಬೆಟ್ಟದಾ ಮೇಲ್ನಿಂತು ನೋಡಿದರೆ ಜನಗಳಿರುವೆಗಳಂತೆ
ಜನರ ಜೊತೆ ಹರಿದಾಡುನೀ ದಿನಾ ಇರುವೆಯಂತೆ''

ಯಾರೆ ಆಗಲಿ ಬೆಟ್ಟದಮೇಲೆ ನಿಂತು ಬರೆಯಬಾರದು. ಕೆಳಗಡೆ ಇಳಿದು ನಡೆದಾಡುತ್ತಾ ಬರೆಯಬೇಕು ನುಡಿಯಬೇಕು. ಸರ್ವಜ್ಞ ನೆಲದ ಮೇಲೆ ನಡೆದೋನು ನುಡಿದೋನು. ಇಲ್ಲಿ ಎಲ್ಲರೂ ಪ್ರಜ್ಞಾವಂತರೇ. ಕೆಲವರ ನಡೆ ನುಡಿಗಳೇ ಕಾವ್ಯದಂತಿರುತ್ತದೆ. ಅದೆಲ್ಲವೂ ಹೊರ ಬರಲು ಹಿರಿಯರಿಂದ ನಿಸ್ವಾರ್ಥ ಪ್ರೋತ್ಸಾಹ ಕನ್ನಡ ಸಾಹಿತ್ಯದ ವಲಯಕ್ಕೆ ತುರ್ತಾಗಿಬೇಕಾಗಿದೆ.



## ಕಾವ್ಯ ತಾಯಿ ಕರುಳು ಹೊಂದಿರಬೇಕು

•ಪರಶುರಾಮ ಕಲಾಲ್

ಅನೇಕ ಶತಮಾನಗಳ ಹಿಂದೆ ಅಥೆನ್ಸಿನ ದಾರಿಯಲ್ಲಿ ಇಬ್ಬರು ಭೆಟ್ಟಿಯಾದರು. ಒಬ್ಬರನ್ನು ನೋಡಿ ಒಬ್ಬರಿಗೆ ತುಂಬಾ ಸಂತೋಷವಾಯಿತು.

ಒಬ್ಬ ಕವಿ ಮತ್ತೊಬ್ಬನನ್ನು ಕೇಳಿದ: ಏನಯ್ಯಾ, ಈಚೆಗೆ ಏನು ಬರೆದಿದ್ದೀಯೇ? ಅದು ನಿನ್ನ ಲೈರ್ (ತಂತಿ) ವಾದ್ಯದೊಂದಿಗೆ ಹೇಗೆ ಹೊಂದಿಕೊಳ್ಳುತ್ತದೆ?

ಇನ್ನೊಬ್ಬ ಕವಿ ಹೆಮ್ಮೆಯಿಂದ ಉತ್ತರ ಕೊಟ್ಟ "ನಾನು ಈಗ ತಾನೆ ನನ್ನ ಕಾವ್ಯಗಳಲ್ಲಿ ಅತ್ಯಂತ ಮಹಾಕಾವ್ಯವನ್ನು, ಬಹುಶಃ ಗ್ರೀಕ್‌ನಲ್ಲಿ ರಚಿತವಾದ ಕಾವ್ಯಗಳಲ್ಲೆಲ್ಲಾ ಮಹತ್ತಾದುದನ್ನು ಬರೆದು ಮುಗಿಸಿದ್ದೇನೆ. ಮಹಾದೇವತೆಯಾದ ಜ್ಯೂಸನ ಪ್ರಾರ್ಥನೆ ಅದು.

ಹೀಗೆ ಹೇಳಿ ತನ್ನ ಮೇಲಂಗಿ ಅಡಿಯಿಂದ ಚರ್ಮಕಾಗದ ತೆಗೆಯುತ್ತಾ ಹೇಳಿದ "ನೋಡಿಲ್ಲಿ, ಇದು ಇಲ್ಲಿದೆ. ನಾನು ಸಂತೋಷದಿಂದ ನಿನಗೆ ಓದಿ ಹೇಳುತ್ತೇನೆ. ಬಾ, ಆ ಬಿಳೀ ಸೈಪ್ರಸ್ ಮರದ ನೆರಳಿನಲ್ಲಿ ಕುಳಿತುಕೊಳ್ಳೋಣ."

ಕವಿ ತನ್ನ ಕಾವ್ಯವನ್ನು ಓದಿದ. ಅದು ದೀರ್ಘ ಕಾವ್ಯ. ತನ್ನ ದಯಾ ಸ್ವಭಾವದಿಂದ ಮತ್ತೊಬ್ಬ ಕವಿ ಹೇಳಿದ: "ಇದೊಂದು ಹಿರಿಯ ಕಾವ್ಯ. ಇದು ಯುಗ ಯುಗಗಳು ಬಾಳುತ್ತದೆ. ಅದರ ಮೂಲಕ ನಿನಗೂ ಕೀರ್ತಿ ಬರುತ್ತದೆ." ಈಗ ಮೊದಲ ಕವಿ ಶಾಂತವಾಗಿ ಹೇಳಿದ: "ಈಚೆಗೆ ನೀನು ಏನು ಬರೆಯುತ್ತಿದ್ದೀಯಾ...," ಮತ್ತೊಬ್ಬ ಉತ್ತರ ಕೊಟ್ಟ: "ಎಲ್ಲೋ ಸ್ವಲ್ಪ. ತೋಟದಲ್ಲಿ ಆಟವಾಡುತ್ತಿರುವ ಮಗುವನ್ನು ಕುರಿತು ಎಂಟು ಪಂಕ್ತಿಗಳು." ಅವನು ತನ್ನ ಪಂಕ್ತಿಗಳನ್ನು ಹೇಳಿದ. ಮೊದಲ ಕವಿ ಹೇಳಿದ: "ಪರವಾಗಿಲ್ಲ, ಪರವಾಗಿಲ್ಲ.." ಅವರು ಅಗಲಿದರು.

ಈಗ ಎರಡು ಸಾವಿರ ವರ್ಷಗಳಾದ ಮೇಲೆ ಆ ಎಂಟು ಪಂಕ್ತಿಗಳನ್ನು ಎಲ್ಲ ಭಾಷೆಗಳಲ್ಲೂ ಓದುತ್ತಾರೆ. ಇಷ್ಟಪಡುತ್ತಾರೆ. ನೆನೆಯುತ್ತಾರೆ. ಮತ್ತೊಂದು ಕಾವ್ಯವೂ ಯುಗಗಳನ್ನು ದಾಟಿ ಪುಸ್ತಕ ಭಂಡಾರಗಳಲ್ಲೂ, ವಿದ್ವಾಂಸರ ಕಿರುಕೋಣೆಗಳಲ್ಲೂ ಉಳಿದು ಬಂದಿದ್ದರೂ, ಅದನ್ನು ಎಲ್ಲ ಜ್ಞಾಪಿಸಿಕೊಳ್ಳುತ್ತಿದ್ದರೂ, ಅದನ್ನು ಯಾರು ಪ್ರೀತಿಸುವುದು ಇಲ್ಲ, ಓದುವುದು ಇಲ್ಲ. ಲೆಬನಾನಿನ ಕವಿ ಖಲೀಲ್ ಜಿಬ್ರಾನ್‌ನ "ಎರಡು ಕವನಗಳು" ಎಂಬ ದೃಷ್ಟಾಂತವಿದೆ.

ಕೋಮುವಾದಿಗಳು ತಮ್ಮ ರಕ್ತಸಿಕ್ತ ಕೈಗಳಿಂದ ಗುಜರಾತ್ ರಾಜ್ಯವನ್ನು ಪ್ರಯೋಗಾಲಯ ಮಾಡಿಕೊಂಡು ನರಮೇಧ ನಡೆಸುತ್ತಾ ಮುಂದಿನ ಭಾರತಕ್ಕೊಂದು ಭಾಷ್ಯ ಬರೆಯುತ್ತಿರುವಾಗ, ನಾವು ಕಾವ್ಯದಲ್ಲಿರುವ ರೂಪಕಗಳ ಮೂಲಕ ಅದು ದಲಿತ ವಿರೋಧಿಯೋ ಅಥವಾ ಬ್ರಾಹ್ಮಣ ಶಾಹಿಯೇ ಎಂಬ ಚರ್ಚೆ ಮಾಡುತ್ತಾ ಕಾಲಹರಣ ಮಾಡುತ್ತಿದ್ದೇವೆ. ನಾವು ಸಹ ಜನಪರ ಲೇಖಕರಾಗಿದ್ದೇವೆ. ಸಾಹಿತ್ಯ, ಚಳವಳಿಯ ಜೊತೆ ಬೆಳೆದಿದ್ದೇವೆ ಕೂಡಾ. ನಮ್ಮ ಸಾಹಿತ್ಯದಲ್ಲೂ ನಿಮಗೆ ಹೇರಳವಾಗಿ ದಲಿತ ಸಂವೇದನೆ, ಜನಪರ ಕಾಳಜಿ ಎಲ್ಲಾ ಸಿಗುತ್ತದೆ. 'ವಿಮರ್ಶೆ ಓದಿ ನಂತರ ಕೃತಿ ಓದಿ ಸ್ವಾಮಿ'- ಇಂತಹ ಸಾಹಿತ್ಯಿಕ, ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ನಾವಿದ್ದೇವೆ. ವರ್ತಮಾನಕ್ಕೆ ಮುಖಾಮುಖಿಯಾಗದೇ ಭೂತದ ಬೆನ್ನತ್ತಿ ಹುಡುಕಾಟ ನಡೆಸುವುದು ಇದು ಕೂಡಾ ಕೋಮುವಾದ. ಭೂತ ಎನ್ನುವಂತಾದ್ದು ನಮ್ಮ ಹೆಗಲ ಮೇಲೆ ಕುಳಿತಿರುವ ಕುರುಡನಂತೆ. ಅದು ದಾರಿ ತೋರಿಸುವುದಿಲ್ಲ. ವರ್ತಮಾನದಲ್ಲಿ ನಡೆದಾಡುವ, ನಾವೇ ದಾರಿ ಕಂಡುಕೊಳ್ಳಬೇಕು. ಕೋಮುವಾದವು ಜ್ವಾಲಾಗ್ನಿಯಾಗಿ ನಮ್ಮನ್ನು ಆವರಿಸಿ ಕೊಳ್ಳುತ್ತಿರುವಾಗ, ಅದು ನಮಗೆ ಸಂಬಂಧಿಸಿದ್ದಲ್ಲ ಎನ್ನುವಂತೆ ಬೇರೊಂದು ಬಗೆ ಆಲೋಚನೆ ಮಾಡುವುದು ಸಹ ಕೋಮು ವಾದದ ವಿಜಯವಾಗಿದೆ. ಅಷ್ಟರಮಟ್ಟಿಗೆ ಕೋಮುವಾದ ನಮ್ಮನ್ನು ಆಳುತ್ತಿದೆ. ಇವತ್ತು ಜಾಗತೀಕರಣ, ಖಾಸಗೀಕರಣ, ಉದಾರೀಕರಣ ಎಂಬ ತ್ರಿಕರಣ ಮಂತ್ರಗಳು ಜಪಿಸುತ್ತಲೇ ತ್ರಿಶೂಲ ಹಿಡಿದು ಮಧ್ಯಯುಗಕ್ಕೆ ಜನರನ್ನು ಕೊಂಡೊಯ್ಯಲು ಸ್ವದೇಶಿ ಹೆಸರಿನಲ್ಲಿ ಜೈ ಶ್ರೀರಾಮ್ ಎನ್ನುತ್ತಿರುವ ಅಧಿಕಾರರೂಢರಿಗೆ, ನಿಮ್ಮ ಸಾಹಿತ್ಯ ಕೆಲವೊಮ್ಮೆ ಮೆಟ್ಟಿಲಾಗಿ ಬಿಡಬಹುದು. ನಿಮ್ಮ ಸಂಸ್ಕೃತಿ ಚಿಂತನೆಯು ಅವರಿಗೆ ಅಸ್ತ್ರವಾಗಿ ಬಿಡಬಹುದು. ನಿಮ್ಮ ದೇಶಿ ಚಿಂತನೆ ಅವರು ಹೇಳುವ ಮೂಲಭೂತವಾಗಿ ಬಿಡಬಹುದು.

ಇವತ್ತಿನ ನಮ್ಮ ಮುಖ್ಯ ಶತ್ರುವಿಗೆ ಮುಖವೇ ಇಲ್ಲ. ಮುಖ ಇಲ್ಲದವರು, ಚಹರೆ ಇಲ್ಲದವರು, ನಮ್ಮ ಮುಖದ ಮೂಲಕ, ನಮ್ಮ ಚಹರೆಯ ಮೂಲಕ ಮಾತು ಆರಂಭಿಸಿದ್ದಾರೆ. ಮತ್ತು ಅವರು ಆಧುನಿಕ ಆವಿಷ್ಕಾರಗಳನ್ನು ಕೈಯಲ್ಲಿ ಹಿಡಿದುಕೊಂಡು ಅಧಿಕಾರಸ್ಥರಾಗಿ ಅತ್ಯಂತ ನಾಜೂಕುತನದಿಂದ ನಮ್ಮ ಭಾಷೆಯಲ್ಲಿ, ನಮ್ಮ ಸ್ವರದಲ್ಲಿ ಮಾತಾಡುತ್ತಿದ್ದಾರೆ. ನಮ್ಮ ನಂಬಿಕೆಗಳು, ನಮ್ಮ ಆಚಾರ, ವಿಚಾರಗಳು ಮಾರಾಟದ ಸರಕಾಗುತ್ತಿರುವ ಕಾಲವಿದು.

ಇಂತಹ ಸ್ಥಿತಿಯಲ್ಲಿ ವೈರಿ ಯಾರು, ಸ್ನೇಹಿತರ್‍ಯಾರು ಎಂದು ಅರ್ಥ ಮಾಡಿಕೊಳ್ಳಲಾರದ ಸಂಕಟಮಯ ಸ್ಥಿತಿಯಲ್ಲಿದ್ದೇವೆ. ಇಂದು ಎಂತಹ ಕಷ್ಟಕರ ಸನ್ನಿವೇಶದಲ್ಲಿ ನಾವು ಇದ್ದೇವೆ ಎಂದರೆ, ನಾವು ನಮ್ಮ ಸಂಕಟ ಹಾಗೂ ನೋವುಗಳನ್ನು ವ್ಯಕ್ತಪಡಿಸಿ ಪ್ರತಿಭಟಿಸಲು ಸಿದ್ಧರಿದ್ದರೂ, ನಮ್ಮ ಮುಖ್ಯ ಶತ್ರುಗಳು ನಮಗಾಗಿ ಶತ್ರುಗಳನ್ನು ಸೃಷ್ಟಿಸಿ ಇವರೊಂದಿಗೆ ಹೋರಾಟ ಮುಂದುವರೆಸಿ ಎಂದು ಹೇಳುತ್ತಿದ್ದಾರೆ. ನಾವು ಯಾರೊಂದಿಗೆ ಹೋರಾಟ ನಡೆಸಬೇಕು?

ನಮ್ಮ ಕಾಲದ ಲೇಖಕನಿಗೆ ಇದು ಅರ್ಥವಾಗಬೇಕು. ಈ ಕಾಲದ ಲೇಖಕನಿಗೆ ರಾಜಕೀಯ ಪ್ರಜ್ಞೆ ಇಲ್ಲದೇ ಕತೆ, ಕವನ, ಕಾದಂಬರಿ ಬರೆಯುತ್ತೇವೆ ಎನ್ನುವವರು ಸುಳ್ಳು ಹೇಳುತ್ತಾರೆ

ಅಥವಾ ನಮ್ಮ ವ್ಯವಸ್ಥೆ ಅವರನ್ನು ಹಾಗೇ ಸೃಷ್ಟಿಸಿದೆ. ನಮ್ಮ ನಡುವೆಯೇ ಶತ್ರುಗಳನ್ನು ಸೃಷ್ಟಿಸಿ, ದಾಯಾದಿ ಕಲಹಕ್ಕೆ ಪ್ರೇರಣೆ ನೀಡಿರುವ ಮುಖ್ಯ ಶತ್ರುವಿನ ಹಿತಾಸಕ್ತಿಯನ್ನು ನಮಗೆ ಗೊತ್ತಿಲ್ಲದಂತೆ ಕಾಯುವ ಕೆಲಸವಿದು. ಒಂದು ಕಡೆ ವಿದೇಶಿ ಬಂಡವಾಳ ಮತ್ತೊಂದು ಕಡೆ ಸ್ವದೇಶಿ ಆಂದೋಲನವೆಂಬ ಭ್ರಮೆ ಮೂಡಿಸುತ್ತಿರುವ ಮತೀಯವಾದ. ವಿಚಿತ್ರವೆಂದರೆ ಮೇಲ್ನೋಟಕ್ಕೆ ಇವೆರೆಡು ಬೇರೆ ಬೇರೆ ಪರಸ್ಪರ ವಿರೋಧವೆಂದು ಕಾಣಿಸುತ್ತದೆ. ಕೋಮುವಾದ ವಿಜೃಂಭಿಸಲು ಕಾರಣವಾದವರು. ವಿದೇಶಿ ಬಂಡವಾಳಗಾರರಾಗಿದ್ದಾರೆ. ಡಂಕೆಲ್ ಪ್ರಸ್ತಾವನೆ ವಿರುದ್ಧ ಭಾರತದ್ಯಾಂತ ಪ್ರತಿಭಟನೆಗಳು ನಡೆದು ಯಶಸ್ವಿ ಭಾರತ ಬಂದ್ ಚಳವಳಿ ನಡೆದಾಗ ಡಂಕೆಲ್ ಅಂಕಲ್‌ನ ರಕ್ಷಣೆಗೆ ಬಂದಿದ್ದು, ಬಾಬರಿ ಮಸೀದಿ ನಾಶ. ಡಂಕೆಲ್ ಅಂಕಲ್‌ನನ್ನು ಕೈ ಬಿಟ್ಟ ಜನ ರಾಮ ರಾಮ ಎಂದರು. ರಾಮ ವಿದೇಶಿಯಯರಿಗೆ ಮಾರಾಟವಾದ ಮೊದಲ ಸರಕು. ಹಿಂದೂ ತಾಲಿಬಾನಿಗಳಾಗಿರುವ ಸಂಘ-ಪರಿವಾರಕ್ಕೆ ಹರಿದು ಬರುತ್ತಿರುವ ಬಹುಪಾಲು ಹಣ ವಿದೇಶಿ ಹಣ. ಅನಿವಾಸಿ ಭಾರತೀಯರು ಹೇರಳ ಹಣ ನೀಡುತ್ತಿದ್ದಾರೆ. ಇದರಲ್ಲಿರುವ ಹಿತಾಸಕ್ತಿ ಅರ್ಥ ಮಾಡಿಕೊಳ್ಳಬೇಕು. ಇವತ್ತು ವಿಶ್ವ ಹಿಂದೂ ಪರಿಷತ್ ಅಧ್ಯಕ್ಷ ಅಶೋಕ್ ಸಿಂಘಾಲ್ ಅಂತಾರಾಷ್ಟ್ರೀಯ ಅಧ್ಯಕ್ಷ. ಈ ಅಂತಾರಾಷ್ಟ್ರೀಯತೆ ಎಂದರೆ ವಿದೇಶಿ ಬಂಡವಾಳ ಗಾರ ಜೊತೆ ಕೈ ಜೋಡಿಸುವುದು ಎಂದೇ ಅರ್ಥ. ಜಾಗತೀಕರಣ ಮತ್ತು ಕೋಮು ವಾದಕ್ಕೆ ಇರುವ ಸಂಬಂಧಗಳನ್ನು ಅರ್ಥ ಮಾಡಿಕೊಂಡರೆ, ನಮ್ಮ ಬಹಳಷ್ಟು ಲೇಖಕರು ತಮ್ಮ ಬೋಳೆತನದ ವಾದಗಳನ್ನು ಕೈ ಬಿಟ್ಟು ಒಂದಿಷ್ಟು ನಿಜವಾಗಿ ಮಾತಾಡಬಲ್ಲರು. ಇದು ಸಾಹಿತ್ಯಕ ಲೋಕಕ್ಕೆ ಸಂಬಂಧಿಸಿದ್ದಲ್ಲ ಎನ್ನುವವರ ಬಗ್ಗೆ ನನಗೆ ಕನಿಕರವಿದೆ.

ಇಂತಹ ವಾತಾವರಣದಲ್ಲಿ ಯಾವುದು ಸಾಹಿತ್ಯ, ಯಾವುದು ಅಸಾಹಿತ್ಯ ಎಂಬ ಚರ್ಚೆಯನ್ನು ಕಾಲಕ್ಕೆ ಬಿಟ್ಟು ಮಾನವೀಯತೆಗೆ ಬಂದಿರುವ ಗಂಡಾಂತರದ ವಿರುದ್ಧ ನಾವು ಧ್ವನಿ ಎತ್ತಬೇಕು. ನಮ್ಮ ಸಾಹಿತ್ಯ, ಕಾವ್ಯ ಇದಕ್ಕಾಗಿ ಹೊಸ ಪ್ರಕಾರದಲ್ಲಿ ಮಾತಾಡಲು ಸಿದ್ಧವಾಗಬೇಕು. ನಮ್ಮ ಕನ್ನಡ ಕಾವ್ಯಕ್ಕೆ ಒಂದು ಅದ್ಭುತ ಪರಂಪರೆ ಇದೆ. ಶರಣ ಚಳುವಳಿಯ ಮೊನಚಿದೆ. ರೂಪಕದ ಭಾಷೆಯಲ್ಲಿ ಮಾತಾಡಿದ, ಹಾಡಿದ ಅವಧೂತರು, ಸಿದ್ಧರು, ಸಂತರು, ಸೂಫಿಗಳು ನಡೆದಾಡಿರುವ ಹೆಜ್ಜೆ ಗುರುತುಗಳು ನಮ್ಮ ಜನಗಳ ನಡುವೆ ಇನ್ನೂ ಇವೆ. ರೂಪಕದ ಭಾಷೆಯಲ್ಲಿ ಮಾತಾಡಿದ್ದಷ್ಟೇ ಅಲ್ಲ, ಅವರೇ ಒಂದು ರೂಪಕವಾಗಿ ನಿಜವಾದ ಅರ್ಥದಲ್ಲಿ ಜಂಗಮವಾಗಿದ್ದರು. ಒಂದು ಕಡೆ ನಿಲ್ಲದೇ ಸಂಚರಿಸುತ್ತಿದ್ದರು. ಇವತ್ತು ನಮ್ಮ ಸಾಹಿತ್ಯ ಲೋಕದಲ್ಲಿ ಗೊಂದಲಕಾರಿ ಪರಿಸ್ಥಿತಿ ನಿರ್ಮಾಣವಾಗಿದೆ. ೭೦ರ ದಶಕದ ಬಂಡಾಯ, ದಲಿತ ಸಾಹಿತ್ಯ ಚಳುವಳಿ ತಣ್ಣಗಾಗಿದೆ. ಹೊಸ ಚಳುವಳಿಯೊಂದು ಹೊರ ಬರುವ ವೇದನೆಯಲ್ಲಿದೆ. ಇಂತಹ ಸಂದರ್ಭದಲ್ಲಿ ನಡೆಯುವ ಹಾಗೇ ಕೆಲವರು ನವ್ಯವನ್ನು ಹಾಡಿ ಹೊಗಳುತ್ತಿದ್ದಾರೆ. ಬಂಡಾಯ, ದಲಿತ ಸಾಹಿತ್ಯ ಬಗ್ಗೆ ಹಲ್ಲಿಯಂತೆ ಲೊಚಗುಟ್ಟುತ್ತಾ, ಮುಟ್ಟುನಿಂತ ಮಹಿಳೆ ತನ್ನ ಹೆಂಗಸತ್ವದ ಬಗ್ಗೆ ಮಾತಾಡುವವಳಂತೆ ಕೆಲವು ಬಂಡಾಯಗಾರರು ಹಳಹಳಿಸುತ್ತಿದ್ದಾರೆ. ಇವರೆಲ್ಲಾ ಮರೆತಿರುವ ವಿಷಯವೆಂದರೆ, ಹೊಸ ಪೀಳಿಗೆಯವರು ಬರೆಯುತ್ತಿದ್ದಾರೆ. ಅಂಥವರು

ಅನೇಕ ಜನರಿದ್ದಾರೆ. ಅವರ ಬಗ್ಗೆ ಇವತ್ತಿಗೂ ಇನ್ನೂ ಗಟ್ಟಿಯಾದ ಚರ್ಚೆಯಾಗಿಲ್ಲ. ಸಾಹಿತ್ಯವೆಂದರೆ ಅನುಭವ ದ್ರವ್ಯ, ತಪಸ್ಸು ಇತ್ಯಾದಿ ಮಾತಾಡುವ ಈ ಜನ, ವರ್ತಮಾನಕ್ಕೆ ಮುಖಾಮುಖಿಯಾಗಿ ಗುದ್ದಾಡುತ್ತಿರುವ ತರುಣ ಬರಹಗಾರರನ್ನು ಇನ್ನೂ ಓದಿಯೇ ಇಲ್ಲ. ಇನ್ನೂ ಪ್ರೀತಿಸುವುದು ದೂರದ ಮಾತು.

ಇವತ್ತು ಮಾರುಕಟ್ಟೆಯಲ್ಲಿ ಹಳೆಯ ವಸ್ತುವೊಂದು ಪುಟ್ಟ ಪೆಟ್ಟಿಗೆಯ ಮೂಲಕ ಹೊಸ ವೇಷ ತೊಟ್ಟು ಬಂದು ಸರ್ವಮಯವಾಗುವಂತೆ, ಖ್ಯಾತ ಲೇಖಕರ ಪುಸ್ತಕಗಳು ಹೊರ ಬರುವ ಮುಂಚೆ ಮಾಧ್ಯಮದಲ್ಲಿ ತಮ್ಮ ಪ್ರಸವ ವೇದನೆಯ ಕತೆ ಹೇಳುತ್ತಿವೆ. ಪುಸ್ತಕದ ಬಗ್ಗೆ ಪುಂಖಾನುಪುಂಖ ವಿಮರ್ಶೆ ಬಂದು ಸಾಪ್ತಾಹಿಕದ ತುಂಬಾ ತುಂಬಿ ಬಿಡುತ್ತದೆ. ಸಂದರ್ಶನ, ಅನುಭವದ ದ್ರವ್ಯ ಎಲ್ಲವೂ ಹರದಾಡಿ, ಸರಕು ಸಂಸ್ಕೃತಿಗೆ ಒಳಗಾಗಿರುವ ಜನರ ಕಪಾಟಿನಲ್ಲೊಂದು ಸರಕಾಗಲು ಸಾಹಿತ್ಯ ತುದಿಗಾಲಿನ ಮೇಲೆ ನಿಂತಿದೆ.

ಇಂತಹ ಸ್ಥಿತಿಯಲ್ಲಿ ನಾವು ಸಾಹಿತ್ಯದ ಬಗ್ಗೆ ಮಾತಾಡುವಾಗ ಬದುಕಿಗೆ ಸಂಬಂಧಿಸಿಯೇ ಮಾತಾಡಬೇಕು. ವರ್ತಮಾನದ ಬಗ್ಗೆ ಕವನ ಬರೆಯಬೇಕೆಂದರೆ, ನಾನು ಈಗ ಗುಜರಾತ್ ಕೋಮುಗಲಭೆ ಬಗ್ಗೆ ಕವನ ಬರೆಯಬೇಕಾಗುತ್ತದೆಂದು ಈಚೆಗೆ ಹಿರಿಯ ಕವಿಯೊಬ್ಬರು ಅಪ್ಪಣೆ ಕೊಡಿಸಿದ್ದಾರೆ. ಅವರಿಗೆ ನಾನು ಏನನ್ನೂ ಹೇಳುವುದಿಲ್ಲ. ಕಾವ್ಯ ಅನುಭವದ ದ್ರವ್ಯವಾದರೆ ಯಾವ ಅನುಭವ? ನಿಮ್ಮ ಅನುಭವ ಯಾವುದು? ನೀವು ಎಲ್ಲಿ ನಿಂತಿದ್ದೀರಿ? ಯಾರ ಸಂಗಡ ಇದ್ದೀರಿ? ಇವು ಇತ್ಯರ್ಥವಾಗಬೇಕಾಗುವ ವಿಷಯಗಳು. ನಿಮ್ಮ ಸಾಹಿತ್ಯವು ಜನರ ಕರುಳು ಬಳ್ಳಿ ಕತ್ತರಿಸಿಕೊಂಡು ಕೇವಲ ಒಂದು ಸರಕಾಗಿಲ್ಲವೇ? ಯಾವುದು ಆಗಬಾರದೆಂದು ನೀವು ಹೇಳುತ್ತಿದ್ದಿರೋ ಅದು ನಿಮ್ಮ ಸಾಹಿತ್ಯವಾಗಿಲ್ಲವೇ? ನಿಮ್ಮ ಕಣ್ಮುಂದೆ ಅನನುಭವಿ ಯುವಕನೊಬ್ಬ ಬರೆಯುತ್ತಿದ್ದಾನೆ. ಅದು ಕಾವ್ಯವೇ ಅಲ್ಲ, ಸಾಹಿತ್ಯವೇ ಅಲ್ಲ ಎನ್ನುವುದಾದರೂ, ಅವನು ಕೋಮುಗಲಭೆ ವಿರುದ್ಧ ಬರೆದು ಪದ್ಯ ನನಗೆ ಬಹಳ ಮುಖ್ಯ. ಬೆಂಕಿ ಹತ್ತಿದ ನಾಡಿನಲ್ಲಿ ಒಂದಿಷ್ಟು ನೀರು ಚೆಲ್ಲುವದು ಬಹಳ ಮುಖ್ಯ. ಅದು ಯಾವ ನೀರು ಎಂದು ಯೋಚಿಸಿ ನೋಡುವುದಕ್ಕೆ ನನಗೆ ಆಗುವುದಿಲ್ಲ.

ಜಾಗತೀಕರಣದ ಭರಾಟೆಯಲ್ಲಿ ಮನುಷ್ಯ ಕಳೆದು ಹೋಗುತ್ತಾನೆ. ಎಲ್ಲಾ ಇದ್ದು ಏಕಾಂಗಿಯಾಗಿ ಬಿಡುತ್ತಾನೆ. ಅನಾಥನಾದ ಮನುಷ್ಯನು ತನ್ನ ಮಾನವೀಯ ಅಂತಃಕರಣದಿಂದ ಹೊಸ ಮನುಷ್ಯನಾಗಲು ಸಾಹಿತ್ಯ ಮುಂದಾಗಬೇಕು. ಈ ಕಾರಣಕ್ಕೆ ಈ ಶತಮಾನದ ಕಾವ್ಯ ತಾಯಿ ಕರುಳನ್ನು ಹೊಂದಿರಬೇಕು ಎಂದು ನಾನು ಹೇಳುತ್ತೇನೆ. ಅಂತಹ ತಾಯಿ ಕರುಳಿಗೆ ಕೊರಳಾದ ಕಾವ್ಯ ಮಾತ್ರ ಈ ಕಾಲದ ಕಾವ್ಯವಾಗುತ್ತದೆ. ಅದನ್ನು ಗುರುತಿಸುವ ಕಣ್ಣು ನಮ್ಮ ವಿಮರ್ಶಕರಿಗೆ ಬರಲಿ. ಕೋಮುಗಲಭೆಯಲ್ಲಿ ಸುಟ್ಟು ಕರಕಲಾದ ಹೆಣಗಳಿಗೆ ಎಳ್ಳು ನೀರನ್ನು ಬಿಟ್ಟು ಅತ್ಯಂತ ಕಲಾತ್ಮಕವಾಗಿ ಪನ್ನೀರು ಮಾಡಿ ಚೆಲ್ಲುವ ನಮ್ಮ ಧೀಮಂತ ಲೇಖಕರ ಸಾಹಿತ್ಯಕ್ಕೆ, ಸಂಸ್ಕೃತಿ ಚಿಂತನೆಗೆ ನೋಬೆಲ್ ಪಾರಿತೋಷಕ, ಬೂಕರ್ ಪ್ರಶಸ್ತಿ, ಜ್ಞಾನಪೀಠ ಎಲ್ಲವೂ ಸಿಗಲಿ.

ಆದರೆ ಯಾವುದು ಉಳಿಯಬೇಕು ಅದು ಉಳಿಯುತ್ತದೆ. "ಸಾವಿರ ಸಿಡಿಲುಗಳು ಸಿಡಿಯಲಿ ಯಾವ ಹೂವು ಅರಳಬೇಕು. ಆ ಹೂವು ಅರಳಲೇಬೇಕು." ಇದು ವಿಜ್ಞಾನ. ಮಾನವ ವಿಕಾಸದ ಕತೆಯೂ ಹೌದು.



## ನನ್ನ ಪೀಳಿಗೆಯವರ ಕೃತಿಗಳೇ ಉತ್ತರಿಸುತ್ತವೆ

• ಆನಂದ ಋಗ್ವೇದಿ

**ಕ**ನ್ನಡ ಸಾಹಿತ್ಯದಲ್ಲಿ ಯುವ ಪೀಳಿಗೆಯ ನಮ್ಮ ಸಂದರ್ಭದಲ್ಲಿ ಯಾವುದೇ ಚಳುವಳಿಗಳ, ಸಾಹಿತ್ಯಿಕ ಪಂಥಗಳ ಪ್ರಭಾವ ಮತ್ತು ತುರ್ತು ಇಲ್ಲವೆಂಬುದೇನೋ ನಿಜವೇ. ನಾನೂ ಬರಹಕ್ಕೆ ಶುರುವಿಟ್ಟ ದಿನಗಳಲ್ಲಿ ಈ ಭಾವವೊಂದು ಕೊರತೆಯಂತೆಯೇ ಭಾಸವಾಗಿದ್ದಿದೆ. ಆದರೆ ವೈಯುಕ್ತಿಕವಾಗಿ ಮತ್ತು ಸಮಕಾಲೀನ ಸೃಜನಶೀಲ ಗೆಳೆಯರ ನಡುವೆ ಅದೊಂದು ನಿರಾಶಾದಾಯಕವಾದ, ಗೊಂದಲಮಯವಾದ ವಾತಾವರಣ ನಿರ್ಮಿಸಿದೆ ಎಂದು ಅನ್ನಿಸುತ್ತಿಲ್ಲ.

ಸೃಜನಶೀಲತೆ ತನ್ನ ಸಮಕಾಲೀನ ಸಾಮಾಜಿಕ ಸ್ವರೂಪದಲ್ಲೇ ತನ್ನ ತುರ್ತು ಮತ್ತು ಸವಾಲುಗಳನ್ನ ಕಂಡುಕೊಳ್ಳುತ್ತಿರುತ್ತದೆ. ಅದು ಎಂದಿಗೂ ಚಲನಶೀಲವಾದ ಪ್ರವಾಹವೇ. ಮೇಲ್ಮಟ್ಟದಲ್ಲಿ ನಿಂತಂತೆ ತೋರುವ, ತನ್ನ ಎಂದಿನ ರಭಸವನ್ನ ಕಳೆದುಕೊಂಡಿರುವಂತಹ ನೋಟಗಳೆಲ್ಲ ಅದರೊಳಗಿನ ಆಂತರಿಕ ಚಲನೆಯನ್ನು ಗುರುತಿಸದೇ ಹೋಗಿಬಿಡುವುದೇ ಹೆಚ್ಚು. ಪ್ರತಿಯೊಂದು ಕಾಲಘಟ್ಟದಲ್ಲಿ ಸೃಜನಶೀಲತೆ ಅಂತಹುದೊಂದು ನವೀನತೆಯನ್ನ, ತಿರುವನ್ನ ತಾನೇ ಶೋಧಿಸಿಕೊಂಡಿದೆ ಎಂದೇ ಭಾವಿಸುತ್ತೇನೆ. ಯಾವತ್ತೂ ಒಂದು ಸಮಕಾಲೀನ ಸಾಮಾಜಿಕತೆ ತನ್ನೊಳಗೆ ಅಂತರವನ್ನು ನಿವಾರಿಸುವ, ತನ್ನ ಪರಂಪರಾಗತ ಮತ್ತು ಸಾಂದರ್ಭಿಕ ಸವಾಲುಗಳನ್ನ ಎದುರಿಸುವ ಸಲುವಾಗಿ ಬಂಡೇಳುತ್ತಲೇ ಇರುತ್ತದೆ. ಇದೊಂದು ನಿರಂತರ ವಿದ್ಯಮಾನ, ಸದ್ಯದ ವರ್ತಮಾನ ಕೂಡ. ಅಂತಹುದೇ ವರ್ತಮಾನ ಆ ಸಮಕಾಲೀನತೆಗೆ ಸ್ಪಂದಿಸುವ ಸೃಜನಶೀಲತೆಗೂ ತಾನಾಗಿಯೇ ದಕ್ಕುತ್ತದೆ. ಅಂತಹ ವರ್ತಮಾನದಲ್ಲಿಯೇ ನನ್ನ ಪೀಳಿಗೆಯ ಗೆಳೆಯರು ಬರೆಯುತ್ತಿದ್ದೇವೆ ಎಂದೇ ಭಾವಿಸುವಾಗ, ಯುವ ಲೇಖಕರಿಗೆ ದಿಕ್ಕು ತೋಚುತ್ತಿಲ್ಲ ಎಂಬ ಮಾತುಗಳು ಕೇವಲ ನಿರಾಶಾವಾದಿಗಳ ಹೇಳಿಕೆ ಮಾತ್ರ.

ನಿಜ, ನಮ್ಮ ಈ ವರ್ತಮಾನ ತುಂಬಾ ಸಂಕೀರ್ಣವಾದುದು. ಈ ಹೊತ್ತು ನನ್ನ ಪೀಳಿಗೆ ತನ್ನ ಓದಿನಿಂದ, ಗ್ರಹಿಕೆಗಳಿಂದ, ಅನುಭವದಿಂದ ಆರ್ಜಿಸಿಕೊಂಡ ತಾತ್ವಿಕತೆ ಕೊಂಚ ಗೊಂದಲ ಸ್ವರೂಪದ್ದೇ. ಆಯಾಕಾಲದ ಪ್ರಭಾವ, ಪರಿಸರಗಳಿಂದ, ತುರ್ತಿನಿಂದಾಗಿ ಪ್ರಾರಂಭವಾದ ಚಳುವಳಿಗಳು ತಮ್ಮ ಅಬ್ಬರವನ್ನ ಕಳೆದುಕೊಂಡು 'ಸ್ಥಗಿತ'ಗೊಂಡಿವೆ ಎಂದು ಭಾಸವಾಗುತ್ತಿರುವ ಈ ಹೊತ್ತಿನಲ್ಲಿ, ಆಯಾ ಚಳುವಳಿಗಳ ಯುಗಧರ್ಮ ಮೌಲ್ಯ ಈ ಹೊತ್ತೂ

ಪ್ರಸ್ತುತವಾಗಿಯೇ ಉಳಿದಿವೆ. ಹಾಗಾಗಿಯೇ ಈ ಸಂದರ್ಭ ಏಕಕಾಲದಲ್ಲಿ ಸಾಹಿತ್ಯದ ನವೋದಯ ಪರಂಪರೆಯ ರಮ್ಯತೆಯನ್ನ, ನವ್ಯದ ವೈಚಾರಿಕತೆ, ತಂತ್ರಗಾರಿಕೆ ಮತ್ತು ವ್ಯಕ್ತಿ ಕೇಂದ್ರಿತ ಚಿಂತನಾಕ್ರಮವನ್ನ, ಬಂಡಾಯ-ದಲಿತ ಸಂದರ್ಭದ ಅಸಮಾನತೆಯ ವಿರುದ್ಧದ ಮಾನವೀಯ ಗೆಲುವು ಕುರಿತಾದ ಆಶಯವನ್ನ ಜೀವಂತವಾಗಿರಿಸಿಕೊಂಡೇ ಕ್ರಿಯಾಶೀಲವಾಗಿ ಉಳಿದಿದೆ. ಈ ಸಂದರ್ಭವೇ ನನ್ನ ವಯೋಮಾನದ ಗೆಳೆಯರನ್ನ ತಮ್ಮ ಸ್ವರೂಪ ಮತ್ತು ತಾತ್ವಿಕ ನಿಲುವನ್ನ ಸ್ಪಷ್ಟಪಡಿಸಿಕೊಳ್ಳಲು ಆಗದಂತಹ ಗೊಂದಲ ಮೂಡಿಸಿರುವುದು. ಆದರೆ ಅದೊಂದು ಬಿಕ್ಕಟ್ಟು ಎಂದೇನೂ ನಮಗೆ ಭಾಸವಾಗುತ್ತಿಲ್ಲ.

ತುಸುಹೆಚ್ಚು ಕಾವ್ಯದಲ್ಲಿ, ಉಳಿದಂತೆ ಕತೆಯಲ್ಲಿ, ಕಾದಂಬರಿಯಲ್ಲಿ, ಲಲಿತ ಪ್ರಬಂಧಗಳಲ್ಲಿ, ವೈಚಾರಿಕ ವಿಶ್ಲೇಷಣೆಗಳಲ್ಲಿ ನಿರಂತರ ಸೃಜನಶೀಲರಾಗಿರುವ ಸಮಕಾಲೀನ ಯುವ ಗೆಳೆಯರ ಒಟ್ಟು ಸಾಹಿತ್ಯವನ್ನು ಗಮನಿಸಿದಾಗಷ್ಟೇ ಈ ತಾತ್ವಿಕತೆಯ ಬಿಕ್ಕಟ್ಟು ಗಮನಕ್ಕೆ ಬರಬಹುದು. ಆದರೆ ವ್ಯಕ್ತಿಗತವಾಗಿ ಪ್ರತಿಯೊಬ್ಬ ಲೇಖಕನೂ ತನ್ನದೇ ಆದ ತಾತ್ವಿಕತೆಯನ್ನು ಮೈಗೂಡಿಸಿ ಕೊಂಡೇ ಇರುತ್ತಾನೆ. ಈ ತಾತ್ವಿಕತೆ ವೈಯುಕ್ತಿಕತೆಯಿಂದ ಹೊರತು ಸಾಮಾಜಿಕವಾಗುವ ಸ್ವರೂಪ ವುಳ್ಳದ್ದು. ಇಂತಹ ತಾತ್ವಿಕತೆಯನ್ನು ತನ್ನ ಬಿಡಿ ಕತೆ, ಬಿಡಿ ಕವಿತೆಗಳಲ್ಲಿ ಸಮರ್ಪಕವಾಗಿ, ಜೊತೆಗೆ ತನ್ನ ಮೊದಲ ಸೂಕ್ಷ್ಮವಾಗಿ ಪರಿಶೀಲಿಸಿ ನೋಡುವ ವ್ಯವಧಾನ ವಿಮರ್ಶಕರಿಗೆ ಬೇಕಿದೆ ಎಂಬುದು ನಮ್ಮೆಲ್ಲರ ಆಶಯ. ಬರಹಕ್ಕೆ ಶುರುವಿಟ್ಟ ಮೊದಲಲ್ಲಿ ನಾವೆಲ್ಲ ಎದುರು ನೋಡುವ ಈ ಅಭಿಪ್ರಾಯ, ಮೆಚ್ಚುಗೆ ಎಷ್ಟು ಜನಕ್ಕೆ ನಿಜವಾದ ನೆಲೆಗಳಿಂದ ದಕ್ಕಿದೆ ಎಂಬುದು ಪ್ರಶ್ನೆಯೆ. ಪ್ರತಿಯೊಬ್ಬ ಹಿರಿಯರೂ ನಮ್ಮನ್ನು ತಾಳೆ ನೋಡಲು ಬಳಸುವ ಪರಿಕರಗಳೂ ಈಗಾಗಲೇ ಸಿದ್ಧವಾಗಿರುವಂತಹವು ಎಂದೇ ಅನ್ನಿಸತೊಡಗಿದೆ. ಅವರು ನಮ್ಮನ್ನು ಹೋಲಿಸುವುದೂ ಈಗಾಗಲೇ ತಮ್ಮಲ್ಲಿ ಸಾಧ್ಯತೆಗಳನ್ನ ಬಳಸಿ ಮೆರೆದಿರುವ ಅನನ್ಯರ ಕೃತಿ ಸ್ವರೂಪಗಳೊಂದಿಗೆ! ಈಗ ಬರೆಯುತ್ತಿರುವ ಗೆಳೆಯನ ಕವಿತೆಗಳಲ್ಲಿ ಬೇಂದ್ರೆಯಂತಹವರ ಸ್ವೋಪಜ್ಞತೆಯನ್ನು, ಕತೆಗಳಲ್ಲಿ ಮಾಸ್ತಿ, ಟಾಲ್‌ಸ್ಟಾಯ್, ದಾಸ್ತೋವಸ್ಕಿ ಮೊದಲಾದವರ ಜೀವಂತ ಪಾತ್ರಗಳನ್ನು ಎದುರು ನೋಡುವುದು, ಒಳನೋಟಗಳಿಗಿರುವ ಮಿತಿಗಳಷ್ಟೇ ಹೊರತು ಸದ್ಯದ ಸೃಜನಶೀಲತೆಯ ಮಿತಿಗಳಲ್ಲ.

ಮೊದಲೇ ಹೇಳಿದಂತೆ, ನಮ್ಮ ಈ ಸಂದರ್ಭ ತುಂಬಾ ಸಂಕೀರ್ಣವಾದುದು. ನಮ್ಮ ಸಾಮಾಜಿಕ ತೀವ್ರ ರೂಪದ ವಾಣಿಜ್ಯೀಕರಣವನ್ನ, ಮಾಹಿತಿ-ಸಂಪರ್ಕಗಳೊಡನೆ ಜಾಗತೀ ಕರಣವನ್ನ ಒಳಗೊಳ್ಳಲು ಪ್ರಯತ್ನ ನಡೆಸಿದೆ. ಇಲ್ಲಿ ಈ ಜಾಗತೀಕರಣ ಅವಶ್ಯವೇ ಅಲ್ಲವೇ ಎಂಬ ಪ್ರಶ್ನೆ ಅಪ್ರಸ್ತುತ. ಅದೊಂದು ಜಾಗತಿಕಮಟ್ಟದಲ್ಲಿ ನಡೆಯುತ್ತಿರುವ ವಿದ್ಯಮಾನ ಎಂಬುದಷ್ಟೇ ಸತ್ಯ. ಇಂತಹುದೊಂದು ಜಾಗತೀಕರಣ ಪ್ರಕ್ರಿಯೆ ನಿಧಾನಗತಿಯಲ್ಲಿ ತನ್ನ ಹೆಜ್ಜೆ ಗುರುತನ್ನ ನಮ್ಮ ಸಾಮಾಜಿಕತೆಯೊಳಗೆ ಮೂಡಿಸಿಕೊಂಡೇ ಬಂದಿದೆ. ಆದರೂ ಈ ಹೊತ್ತಿನ ಅದರ ನಡೆ ರಭಸವಾದುದು. ಅಂತಹುದೊಂದು ವರ್ತಮಾನದ ವಿದ್ಯಮಾನ ನಮ್ಮೆಲ್ಲರ ಸಾಂಪ್ರದಾಯಿಕ ಚಿಂತನ ಕ್ರಮವನ್ನ ಅದರ ಪ್ರಸ್ತುತತೆಯನ್ನ ಪ್ರಶ್ನಿಸತೊಡಗಿದೆ. ಏನೆಲ್ಲ

ಆಗಿಬಿಡುವ ಸಾಧ್ಯತೆಯೂ, ಏನನ್ನೂ ಪರಿವರ್ತನೆ ತರಲು ಶಕ್ತವಲ್ಲದ ನೀರಸ ನಡೆಯೂ ಈ ವರ್ತಮಾನಕ್ಕಿರುವುದು ಗಮನಾರ್ಹ ಅಂಶ. ಅಂತಹುದೊಂದು ಪ್ರಕ್ರಿಯೆ ನಮ್ಮ ಸಾಂಸ್ಕೃತಿಕ ಪ್ರಜ್ಞೆ ಮೇಲೆ ಮೂಡಿಸುವ ತಲ್ಲಣಗಳು ಎಂತಹವು? ಇಂತಹ ಸೂಕ್ಷ್ಮ ಪ್ರಶ್ನೆ ಗೊಂದಲವಾಗಿ ವರ್ತಮಾನದ ಸಾಕ್ಷಿಗಳಾದ ನಮ್ಮ ಯುವ ಲೇಖಕರಿಗೆ ಕಾಡುತ್ತಿವೆ ಎಂದೇಕೆ ಭಾವಿಸಬಾರದು? ನನಗನ್ನಿಸುತ್ತಿದೆ. ಈ ಹೊತ್ತು ಕೊಂಚ ಮೌನ ಬೇಕಿದೆ. ಅದು ನಮ್ಮ ಸೃಜನಶೀಲತೆಯನ್ನು ವಿಮರ್ಶಿಸುವ, ಟೀಕಿಸುವ ಭೇದಿಸುವ ಕ್ರಿಯೆಗಳಿಂದ ಹೊರತಾದ ಒಂದು ಆರೋಗ್ಯಕರ 'ಅವಕಾಶ' ಎಂದು ಭಾವಿಸುತ್ತೇನೆ. ಅಂತಹುದೊಂದು ಸಾಂಸ್ಕೃತಿಕ ಮೌನವೂ ಒಂದು ವಿಶಿಷ್ಟ ಸಂವೇದನೆಯನ್ನು ನಮ್ಮ ಸಹ ಲೇಖಕರಿಗೆ ಒದಗಿಸಬಲ್ಲುದು. ಆ ಮೌನವೇ ನಾವು ಅರ್ಜಿಸಿ ಕೊಂಡು ಬಂದ ಪರಂಪರಾಗತ ಸಂವೇದನೆಯೊಂದಿಗೇ ಪರಿಸರದ, ವರ್ತಮಾನದ ಸೂಕ್ಷ್ಮತೆ ಗಳನ್ನು ಜೀರ್ಣಿಸಿ ಕೊಳ್ಳಲು ಅನುವಾಗಬಲ್ಲುದು. ಈವರೆಗೆ ಹರಿದಾಡುತ್ತಲೇ ಇರುವ ನಮ್ಮ ಸೃಷ್ಟಿಶೀಲತೆಯ ಪಕ್ಕಗಳಿಗೆ ಸ್ವಂತಿಕೆಯ, ತಾತ್ವಿಕತೆಯ ರೆಕ್ಕೆ ಮೂಡಲು ನಾವೊಂದಿಷ್ಟು ಕೋಶಾವಸ್ಥೆಯ ಏಕಾಂತವನ್ನ ನಮಗಾಗಿಯೆ ಕಲ್ಪಿಸಿಕೊಳ್ಳಬೇಕಿದೆ. ಹಾಗೆ ದಕ್ಕುವ ಏಕಾಂತದಲ್ಲಿ ವ್ಯಕ್ತಿಗತವಾದ ತಾತ್ವಿಕತೆಯೊಂದು ಸಾಮಾಜಿಕ ತಾತ್ವಿಕತೆಯಾಗಿಸುವ ನಿಟ್ಟಿನಲ್ಲಿ ನಮ್ಮ ಸಂವೇದನೆ ಹರಿಯುತ್ತದೆ ಮತ್ತು ಅದು ಕೊಂಚ ನಿಧಾನಗತಿಯಲ್ಲಾದರೂ ನಮ್ಮ ಸಮೂಹದ ಸಾಹಿತ್ಯ ಕೃತಿಗಳಲ್ಲಿ ಪ್ರಕಟವಾಗುತ್ತದೆ ಎಂಬ ವಿಶ್ವಾಸ ನನಗಿದೆ.

ಅಂತಹ ಮೌನದ ನಂತರದ ಅಭಿವ್ಯಕ್ತಿ ತನ್ನ ಚಲನಶೀಲತೆಯ ಸಹಜ ಲಯದಲ್ಲೇ ರಭಸವನ್ನೂ, ಪ್ರತಿಭಾ ಸಂಪನ್ನತೆಯಲ್ಲಿಯೂ ದೈತ್ಯ ಪ್ರತಿಭೆಗಳನ್ನೂ ಹೊಮ್ಮಿಸಬಹುದು. ಇಂತಿಹುದೊಂದು ಆಶಾಭಾವವನ್ನ ಎದೆಯಲ್ಲಿಟ್ಟುಕೊಂಡೇ ನಿರಂತರ ಸೃಜನಶೀಲರಾಗುತ್ತಿರುವ ಎಲ್ಲ ಗೆಳೆಯರ ಪರವಾಗಿಯೇ ಈ ಮಾತುಗಳನ್ನ ಹೇಳಿದ್ದೇನೆ ಎಂದು ಭಾವಿಸುವೆ. ಹಾಗಾಗಿಯೇ ಈ ಹೊತ್ತು ನಮಗೆ ವೈಯುಕ್ತಿಕವಾಗಿ ಯಾವ ತಾತ್ವಿಕತೆಯಲ್ಲಿ ನನ್ನತನವನ್ನ ಕಂಡುಕೊಳ್ಳಲಿ ಎಂದೋ, ಯಾವ ಪ್ರಕಾರದಲ್ಲಿ ನನ್ನ ಅಭಿವ್ಯಕ್ತಿಯನ್ನು ಪ್ರಕಟಪಡಿಸಲಿ ಎಂದೋ ಗೊಂದಲ ಗಳಿಲ್ಲ. ಇರುವುದೇನಿದ್ದರೂ ವರ್ತಮಾನದ ಸವಾಲುಗಳು ಮತ್ತು ಅದಕ್ಕೆ ಪರಿಹಾರ ಕಂಡುಕೊಳ್ಳ ಬೇಕಾದ ಆಂತರಿಕ ತುರ್ತು ಮಾತ್ರ. ಇದಕ್ಕೆ ನನ್ನ ಪೀಳಿಗೆಯ ಗೆಳೆಯರ ಕೃತಿಗಳೇ ಉತ್ತರ ಹೇಳಬಲ್ಲವು. ಭವಿಷ್ಯದ ನಮ್ಮ ಸೃಜನಶೀಲ ಕೃಷಿ ನಿದರ್ಶನವಾಗಬಲ್ಲವು ಎಂಬ ಆತ್ಮವಿಶ್ವಾಸ ನನಗಷ್ಟೇ ಅಲ್ಲ, ನಮ್ಮೆಲ್ಲರಿಗೂ ಇದೆ.



# ದಂತ ಗೋಪುರದಿಂದ ನೆಲಕ್ಕಿಳಿಯೋಣ

● ಸರ್ಜಾಶಂಕರ್ ಹರಳೀಮಠ

ನನ್ನ ಇತ್ತೀಚಿನ ಅನುಭವದೊಂದಿಗೆ ಪತ್ರಿಕೆಯ ಚರ್ಚೆಗೆ ಪ್ರವೇಶಿಸುವುದು ಸೂಕ್ತವೆನಿಸುತ್ತದೆ. ಕಳೆದ ನಾಲ್ಕು ವರ್ಷಗಳಿಂದ ನನ್ನದೊಂದು ಅಂಕಣ ಬರೆಹ ಮಲೆನಾಡಿನ ಪಾಕ್ಷಿಕವೊಂದರಲ್ಲಿ ಪ್ರಕಟವಾಗುತ್ತಿತ್ತು. ಅವುಗಳಲ್ಲಿ ಮುಖ್ಯವೆನಿಸಿದ್ದನ್ನು ಆಯ್ದು ಪುಸ್ತಕ ರೂಪದಲ್ಲಿ ಪ್ರಕಟಿಸಿದೆವು. ಈ ಪುಸ್ತಕಕ್ಕೆ ಬಂದ ಪ್ರತಿಕ್ರಿಯೆ ಹಾಗೂ ಪ್ರಕಟಣೆಯ, ಬಿಡುಗಡೆಯ ಹಂತದಲ್ಲಿ ಕಂಡುಕೊಂಡ ಸತ್ಯಗಳು ಇಲ್ಲಿ. ನನ್ನ ಅಭಿಪ್ರಾಯವನ್ನು ರೂಪಿಸಲು ತಳಹದಿ ನಿರ್ಮಿಸಿವೆ.

ಸಾಹಿತ್ಯದ ವ್ಯಾಖ್ಯೆ ಬಹುರೂಪದಲ್ಲಿದ್ದರೂ, ರಾಜ್ಯಮಟ್ಟದ ಪತ್ರಿಕೆಗಳಲ್ಲಿ ಪ್ರಕಟವಾದರೆ ಮಾತ್ರ ಅದು 'ಸಾಹಿತ್ಯ' ಎಂಬ ಮನೋಭಾವ ಬಹಳ ಮಂದಿ ಬರಹಗಾರರಲ್ಲಿಯೂ ವಿಮರ್ಶಕರಲ್ಲಿಯೂ ಇದೆ. ಹಾಗಾಗಿ ತಾಲ್ಲೂಕು ಮತ್ತು ಜಿಲ್ಲಾಮಟ್ಟದ ಪತ್ರಿಕೆಗಳಲ್ಲಿ ಬರೆಯುವ ಬರಹಗಾರರ ಹಾಗೂ ಇಂತಹ ಪತ್ರಿಕೆಗಳಲ್ಲಿ ಪ್ರಕಟವಾದದ್ದನ್ನು ಗಮನಿಸುವ, ವಿಮರ್ಶಿಸುವ ವಿಮರ್ಶಕರ ಕೊರತೆಯನ್ನು ನಾವು ಕಾಣುತ್ತೇವೆ.

ನಾನೊಬ್ಬ ಪ್ರಸಿದ್ಧ ಬರಹಗಾರನಾಗಬೇಕು ಎಂಬ ಆಳದ ಬಯಕೆ ಬಹುಶಃ ಪ್ರತಿಯೊಬ್ಬ ಬರೆಹಗಾರನಲ್ಲಿಯೂ ಇರುತ್ತದೆ. ಆದರೆ ಈ ಹಂಬಲವೇ ಮುಖ್ಯವಾದಾಗ, ಜನಪರ ಕಾಳಜಿಗಳು, ಮಾನವೀಯ ಸ್ಪಂದನಗಳು ಬದಿಗೆ ತೆರಳಿ, ಬುದ್ಧಿವಂತಿಕೆ, ಬೌದ್ಧಿಕ ಕಸರತ್ತುಗಳು ಮೇಲುಗೈ ಪಡೆದು ಸಾಹಿತ್ಯ ಜೀವರಹಿತವಾಗುತ್ತದೆ. ರಾಜ್ಯಾದ್ಯಂತ ಓದುಗರನ್ನು ಪಡೆಯುವ ಹಂಬಲದಲ್ಲಿ ನಮ್ಮ ಊರಿನ ಓದುಗರನ್ನು ನಾವು ಮರೆಯುತ್ತೇವೆ. ನಮ್ಮ ಮನೆಯವರಿಗೆ, ಸ್ನೇಹಿತರಿಗೆ, ಸ್ಥಳೀಕರಿಗೆ ಸಾಹಿತ್ಯವೆನಿಸಿದ್ದು ನಾಡಿನ ಯಾವ ಮೂಲೆಯ ಓದುಗನಿಗೂ ಸಾಹಿತ್ಯವಾಗಿ ಕಾಣುತ್ತದೆ ಎಂಬ ಅರಿವು ನಮಗಾಗುವುದಿಲ್ಲ. ಅದರಂತೆಯೇ ಚಳವಳಿ ಮತ್ತು ಸಾಹಿತ್ಯದ ಸಂಬಂಧ ಹೃದಯದಲ್ಲಿನ ತಲ್ಲಣ, ಹೊಯ್ದಾಟ ಸಾಹಿತ್ಯ ಸೃಷ್ಟಿಸಬಲ್ಲದು. ಕಣ್ಣೆದುರಿಗಿನ ಅನ್ಯಾಯ, ಬದುಕಿನ ಭೀಕರತೆ ನಮಗೆ ತಟ್ಟಲು ಚಳವಳಿಗಳು ಬೇಕಿಲ್ಲ.

ಬರಹಗಾರನಿಗೆ ಐಡೆಂಟಿಟಿ ಮುಖ್ಯವೋ ಅಥವಾ ಜನಪರ ಕಾಳಜಿ ಮುಖ್ಯವೋ ಎಂಬ ಪ್ರಶ್ನೆ, ನಮ್ಮ ಈ ಚರ್ಚೆಯ ವಿಷಯವನ್ನು ಗಮನಿಸಿದಾಗ ನನ್ನನ್ನು ಕಾಡತೊಡಗಿತು. ವಿಮರ್ಶಕರ ಸಕಾರಾತ್ಮಕ ವಿಮರ್ಶೆಯನ್ನು, ಓದುಗರಿಂದ ನಿರಂತರ ಪ್ರಶಂಸೆಯನ್ನು ನಿರೀಕ್ಷಿಸಿ ಬರೆಯುವವನಿಗೆ 'ಇಲ್ಲಿ ನಿರಾಶಾದಾಯಕವಾದ ಗೊಂದಲಮಯವಾದ ವಾತಾವರಣ ಇದೆ' ಎಂದು ಅನ್ನಿಸುವುದು ಸಹಜ. ಅಲ್ಲದೆ ತಮ್ಮ ಸಾಹಿತ್ಯದ ಬಗ್ಗೆ ಭ್ರಮೆಗಳನ್ನು ಇಟ್ಟು ಕೊಂಡಿರುವವರಿಗೂ ಹೀಗನ್ನಿಸಬಹುದು. ಮೊದಲೇ ಹೇಳಿದ್ದನ್ನು ಪುನರಾವರ್ತನೆ ಮಾಡು ವುದಾದರೆ, ನಾವು ನಮ್ಮ ಅಕ್ಕಪಕ್ಕದ ಓದುಗರನ್ನು ಓದುಗರೆಂದೇ ಭಾವಿಸದಿರುವುದೂ ಇದಕ್ಕೆ ಕಾರಣ.

ನನ್ನ ಮಟ್ಟಿಗೆ ಜನಪರವಾದ ಎಲ್ಲಾ ಅಕ್ಷರಬಂಧವೂ ಸಾಹಿತ್ಯ. ಯಾವ ತತ್ವಗಳು ಜನಪರವಾಗಿರುವವೊ ಆ ತತ್ವಗಳೇ ಸಾಹಿತ್ಯದ್ದೂ ಆಗಿರಬೇಕು. ತನ್ನ ಮನಸ್ಸನ್ನು ತೆರೆದಿಟ್ಟು ಕೊಂಡಿರುವ ಖಚಿತ ಜನಪರ ನಿಲುವನ್ನು ಹೊಂದಿರುವ ಲೇಖಕನಿಗೆ, ಯಾವ ತಾತ್ವಿಕ ಬಿಕ್ಕಟ್ಟುಗಳು ಎಂದಿಗೂ ಕಾಡಲಾರವು. ಅಂತಹ ಬಿಕ್ಕಟ್ಟುಗಳು ಕೇವಲ ಚರ್ಚಾಗೋಷ್ಠಿಗಳ ವಸ್ತುವಾಗಿ ಮಾತ್ರ ಅಸ್ತಿತ್ವ ಪಡೆಯಬಹುದು.

ನಮ್ಮ ಸಾಹಿತ್ಯ ಸೃಷ್ಟಿ, ಒಬ್ಬ ಶ್ರದ್ಧಾವಂತ ಚಮ್ಮಾರನ ಕುಸುರಿ ಕೆಲಸ, ರೈತನ ಅರ್ಪಣಾಭಾವದ ಉಳುಮೆ, ಕಾರ್ಮಿಕನ ಗುಣಮಟ್ಟದ ಉತ್ಪನ್ನದ ಸೃಷ್ಟಿ...ಗಳಂತೆಯೇ ಎಂಬ ಅರಿವು ಹಾಗೂ ವಿನಯ ನಮ್ಮಲ್ಲಿರಬೇಕು. ಇಲ್ಲವಾದಲ್ಲಿ ಸಾಹಿತಿಗಳೆಂದರೆ ಬೃಹಸ್ಪತಿಗಳು ಎಂಬ ಸ್ಥಾಪಿತ ಅತಿರೇಕದ ಹುಸಿ ಅಹಂಕಾರಕ್ಕೆ ಒಳಗಾಗಬೇಕಾಗುತ್ತದೆ. ಬರೆಯುವುದರೊಂದಿಗೆ ಅದನ್ನು ಓದುಗನಿಗೆ ತಲುಪಿಸುವ ಎಲ್ಲಾ ತಾಂತ್ರಿಕ ಕಸರತ್ತುಗಳನ್ನೂ ನಾವು ಕಾರ್ಮಿಕನ ಶ್ರದ್ಧೆಯಿಂದ ನಿರ್ವಹಿಸಬೇಕಾಗುತ್ತದೆ. ಜನಪರವಾದುದನ್ನು ಸ್ವೀಕರಿಸುವ, ಪ್ರೋತ್ಸಾಹಿಸುವ ಸಹೃದಯರ ಬಹಳ ದೊಡ್ಡ ಗುಂಪು ನಮ್ಮ ತಾಲ್ಲೂಕುಗಳಲ್ಲಿಯೇ, ನಮ್ಮ ಹಳ್ಳಿಗಳಲ್ಲಿಯೇ ಇವೆ. ಆದರೆ ಅವರ ಬಳಿ ಸ್ನೇಹಿತರಂತೆ ಹೋಗಬೇಕು ವಿನಾ ಸಾಹಿತಿಯೆಂಬ ಅಹಂಕಾರದಿಂದಲ್ಲ.

ಸಹಲೇಖಕರು ಹಾಗೂ ವಿಮರ್ಶಕರು ನಮ್ಮ ಸಾಹಿತ್ಯಕ್ಕೆ ತೋರುವ ಪ್ರತಿಕ್ರಿಯೆಯನ್ನು ಆಧರಿಸಿ ನಮ್ಮ ಸಾಹಿತ್ಯದ ಗುಣಮಟ್ಟವನ್ನು ಪೂರ್ಣ ಕಂಡುಕೊಳ್ಳುವುದು ಹಲವು ತಪ್ಪು ನಿರ್ಧಾರಗಳಿಗೆ ಕಾರಣವಾಗುವ ಸಾಧ್ಯತೆಯಿರುತ್ತದೆ. ವಿಮರ್ಶಕರ ಮೆಚ್ಚುಗೆ ಅಥವಾ ನಿರುತ್ಸಾಹಗಳ ಅನೇಕ ಬಗೆಯ ಪೂರ್ವಗ್ರಹಗಳ ಹಿನ್ನೆಲೆ ಹೊಂದಿರುವ ಸಂಭವವೂ ಇರುತ್ತದೆ. ಅನೇಕ ದಿಕ್ಕುಗಳಿಂದ ಬರುವ ವಿವಿಧ ಓದುಗರ ಅಭಿಪ್ರಾಯಗಳ ಒಟ್ಟಾರೆ ಧ್ವನಿ ನಮ್ಮ ಸಾಹಿತ್ಯಕ್ಕೆ ಮುಖ್ಯ ಪ್ರೇರಣೆಯಾಗುವುದು ಒಳ್ಳೆಯದು ಎಂಬುದು ನನ್ನ ಅಭಿಪ್ರಾಯ.

ನನ್ನ ಅಂಕಣಗಳನ್ನು ನಿರಂತರ ನಾಲ್ಕು ವರ್ಷ ಪ್ರಕಟಿಸಿದ ಮಲೆನಾಡಿನ ಪಾಕ್ಷಿಕದ ಸಂಪಾದಕರ ವಿಶಾಲ ಮನೋಭಾವ ಹಾಗೂ ಧರ್ಮ-ದೇವರುಗಳ ಬಗ್ಗೆ ಬರೆದಾಗಲೆಲ್ಲಾ ಉಂಟಾಗುವ ಸಹಜ ವಿವಾದಗಳನ್ನು ಲೆಕ್ಕಿಸದೆ ಅದನ್ನು ಪ್ರಕಟಿಸುತ್ತಿದ್ದ ಜನಪರ ನಿಲುವು, ಲೇಖಕನ ಬೆಳವಣಿಗೆಯನ್ನು ಕಂಡು ಹರ್ಷಿಸುವ ದೊಡ್ಡತನ ಇಲ್ಲಿ ಉಲ್ಲೇಖಿಸಲೇಬೇಕು. ನನ್ನ ಬರಹಕ್ಕೆ ಓದುಗರ, ವಿಮರ್ಶಕರ ಪ್ರತಿಕ್ರಿಯೆ ಪ್ರೋತ್ಸಾಹಕಾರಿಯಾಗಿತ್ತು. ಪ್ರಗತಿಪರ ನಿಲುವಿನ ರಾಜ್ಯದ ವಾರಪತ್ರಿಕೆ ನನ್ನ ಪುಸ್ತಕದ ವಿಮರ್ಶೆ ಪ್ರಕಟಿಸಿ ಬೆನ್ನುತಟ್ಟಿತು.

ಕನ್ನಡದಲ್ಲಿ ಲೇಖಕರಿಗೆ ಪ್ರೋತ್ಸಾಹವಿಲ್ಲ, ಇಲ್ಲಿ ಪುಸ್ತಕಗಳನ್ನು ಕೊಂಡು ಓದುವುದಿಲ್ಲ, ಪುಸ್ತಕಗಳು ಮಾರಾಟವಾದರೂ ಅವು ಪೂರ್ಣ ಮಾರಾಟವಾಗಲು ಹತ್ತಾರು ವರ್ಷಗಳೇ ಬೇಕು ಎಂಬ ಅಭಿಪ್ರಾಯಗಳು ಕನ್ನಡ ಸಾಹಿತ್ಯಲೋಕದಲ್ಲಿ ಚಾಲ್ತಿಯಲ್ಲಿದೆ. ಶಿವರಾಮ ಕಾರಂತರೇ ತಮ್ಮ ಕಾದಂಬರಿಗಳ ಮುನ್ನುಡಿಯಲ್ಲಿ ಮುನ್ನೂರು ಪುಸ್ತಕ ಅಚ್ಚು ಹಾಕಿಸಿದರೂ, ಅವು ಖರ್ಚಾಗಲು ಅನೇಕ ವರ್ಷಗಳೇ ಹಿಡಿಯುತ್ತವೆ ಎಂಬ ವ್ಯಥೆ ವ್ಯಕ್ತಪಡಿಸಿದ್ದನ್ನು ನಾವು

ಗಮನಿಸಿದರೆ, ಇಂತಹ ಪರಿಸ್ಥಿತಿ ಹಿಂದೆಯೂ ಇತ್ತು ಎಂದರಿಯಬಹುದು. ಮುಂದೆಯೂ ಈ ಕೊರಗು ಇರುತ್ತದೆ. ಆದರೆ ಈ ಅಭಿಪ್ರಾಯವನ್ನು ಸುಳ್ಳು ಮಾಡಲು ಕೂಡ ಸಾಧ್ಯವಿದೆ.

ಲೇಖಕ ತನ್ನ 'ಅಹಂ'ನ ದಂತಗೋಪುರದಲ್ಲಿ ಕುಳಿತುಕೊಳ್ಳದೆ ಸಾಧ್ಯವಾದಷ್ಟು ಜನ ಸಂಪರ್ಕವನ್ನು ಸಾಧಿಸಬೇಕು. ಸ್ನೇಹಪರತೆ ಮತ್ತು ಮುಕ್ತ ಮನಸ್ಸಿದ್ದರೆ ಎಂತಹವರೊಂದಿಗೂ ಬೆರೆಯಬಹುದು. ಈ ರೀತಿ ಗಳಿಸಿದ ಜನರೇ ನಮ್ಮ ಓದುಗರಾಗುತ್ತಾರೆ. ನಮ್ಮ ಸಾಹಿತ್ಯ ತಲುಪಬೇಕಾಗಿರುವುದು ವಾರ್ತಾಪತ್ರಿಕೆಗಳೂ ದೊರಕದ, ಸಾಹಿತ್ಯದ ಸಂಪರ್ಕವಿಲ್ಲದ ಹಳ್ಳಿಯ ಕೆಳವರ್ಗದ ಜನರಿಗೇ ಹೊರತು, ಸಾಹಿತ್ಯದಲ್ಲಿ ತುಂಬಾ ಆಸಕ್ತಿಯಿರುವಂತೆ ನಟಿಸುವ ಸಮಾಜದ ಕಣ್ಣಿನಲ್ಲಿ ಗೌರವಾರ್ಹ ಸ್ಥಾನದಲ್ಲಿ ಕುಳಿತಿರುವ ಹಸಿವಿಲ್ಲದ ಜನರಿಗಲ್ಲ.

ನಿಮಗೆ ಚಿಕ್ಕ ಮಾಹಿತಿ ನೀಡಬಹುದಾದರೆ, ಕುಗ್ರಾಮವಾದ ನಮ್ಮ ಹಳ್ಳಿಯಲ್ಲಿ ಇತ್ತೀಚೆಗೆ ಬಿಡುಗಡೆಯಾದ ನನ್ನ ಪುಸ್ತ ಕದ ನೂರು ಪ್ರತಿಗಳು ಮಾರಾಟವಾಗಿವೆ. ಅಚ್ಚು ಹಾಕಿಸಿದ್ದು ಒಂದು ಸಾವಿರ. ತಿಂಗಳೊಳಗೆ ಮರುಮುದ್ರಣಕ್ಕೆ ಹೋಗುತ್ತದೆ ಎಂಬ ವಿಶ್ವಾಸ ಮಾರಾಟ ವಾಗುತ್ತಿರುವ ರೀತಿಯಿಂದ ಗಟ್ಟಿಯಾಗುತ್ತಿದೆ. (ಪುಸ್ತಕದ ಮುಖ ಬೆಲೆ ರೂ. ೭೫ ಇದ್ದರೂ!)

●

## ಬಿಕ್ಕಟ್ಟುಗಳು ಹತ್ತಿರಕ್ಕೂ ಸುಳಿದಿಲ್ಲ

●ಸಂದೀಪ ನಾಯಕ

ಹೊಸದಾಗಿ ಬರೆಯುತ್ತಿರುವ ಪ್ರತಿಭಾವಂತ ಲೇಖಕನಿಗೆ ನೀವು ಹೇಳುತ್ತಿರುವ ನಿರಾಶಾದಾಯಕ ಗೊಂದಲಮಯವಾದ ವಾತಾವರಣ ಇಲ್ಲ. ಇದೊಂದು ಗಂಭೀರವಾಗಿ ಪರಿಗಣಿಸ ಬೇಕಾದ ಸಂಗತಿ ಏನಲ್ಲ. ಇವೆಲ್ಲ ಸಮಸ್ಯೆಯಾಗಿ ಕಾಣುವುದು ಸಾಮಾನ್ಯ ಲೇಖಕರಿಗೆ ಮಾತ್ರ. ಯಾವ ಪ್ರಕಾರದಲ್ಲಿ ಬರೆಯಬೇಕೆನ್ನುವುದು ಒಂದು ಸಮಸ್ಯೆಯೇ ಅಲ್ಲ. ಯಾವುದೇ ಪ್ರಕಾರವಾದರೂ ಲೇಖಕ ಬರೆಯುತ್ತಿರುವ ಪ್ರಕಾರ ಲೇಖಕನ ವೈಯಕ್ತಿಕ ಆಯ್ಕೆಯಾಗಿದೆ. ಬರೆಯುತ್ತಲೇ ರೂಪುಗೊಳ್ಳುವ 'ತಾತ್ಕಾಲಿಕ ನಿಲುವಿನಲ್ಲಿ ಗುರುತಿಸಿಕೊಳ್ಳುವಿಕೆ' ಒಂದು ಬಿಕ್ಕಟ್ಟು ಎಂದು ನನಗೇನೂ ಅನಿಸುವುದಿಲ್ಲ. ಹೊಸ ಲೇಖಕರು ಪ್ರಗತಿಶೀಲ, ಬಂಡಾಯದವರ ತರಹ ಒಂದು ಸಿದ್ಧ ತಾತ್ವಿಕ ನಿಲುವಿನಲ್ಲಿ ಗುರುತಿಸಿಕೊಳ್ಳಬೇಕಿಲ್ಲ. ಅದು ಅನಗತ್ಯ ಕೂಡ.

ಇದೆಲ್ಲದರ ಹೊರತಾಗಿ ಪ್ರತಿಭಾವಂತ ಲೇಖಕನಿಗೆ ಇವೆಲ್ಲ ಬಿಕ್ಕುಟ್ಟುಗಳೇ ಅಲ್ಲ. ಒಂದು ವೇಳೆ ಇವುಗಳನ್ನು 'ಬಿಕ್ಕಟ್ಟುಗಳು' ಎಂದು ಕೊಂಡರೂ ತನ್ನ ಬರವಣಿಗೆಯಲ್ಲಿ ಅವುಗಳನ್ನು ದಾಟಲು ಉಪಾಯಗಳನ್ನು ಲೇಖಕ ಕಂಡುಕೊಂಡಿರುತ್ತಾನೆ; ಮತ್ತು ಅವುಗಳನ್ನು ಮೀರುತ್ತಾನೆ. ತನ್ನ ಬರವಣಿಗೆಯ ಸಂಬಂಧ ಬಿಕ್ಕಟ್ಟುಗಳನ್ನು ಎದುರಿಸಿದಾಗಲೇ ಆ ಲೇಖಕ ಮಹತ್ವವಾದು ದನ್ನು ಬರೆಯಬಲ್ಲ.

ನಾನು ಮತ್ತು ನನ್ನ ಸಹ ಲೇಖಕರಲ್ಲಿ ಹೊಸದನ್ನು ಅರಿಯುವ ಮತ್ತದನ್ನು ತೋರಿಸುವ ಪ್ರತಿಭೆ ಇಲ್ಲದಿರುವುದೇ ಈ ಸಂದರ್ಭದಲ್ಲಿ ಇಂಥ ಆತಂಕಗಳಿಗೆ ಕಾರಣವಾಗಿದೆ. ಈ ಆತಂಕ ತುಂಬ ತಾತ್ಕಾಲಿಕವಾದುದು. ನಮ್ಮ ಸಾಹಿತ್ಯ ಚರಿತ್ರೆಯ ಸಂದರ್ಭದಲ್ಲಿ ಎಲ್ಲ ಕಾಲಕ್ಕೂ ಶ್ರೇಷ್ಠ ಸಾಹಿತ್ಯ ಬಂದಿಲ್ಲ ಎಂಬುದನ್ನು ಗಮನದಲ್ಲಿಟ್ಟುಕೊಂಡರೆ ಈ ಆತಂಕಕ್ಕೆ ಕಾರಣವಿಲ್ಲ. ಇದೊಂದು ಏರಿಳಿತದ ಸಹಜ, ಸಾಮಾನ್ಯ ಪ್ರಕ್ರಿಯೆಯಾಗಿದೆ.

ನಮ್ಮ ಬರವಣಿಗೆಯಲ್ಲಿ ನಾವು ಎದುರಿಸುತ್ತಿರುವ ಮೊದಲ ಪ್ರಶ್ನೆ-ಈ ಬರಹ ಕನ್ನಡದಲ್ಲಿ ಹೊಸ ಮಾತಾಗಿದೆಯೇ ಅಥವಾ ಹೊಸದು ಎನ್ನುವಂಥದ್ದನ್ನು ನಾವು ಬರೆಯುತ್ತಿದ್ದೇವೆಯೆ ಎನ್ನುವುದು. ಇದರ ಹೊರತಾಗಿ ಇಲ್ಲಿ ನೀವು ಕೇಳಿದ ಬಿಕ್ಕಟ್ಟುಗಳು ನಮ್ಮ ಹತ್ತಿರಕ್ಕೂ ಸುಳಿದಿಲ್ಲ.

ಈಗ ನಾನು ಬರೆಯಲು ಪ್ರಯತ್ನಿಸುತ್ತಿರುವುದು ಈ ಹೊಸ ಮಾತುಗಳನ್ನು.



## ಸಹಜವಾದ ಬಿಕ್ಕಟ್ಟು-ತಲ್ಲಣಗಳು ಬೇಕು

●ಎಚ್ ಎಲ್ ಪುಷ್ಪ

ಹೊಸದಾಗಿ ಬರೆಯುವವರಿಗೆ ನಿರಾಶಾದಾಯಕ ಗೊಂದಲಕರ ವಾತಾವರಣ ಇದೆ ಎಂದು ಏಕೆ ಭಾವಿಸಿಕೊಳ್ಳಬೇಕು. ಬರಹದಲ್ಲಿನ ಸ್ಪಷ್ಟತೆ, ಕಲಾತ್ಮಕತೆ ಭಾಷೆಯ ಮೇಲಿನ ಹಿಡಿತ, ಯಾವ ಪ್ರಕಾರ ನಮಗೆ ಸರಾಗವಾಗಿ ಒದಗಿಬರುತ್ತದೆ ಎಂಬುದನ್ನು ಗುರ್ತಿಸಿಕೊಂಡರೆ ಸಾಕು. ಆರೋಗ್ಯಕರ ಮನಸ್ಸನ್ನುಳ್ಳ ಸಮಾನ ಮನಸ್ಕರು, ಸಾಹಿತ್ಯದಲ್ಲಿ ಆಸಕ್ತಿ ಉಳ್ಳವರ ಒಂದು ವಲಯವನ್ನು ನಾವು ಕಟ್ಟಿಕೊಳ್ಳಬೇಕು. ಅಲ್ಲಿನ ತೆರೆದ ಮನಸ್ಸಿನ ಚರ್ಚೆ, ಹೊಗಳಿಕೆ, ಟೀಕೆ ನಮ್ಮನ್ನು ಸೃಜನಶೀಲರನ್ನಾಗಿಸುತ್ತವೆ. ಹೊಸದಾಗಿ ಸಾಹಿತ್ಯ ಸೃಷ್ಟಿಸುವವರು ತಮ್ಮ ಆಯ್ಕೆಯ ಪ್ರಕಾರದಲ್ಲಿನ ಹಿರಿಯ ಲೇಖಕರ ಕೃತಿಗಳನ್ನು ಗಮನಿಸಬೇಕು. ಆದರೆ ಸಾಧ್ಯವಾದಷ್ಟು ಅವರ ಸಾಹಿತ್ಯ ಉಂಟುಮಾಡುವ ಪ್ರಭಾವದಿಂದ ದೂರವೇ ಉಳಿದು ನಮ್ಮ ಕೃತಿಯಲ್ಲಿ ನಮ್ಮದೇ ಛಾಪನ್ನ ಮೂಡಿಸಬೇಕು. ಇದು ನನ್ನದೇ ಕೃತಿ ಎಂಬ ಛಾಪು ಒತ್ತುವಷ್ಟು ಮಟ್ಟಿಗಿನ ಅಹಂ ರಚನೆಯ ಸಂದರ್ಭದಲ್ಲಿ ನಮ್ಮಲ್ಲಿರಲೇಬೇಕು.

ಯಾವುದಾದರೂ ತಾತ್ವಿಕ ನಿಲುವಿನಲ್ಲಿ ಗುರ್ತಿಸಿಕೊಳ್ಳಬೇಕು ಎಂದು ಎಲ್ಲಿ ಹೇಳಿದೆ? ನಮ್ಮ ಬದುಕಿನಲ್ಲಿ ನಾವು ಎದುರಿಸುವ ನೋವು ನಲಿವುಗಳು ನಮ್ಮನ್ನು ಆಳವಾಗಿ ಕಾಡಬೇಕು. ದಲಿತರ ಮೇಲಿನ ದೌರ್ಜನ್ಯ, ಮಹಿಳಾ ಸಬಲೀಕರಣ ಬಗ್ಗೆ ಓದುತ್ತಲೇ ಅವರ ಮೇಲೆ ನಡೆಯುವ ದೌರ್ಜನ್ಯಗಳನ್ನು ಒಪ್ಪಿಕೊಳ್ಳುವುದು, ಜಾತ್ಯಾತೀತ ಎನ್ನುತ್ತಲೇ ಜಾತಿಯ ಬಲವಾದ

ಕೋಟೆಯಲ್ಲಿ ಬದುಕುವುದು, ಯುದ್ಧದ ಭೀಕರತೆಯನ್ನು ಕಣ್ಣೆದುರು ನೋಡುತ್ತಲೇ ಅದನ್ನು ತಣ್ಣಗೆ ಅರಗಿಸಿಕೊಳ್ಳುವುದು-ಇವೆಲ್ಲವೂ ನಮ್ಮನ್ನು ಒಬ್ಬ ಸತ್ವಶಾಲಿ ಲೇಖಕರನ್ನಾಗಿ ರೂಪಿಸುತ್ತವೆ. ಇದೆಲ್ಲಕ್ಕೂ ನಿಮ್ಮ ಮನಸ್ಸು ತುಡಿದರೆ ಸಾಕು, ಇದಕ್ಕಿಂತ ತಾತ್ವಿಕ ನಿಲುವುಗಳು ಬೇಕೆ. ಈ ದ್ವಂದ್ವಗಳಲ್ಲಿ ಬದುಕುವ ನಮಗೆ ಯಾವುದಾದರೂ ತಾತ್ವಿಕ ನಿಲುವು ಬೇಕೆನಿಸಿದರೆ, ಆರೋಗ್ಯಕರ ವಿಚಾರಗಳನ್ನುಳ್ಳ ಯಾವುದೇ ವೈಚಾರಿಕಾ ಪಂಥಗಳೊಂದಿಗೆ ಗುರ್ತಿಸಿಕೊಳ್ಳುವುದು ತಪ್ಪೇನಿಲ್ಲ.

ಎಲ್ಲ ಚಳುವಳಿಗಳು ಸ್ಥಗಿತಗೊಂಡ ಕಾಲ ಎನ್ನುವುದಕ್ಕಿಂತ, ಎಲ್ಲ ಚಳುವಳಿಗಳು ಗುಣಾತ್ಮಕವಾಗಿ ಅಲ್ಲದಿದ್ದರೂ ಇನ್ನೂ ಫಸಲನ್ನು ಕೊಡುತ್ತಿರುವ ಕಾಲ ಎನ್ನಬಹುದಾಗಿದೆ. ಈ ಚಳುವಳಿಗಳ ಉತ್ಪನ್ನದ ಗುಣಾತ್ಮಕತೆ ಕುಗ್ಗಿಸುವ, ಮೌಲಿಕ ಕೃತಿಗಳನ್ನು ಕೊಡಬಲ್ಲ ಇನ್ನೊಂದು ಹೊಸ ಚಳುವಳಿ ಕಣ್ತೆರೆಯಬೇಕಿದೆ. ಹೊಸಬರ ಕೃತಿಗಳು ಜಡಗೊಂಡ ಸಾಹಿತ್ಯ ಪರಂಪರೆಗೆ ಶಾಕ್ ಕೊಡಬಲ್ಲ ಹೊಸ ತಂತ್ರ, ಶೈಲಿ, ಭಾಷೆಯೊಂದಿಗೆ ಮುನ್ನುಗ್ಗಬೇಕಿದೆ. ಆರಂಭದಲ್ಲಿ ಈ ಹೊಸ ಪ್ರಯೋಗಗಳನ್ನು ಉದಾಸೀನದಿಂದ ಕಂಡರೂ ಕಾಲವೇ ಅದಕ್ಕೆ ಸ್ಥಾನವನ್ನು ದೊರಕಿಸಿಕೊಡುತ್ತದೆ. ಸರ್ವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಚಳುವಳಿಗಳು ಆಯಾ ಸಂದರ್ಭದ ಬಿಕ್ಕಟ್ಟಿನ ಅಗತ್ಯಗಳಾಗಿ ಹುಟ್ಟಿಕೊಂಡವು. ಇಂದು ನಮ್ಮ ಮುಂದೆ ಇರುವ ಸಾಮಾಜಿಕ, ಸಾಂಸ್ಕೃತಿಕ ಬಿಕ್ಕಟ್ಟುಗಳೇ ಬೇರೆ. ನಮ್ಮದೇ ಬಿಕ್ಕಟ್ಟು ಎನ್ನು ವುದಕ್ಕಿಂತ ಜಾಗತಿಕ ಮಟ್ಟದ ಬಿಕ್ಕಟ್ಟುಗಳು ಇವಾಗಿರುವುದರಿಂದ, ಅವು ಸಾಹಿತ್ಯದ ಮೇಲೂ ತಮ್ಮ ಪ್ರಭಾವ ಬೀರುತ್ತಿರುತ್ತವೆ. ಈ ದಿಕ್ಕಿನೆಡೆಗೆ ಹೊಸಬರ ಕೃತಿಗಳು ಬೆಳಕು ಚೆಲ್ಲಬೇಕಾಗಿವೆ.

ಕನ್ನಡ ಸೃಜನಶೀಲತೆ ತನ್ನ ಎತ್ತರವನ್ನು ಕಳೆದುಕೊಂಡಿಲ್ಲ. ಬರೆಯುವವರ ಸಂಖ್ಯೆ ಅಪಾರವಾಗಿ ಹೆಚ್ಚುತ್ತಿದೆ. ದಿನೇ ದಿನೇ ಅಭಿವೃದ್ಧಿಗೊಳ್ಳುತ್ತಿರುವ ಮುದ್ರಣ ತಂತ್ರಗಳಿಂದಾಗಿ ಸಾಹಿತ್ಯ ಕೃತಿಗಳು ಮಾರ್ಕೆಟ್‌ಗಾಗಿ ಹೇರಳವಾಗಿ ಬಿಡುಗಡೆಯಾಗುತ್ತಿವೆ. ಈ ಉತ್ಪಾದನೆಯಲ್ಲಿನ ಗಟ್ಟಿ ಜೊಳ್ಳನ್ನು ಆರಿಸಿ ತೆಗೆಯುವ ಕುಶಲಕೆಲಸಗಾರರ ಅಗತ್ಯವಿದೆ. ಈ ಕುಶಲ ಕೆಲಸಗಾರರು ಯಾವುದೇ ಪೂರ್ವ ನಿರ್ಧಾರಿತ ಯೋಚನೆಗಳನ್ನು ಕೈಬಿಟ್ಟು, ಹಿರಿಯ ಲೇಖಕರ ಕೃತಿಗಳನ್ನಷ್ಟೇ ಒರೆಗೆ ಹಚ್ಚಿ ನೋಡುವುದನ್ನು ಬಿಟ್ಟು, ಹೊಸಬರ ಕೃತಿಗಳನ್ನು ಕೈಗೆತ್ತಿಕೊಳ್ಳಬೇಕಿದೆ. ತೆರೆದ ಮನಸ್ಸು ಹಾಗೂ ತಾಳ್ಮೆಯಿಂದ ಆ ಕೃತಿಗಳನ್ನು ಓದಿ ಮಾತನಾಡಬೇಕಿದೆ. ನಾನೇ ಕೇಳಿದಂತೆ ನಮ್ಮ ಹಲವಾರು ಜನ ಲೇಖಕರು ಸಾಹಿತ್ಯ ನಿಷ್ಕ್ರಿಯವಾಗುತ್ತಿದೆ, ಹೊಸ ರೀತಿಯ ಕವಿ ಹಾಗೂ ಕವಿತೆಗಳು ಬರುತ್ತಿಲ್ಲ, ಫಲವತ್ತಾದ ಸಾಹಿತ್ಯವೆಲ್ಲವೂ ತಮ್ಮ ಕಾಲಕ್ಕೇ ಮುಗಿದು ಹೋಯಿತು ಎಂಬ ಭರವಸೆಯಿಲ್ಲದ ಮಾತುಗಳನ್ನು, ಕವಿತೆ ಕುರಿತಂತೆ ಆಡುತ್ತಿರುತ್ತಾರೆ. ನಾನು ಕೇಳುವುದಿಷ್ಟೆ: 'ಈ ತರಹದ ಮಾತನಾಡುವ ಇವರು ಎಷ್ಟು ಹೊಸಬರ ಕೃತಿಗಳನ್ನು ನೋಡಿದ್ದಾರೆ ಹಾಗೂ ತಾಳ್ಮೆಯಿಂದ ಓದಿದ್ದಾರೆ'? ಕೃತಿಗಳನ್ನು ನೋಡದೆಯೇ ಕನ್ನಡದ ಸೃಜನಶೀಲತೆ ಮುಗಿದಿದೆ ಎಂದು ಹಾಹಾಕಾರ ಎಬ್ಬಿಸುವವರೂ ನಮ್ಮಲ್ಲಿದ್ದಾರೆ.

ವಿಮರ್ಶೆಯಲ್ಲಿ ಬಹಳಷ್ಟು ಸತ್ಯ ಬೆಳಕು ಕಾಣಬೇಕಿದೆ. ಮಹಿಳೆಯರ ಕೃತಿಗಳನ್ನು ಮಹಿಳೆಯರೇ, ದಲಿತರ ಕೃತಿಗಳನ್ನು ದಲಿತರೇ ಓದಿ ಬರೆಯಬೇಕು ಎನ್ನುವಂತಹ ವಿಚಿತ್ರ

ವಾತಾವರಣ ನಮ್ಮಲ್ಲಿದೆ. ಅವರವರ ಸೇನಾಪಡೆಗಳನ್ನು ಅವರವರೇ ಕಟ್ಟಿಕೊಳ್ಳಬೇಕಾದ ದುರಂತಸ್ಥಿತಿ ಯಾಕೆ ಇವತ್ತು ನಮ್ಮ ಕಣ್ಣೆದುರಿಗಿದೆ? ವಿಮರ್ಶಾ ಕ್ಷೇತ್ರ ಯಾಕೆ ಇಂತಹ ತರತಮಗಳನ್ನು ಹುಟ್ಟುಹಾಕಿದೆ ಎಂಬುದರ ಬಗ್ಗೆ ಬೇಸರವೂ ಆಗುತ್ತದೆ. ದೊಡ್ಡ ದೊಡ್ಡ ವಿಮರ್ಶಕರ ಕೃತಿಗಳನ್ನು ಮಹಿಳಾಕಾವ್ಯ ಕತೆ, ಕಾದಂಬರಿ, ವಿಮರ್ಶೆ ಕುರಿತು ಏನಾದರೂ ಬರೆದಿದ್ದಾರೆಯೇ ಎಂದು ಹುಡುಕಿದರೆ ಬಹಳಷ್ಟು ನಿರಾಶೆಯೇ ಆಗುತ್ತದೆ.

ಆ) ಪ್ರಕಾರ ಹಾಗೂ ತಾತ್ವಿಕ ನಿಲುವಿನಲ್ಲಿ ಗುರುತಿಸಿಕೊಳ್ಳುವುದರ ಬಗ್ಗೆ ಬಿಕ್ಕಟ್ಟಿನ ವಾತಾವರಣವೇನೂ ನನಗೆ ಕಂಡು ಬರುತ್ತಿಲ್ಲ. ನಮ್ಮ ಸೃಜನಾತ್ಮಕತೆ ಸಫಲವಾಗಿ ವ್ಯಕ್ತವಾಗಲು ಬೇರೆ ಬೇರೆ ವಿಚಾರಧಾರೆಗಳ, ಆಲೋಚನಾ ರೀತಿಯ ಅಗತ್ಯವಂತೂ ಇದೆ. ಇದು ನಮ್ಮ ವೈಚಾರಿಕಾ ಪಾತಳಿಯನ್ನು ಗಟ್ಟಿಗೊಳಿಸಲು ಅಗತ್ಯವೇ ವಿನಾ ಅನಿವಾರ್ಯವಲ್ಲ.

ಕವಿತೆಯನ್ನು ಬರೆಯುವ ನನಗೆ ಯಾವುದೇ ಬಿಕ್ಕಟ್ಟುಗಳು ಇಲ್ಲ. ನನ್ನ ಸಹಲೇಖಕರು, ಹಿರಿಯ ಕವಿಗಳು, ವಿಮರ್ಶಕರು, ಪತ್ರಿಕೆಗಳು ಪ್ರೋತ್ಸಾಹವನ್ನು ನನಗೆ ಎಲ್ಲ ಸಂದರ್ಭಗಳಲ್ಲೂ ಕೊಟ್ಟಿದ್ದಾರೆ. ಕವಿತೆಯ ಸಾಧ್ಯತೆಗಳ ಬಗ್ಗೆ ಚರ್ಚಿಸಿದ್ದಾರೆ, ಸೂಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ನಾವು ಹುಟ್ಟಿದ ವಾತಾವರಣ, ಜೀವಿಸುವ ಪರಿಸರವೇ ನಮ್ಮ ರಚನೆಗಳಲ್ಲಿ ಮತ್ತೆಮತ್ತೆ ವಿವಿಧ ರೂಪಗಳಲ್ಲಿ ಮೈತಾಳುತ್ತಾ, ಸಮಾಜದೊಂದಿಗಿನ ನಮ್ಮ ಸಂಪರ್ಕದಿಂದ ಕಂಡುಕೊಳ್ಳುವ ಸತ್ಯಗಳೇ ನಮ್ಮ ತಾತ್ವಿಕ ನಿಲುವಾಗಬಹುದು. ನಾನು ಜೀವಿಸುವ ಪರಿಸರದಲ್ಲಿನ ದಿನನಿತ್ಯದ ಘಟನೆಗಳು, ಗಂಡು ಹೆಣ್ಣು ಬದುಕುವ ರೀತಿಯಲ್ಲಿನ ವ್ಯತ್ಯಾಸಗಳು, ಗಂಡು ಹೆಣ್ಣಿಗೆಂದೇ ನಿರ್ಮಿತವಾದ ಪ್ರತ್ಯೇಕ ಸಂಸ್ಕೃತಿ, ವಿಚಾರ, ಭಾಷೆ, ನಡವಳಿಕೆಗಳು, ನನ್ನ ಹುಟ್ಟಿನೊಂದಿಗೇ ಬಂದ ನನ್ನ ಜಾತಿ ನನ್ನನ್ನು ಮತ್ತೆಮತ್ತೆ ಕಾಡಿದರೆ, ನೋವುಂಟು ಮಾಡಿದರೆ, ಸಹಜವಾಗಿಯೇ ನಾನು ರಚಿಸುವ ಕವಿತೆಯಲ್ಲಿ ಈ ಎಲ್ಲ ವಿಚಾರಗಳು ವ್ಯಕ್ತ ವಾಗುತ್ತಿರುತ್ತವೆ. ನನ್ನ ಕವಿತೆಯ ವಸ್ತು ಯಾವುದಾಗಬೇಕು ಎಂಬುದರ ಕೇಂದ್ರವನ್ನು ನನಗೆ ತೋರುತ್ತಿರುತ್ತವೆ. ಹೀಗಾಗಿ ಸಹಜವಾದ ಬಿಕ್ಕಟ್ಟುಗಳು ತಲ್ಲಣಗಳು ಸೃಜನಶೀಲವಾಗಿ ಬರೆಯಬಲ್ಲ ಲೇಖಕರಿಗೆ ಬೇಕು. ಆದರೆ ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾದ ರೀತಿಯಲ್ಲಿ ಅಲ್ಲ.

●

## ಮಾದರಿಗಳಿವೆ, ದಾರಿಗಳಿಲ್ಲ

● ಬಿ ಪೀರ್‌ಬಾಷ

'ವಿಶ್ವ ವ್ಯಾಪಾರೀ ರಾಜಕಾರಣದ' ತೆಕ್ಕೆಗೆ ಒಳಗಾಗದ ಯಾವ ಕ್ಷೇತ್ರವೂ ಈಗ ಉಳಿದಿಲ್ಲ ಎನ್ನುವುದಾದರೆ, ಈ 'ಆಕ್ರಮಣದಿಂದ ಕನ್ನಡ ಸಾಹಿತ್ಯ ಕ್ಷೇತ್ರ ಹೊರತಾದುದು ಎನ್ನಲು ಹೇಗೆ ಸಾಧ್ಯ? ಸಾಹಿತ್ಯಕ ವಾತಾವರಣ ಶುಷ್ಕವಾಗುತ್ತಿದೆ ಎಂಬ ಆತಂಕ, ಫ್ಯಾಕ್ಟರಿಗಳು 'ಲಾಕ್ ಔಟ್' ಆಗುತ್ತಿವೆ ಎಂಬ ಸಂಕಟಕ್ಕಿಂತ ಹೆಚ್ಚಿನದೆಂದಾಗಲಿ, ಭಿನ್ನ ಎಂದಾಗಲಿ ನನಗೆನಿಸುತ್ತಿಲ್ಲ.

'ಸಾಹಿತ್ಯಕ ಅಸ್ತಿತ್ವ'ದ ಬೇರುಗಳಿರುವುದೇ ಸಾಹಿತ್ಯೇತರ ಮೂಲಗಳಲ್ಲಿ. ಸಾಹಿತ್ಯವನ್ನೂ ಒಳಗೊಂಡಂತೆ ಯಾವುದೇ ಕಲೆ ಅದು ಸಮಾಜವೊಂದರ "ಸೂಪರ್ ಸ್ಟ್ರಕ್ಚರ್" ಮಾತ್ರ. ಜನ ಸಮುದಾಯದ ನಡುವೆ ಒಡಮೂಡಿದ ಚಿಂತನಾಕ್ರಮವನ್ನು ಸಾಹಿತ್ಯ ತನ್ನದಾಗಿಸಿಕೊಳ್ಳುತ್ತದೆ ಹೊರತು, ಕೊಡುವುದೇನಿದ್ದರೂ ಪಡೆದ ಸಂಪನ್ಮೂಲದಿಂದಲೇ ಸಿದ್ಧಗೊಳಿಸಿದ 'ಸಾಮಗ್ರಿ' ಯನ್ನು ಮಾತ್ರ. ಮೂಲ ನೆಲೆಯೇ ಘಾಸಿಗೊಂಡು ನರಳುತ್ತಿರುವ ಹೊತ್ತಿನಲ್ಲಿ 'ಸಾಹಿತ್ಯ'ದ ಅರಳುವಿಕೆಯನ್ನು ನಿರೀಕ್ಷಿಸಲಾಗದು. ಹಾಗೆಂದೇ ನಮ್ಮ ಹುಡುಕಾಟದ ಕಾಳಜಿಗಳೂ ತಳಮಟ್ಟಕ್ಕೆ ಕೆಳಗಿಳಿಯಬೇಕೇ ಹೊರತು ಮೇಲೆ ನಿಲ್ಲುವುದಲ್ಲ.

ಯಾವುದೇ ತಾತ್ವಿಕ ಪ್ರಭಾವಲಯದಿಂದ ಮುಕ್ತವಾಗಿ ಬರೆಯುವ ವಾದ ಸುಳ್ಳಿನ ಸ್ನೇಹ ಮಾಡಿ ಪ್ರಾಣ ಕಳೆದುಕೊಳ್ಳುವಂಥಾದ್ದು. ಕನ್ನಡ ಶ್ರೇಷ್ಠ ಬರಹಗಾರರಲ್ಲಿ ಯಾರೊಬ್ಬರೂ ಯಾವ ತಾತ್ವಿಕ ಪ್ರಭಾವಲಯದಿಂದ ಕೊಡು-ಕೊಳೆ ನಡೆಸಿಲ್ಲ ಎಂದು ಹೇಗೆ ಹೇಳುವುದು? ಯಾವೊಂದು ಅನ್ನವನ್ನೂ ಮುಟ್ಟದೇ ಮಡಿ-ಮೈಲಿಗೆಯಿಂದ ಉಪವಾಸವಿರುವ ಮೈ ಮನಸ್ಸುಗಳು ವಿಟಮಿನ್ ಕೊರತೆಯಿಂದ ನಿಧಾನಕ್ಕೆ ಸತ್ತು ಹೋಗುತ್ತವೆ. ನನ್ನ ಆತಂಕವೆಂದರೆ ಇದು ಮಾತ್ರ. ನನ್ನ ತಲೆಮಾರಿನ ಗೆಳೆಯರಿಗೆ ಯಾವ ಅನ್ನವೂ ಸೇರದಂತೆ ವಾಕರಿಕೆ ಹುಟ್ಟಿಸಲಾಗಿದೆ. ಈ ಹೊತ್ತು ಹೊಸ ಬರಹಗಾರರ ಬದುಕಿಗೆ ಅಡಿಗೆ ಮನೆಗಳೇ ಇಲ್ಲ. ಇವರೆಲ್ಲಾ "ಮಾರ್ಕೆಟ್ಟಿನಲ್ಲಿ ನಿಂತಿದ್ದಾರೆ. ಹೊಟ್ಟೆಯಲ್ಲಿ ಹಸಿವು, ನಾಲಗೆಯಲ್ಲಿ ಚಪಲ ತುಂಬಿಕೊಂಡು ಯಾವ ಹೋಟೆಲ್ಲಿನ ಊಟ ಚೀಪ್ ಅಂಡ್ ಬೆಸ್ಟ್ ಇರಬಹುದು" ಎಂದು ಯೋಚಿಸುತ್ತಿರುವಾಗಲೇ ಏರಿದ ಹೊತ್ತು ಇಳಿಮುಖವಾಗುತ್ತಿದೆ. ಇದನ್ನು ಹೇಗೆ ವಿವರಿಸುವುದು?

ಇಂತಹ 'ಸದ್ದಿಲ್ಲದ ಸ್ಥಿತಿ'ಯಲ್ಲಿಯೇ ನಮ್ಮ ಹೊಸ ಬರಹಗಾರರು ತೋರಿಸಿಕೊಳ್ಳಲಾಗದ ಬೇನೆಯಲ್ಲಿ ಬಳಲುತ್ತಿರುವುದು. ಪಕ್ಕಾ 'ಮಧ್ಯಮ ವರ್ಗೀಯ ಪ್ರವೃತ್ತಿಗೆ ಪಕ್ಕಾಗುತ್ತಿರುವುದು. ಕೆಳ ಬದುಕನ್ನು ಬದುಕಲೊಲ್ಲದ, ಮೇಲ್ ಬದುಕನ್ನು ಬದುಕಲಾಗದ ಸಂಕಟದಲ್ಲಿ ಸದಾ ಬಾಯಗಲಿಸಿಕೊಂಡು, ಕಣ್ಣರಳಿಸಿಕೊಂಡು "ಮಾರ್ಕೆಟ್" ಸೂತ್ರಗಳ ಮೂಲಕ 'ಪ್ರಜ್ಞೆ'ಯ ಆಕೃತಿಯನ್ನು ಕಟ್ಟಿಕೊಳ್ಳುತ್ತಿರುವುದು. ಹೀಗಾಗಬಾರದು ಎಂಬುದಾದರೆ ಅದು 'ಆದರ್ಶ'ದ ಮಾತಾದೀತು. ಕಾಲ ಸಹಜ ಗತಿ ಎನ್ನುವುದಾದರೆ ನಮ್ಮ 'ನಿರುದ್ಯೋಗಿ ಬರಹಗಾರರು' ಸೆಟಲ್ ಆಗಬೇಕು, ವಿದ್ಯಾರ್ಥಿ ಬರಹಗಾರರು 'ಹೈಯೆಸ್ಟ್ ಪರ್ಸೆಂಟೇಜ್'ಗಾಗಿ ತಪಸ್ಸು ಮಾಡಬೇಕು. ಇವರ ನಡುವೆ 'ಅರೆಕಾಲಿಕ ಪತ್ರಿಕೋದ್ಯಮ, ಪೂರ್ಣಕಾಲಿಕ ಪ್ರವಾಚನ ವೃತ್ತಿಗಳಲ್ಲಿ ತೊಡಗಿಸಿಕೊಂಡವರಿಗೆ 'ಬರೆಹ' ಒಂದಿಷ್ಟು ಸುಲಭ ಸಾಧನವಾದೀತು.

ಇಷ್ಟೆಲ್ಲದರ ನಡುವೆಯೂ 'ಹೊಸ ಬರಹಗಾರ'ರೆಂದು ಕರೆಯಿಸಿಕೊಳ್ಳುತ್ತಿರುವವರು ಬಹಳಷ್ಟನ್ನೇ ಬರೆಯುತ್ತಿದ್ದಾರೆ. ಕಳೆದೊಂದು ದಶಕದಿಂದ ಬರೆಯುತ್ತಿರುವ ಈ ಹೊಸಬರು, ತಾವು ಬರೆಹ ಆರಂಭಿಸಿದ ಕಾಲದಿಂದೀತನಕ ಯಾವ ಚೇತೋಹಾರಿ ಸಾಹಿತ್ಯಕ ಚರ್ಚೆಗಳಿಂದ ಪ್ರೇರಣೆಗೊಳಗಾಗಿಲ್ಲ. ಅಂತಹ ಯಾವ 'ಸಾಹಿತ್ಯಕ ಚಳುವಳಿ'ಗಳ ಆಲಿಂಗನದ ಅನುಭವಕ್ಕೆ ಭಾಜನರಾಗಿಲ್ಲ. ನವೋದಯ, ನವ್ಯ, ಪ್ರಗತಿಶೀಲ, ಬಂಡಾಯಗಳೆಲ್ಲ ಚಳುವಳಿಗಳ ಕಾಲಕ್ಕೆ

ಆ ಹೊತ್ತು ಹುಟ್ಟುವ ಚರ್ಚೆ, ಸಂವಾದ, ಆ ಮಟ್ಟಿಗಿನ 'ಗುಂಪುಗಾರಿಕೆ'ಗಳೆಲ್ಲವೂ ಹೊಸ 'ಸಾಹಿತ್ಯ ಸೃಷ್ಟಿಗೆ' ಪ್ರೇರಣೆ, ಕಾರಣಗಳಾದವು. ಆದರೆ ಈ 'ಹತ್ತು ವರುಷಗಳಿಂದೀಚೆಗೆ ನೂರಾರು ಬರಹಗಾರರು ಯಾವ ಶೂನ್ಯದಿಂದ ತಮ್ಮ ಗ್ರಹಿಕೆಗಳನ್ನು ಗಟ್ಟಿಗೊಳಿಸಿ ಕೊಳ್ಳಬಲ್ಲರು?' ಅಲ್ಲಲ್ಲಿ ಕೆಲ 'ನಡುಗಡ್ಡೆ'ಗಳಲ್ಲಿ ನಡೆಯುತ್ತಿರುವ ಚರ್ಚೆ-ಗುದ್ದಾಟಗಳ ಸದ್ದಾದರೂ ಎಷ್ಟು ಬರಹಗಾರರಿಗೆ ತಲುಪುತ್ತಿದೆ? ಅಥವಾ ಈ 'ನಡುಗಡ್ಡೆ'ಗಳು ಎಷ್ಟು ಬರಹಗಾರರನ್ನು ಒಳಗೊಳ್ಳಬಹುದು.

ಇಂತಹ ಸಂದರ್ಭದಲ್ಲಿ ಹೊಸ ಬರಹಗಾರರೆದುರು 'ಬರೇ ಮಾದರಿ' ಗಳಿವೆ ಹೊರತು 'ದಾರಿ'ಗಳಿಲ್ಲ. ಸಾಹಿತ್ಯಕ ಸಾಧನೆಗಳ ಎತ್ತರದಲ್ಲಿ ನಿಂತವರು, ಕೆಳಗಿನವರ ಕಡೆ ಕೈಚಾಚಿ ಮೇಲೆತ್ತಿಕೊಂಡಿರುವ ಹೆಚ್ಚಿನ ಉದಾಹರಣೆಗಳೇನಿಲ್ಲ. ಬರಹಗಾರರ, ಬರಹದ ಸತ್ವಸೌಂದರ್ಯ ಗಳನ್ನು 'ಪ್ರಕಟಿಸಿ'ಯೇ ತಮ್ಮ ಅಸ್ತಿತ್ವ ಸಾಬೀತು ಪಡಿಸಿಕೊಳ್ಳಬೇಕಾದ ಪರಿಸ್ಥಿತಿ ಯಲ್ಲಿ ಉಸಿರುಗಟ್ಟಿ ಸತ್ತವರ ನಡುವೆ, ಕೆಲವರಂತೂ ಪತ್ರಿಕೆಗಳಲ್ಲಿ ಒಂದಿಷ್ಟು ಜಾಗ ಗಿಟ್ಟಿಸಿ ಕೊಂಡು ಪ್ರಾಣವುಳಿಸಿಕೊಂಡಿದ್ದಾರೆ. ಹರ ಸಾಹಸ ಮಾಡಿ 'ಕೃತಿ ಪ್ರಕಟಿಸಿದ' ಬರಹಗಾರರು ಪ್ರಕಾಶನ ಮಾರಾಟಗಳ ಭಾರದಲ್ಲೇ ಸುಸ್ತಾಗಿ ಮತ್ತೊಂದರ ಸುದ್ದಿ ಎತ್ತದಷ್ಟು ನಿತ್ರಾಣರಾ ಗಿದ್ದಾರೆ. ಇಂಥಾದ್ದರಲ್ಲಿ ಪ್ರಕಟಗೊಂಡ ಕೃತಿಗಳು ಎಷ್ಟರ ಮಟ್ಟಿಗೆ ಚರ್ಚೆ ಗೊಳಗಾಗಿವೆ? ಅಂದರೆ ಒಳ್ಳೆಯ ಕೃತಿಗಳೇ ಇಲ್ಲ ಎಂದರ್ಥವೇ? ಹೊಸ ಬರಹಗಳನ್ನು ಒಳಮನಸ್ಸಿನಿಂದ ಕೈಗೆತ್ತಿಕೊಂಡು ಅದೆಷ್ಟು ಹಳೆ/ಹಿರಿ ಬರಹಗಾರರು ವಿಮರ್ಶೆ ಮಾಡಿದ್ದಾರೆ ಎಂಬಂತಹ ಹಲವಾರು ಪ್ರಶ್ನೆಗಳು-ಬೇಗುದಿಗಳಾಗಿ ಹೊಸ ಬರಹಗಾರರನ್ನು ಸುಡುತ್ತಿವೆ. ಮತ್ತೇನೇ ಹೇಳಿದರೂ ಇದರ ಸುತ್ತಲೇ ತಿರುಗಬೇಕು. ಇಂತಹ 'ಒಣಗಾಲ'ದಲ್ಲಿಯೂ ಅಸಂಖ್ಯ ಒಳ್ಳೆಯ ಕವಿತೆಗಳು, ಕತೆಗಳು, ಹೊಸ ಬರಹಗಾರರಿಂದ ಹುಟ್ಟುತ್ತಿವೆ. ಸಂಶೋಧನಾ ಕ್ಷೇತ್ರದಲ್ಲಿ ಎಷ್ಟೆಲ್ಲ ಹೊಸಬರು ಕ್ರಿಯಾ ಶೀಲರಾಗಿದ್ದಾರೆ. ಪತ್ರಿಕೋದ್ಯಮ ದಲ್ಲಿ ಕೂಡ. ಆರೀಫ್ ಅರಕೇರಾ, ಪಿ ಯು ಸಿ ಓದುತ್ತಿರುವ ರಾಯಚೂರಿನ ಹುಡುಗ. ಈತ ಹೀಗೆ ಬರೆಯುತ್ತಾನೆ;

ಕವಿ ಹೇಳಿದ-
ಬಂದೂಕಿನ ನಳಿಕೆಗೆ
ಜೇಡ ಬಲೆ ನೇಯ್ದಿದೆ.
ಇತಿಹಾಸ ಹೇಳಿತು-
ಬಂದೂಕಿನ
ರೂಪಾಂತರ ಅಷ್ಟೇ.....

ಇನ್ನೊಬ್ಬ ಗೆಳೆಯ ಗಣೇಶ ಹೊಸ್ಮನೆ. ಹೈಸ್ಕೂಲು ದಾಟಿ, ಕಾಲೇಜ್ ಕಟ್ಟೆ ಹತ್ತಲಾಗದ ಕಡುಕಷ್ಟವನ್ನೆಲ್ಲ ಮೈಮೇಲೆ ಹೊತ್ತುಕೊಂಡು, ಮಲೆನಾಡಿನ ನಡುವೆ ಅಂಗೈಯಗಲದ ಭೂಮಿ ಯಲ್ಲಿ ಅಡಿಕೆ ಬೆಳೆಯುವುದನ್ನೇ ಬದುಕಾಗಿಸಿಕೊಂಡ ಕೃಷಿಕ. ಈತನ ಅನೇಕ ಒಳ್ಳೆಯ ಕವಿತೆಗಳ ಸಾಲುಗಳೂ ನೆನೆಪಾಗುತ್ತವೆ. ಇಂತಹ ಅನೇಕ ಕವಿ ಮಿತ್ರರು ಕನ್ನಡ ಸಾಹಿತ್ಯದ ಯಾವುದೇ

ಚರ್ಚೆಯಲ್ಲಿ ಪಾಲು ಪಡೆದವರಲ್ಲ. ಪಾಲಿನ ಆಸೆಗಾಗಿ ಕವಿತೆ ಬರೆಯದೇ ತಮ್ಮ ಪಾಡಿಗೆ ತಾವು 'ಬೆಳೆ'ಯುತ್ತಿರುವವರು. ಪರಸ್ಪರ ಸಂಪರ್ಕವೇ ಇಲ್ಲದ ಪೂರ್ಣ ಅಪರಿಚಿತರಾದ ಇವರಿಬ್ಬರಿಗೂ ಇನ್ನೂ ವಯಸ್ಸು ಇಪ್ಪತ್ತೈದೂ ಆಗಿಲ್ಲ.

ನನ್ನನ್ನು ತಮ್ಮನನ್ನಾಗಿಸಿಕೊಂಡು ಖುಷಿ ಪಡುವ ನನ್ನ ತಂಗಿಗಿಂತಲೂ ಚಿಕ್ಕ ವಯಸ್ಸಿನ ಉಷಾರಾಣಿ ಜೊತೆ ಮೊನ್ನೆಮೊನ್ನೆ ಮಾತಾಡುತ್ತಿದ್ದೆ. 'ಕವಿ, ಕಾರ್ಯಕರ್ತನಾದಾಗ ಆತನ ಕಾವ್ಯ ಸೃಷ್ಟಿ ಆ ಮಟ್ಟಿಗೆ ನಿಂತು ಹೋದರೆ?' ಎಂಬ ನನ್ನ ಕೃತಕ ಆತಂಕದ ಮಾತು ಬಾಯಲ್ಲಿರುವಾಗಲೇ ಆಕೆ ಸ್ಪಷ್ಟವಾಗಿ ತಕ್ಷಣ ನುಡಿದಳು. "ಹೋಗಲೀ ಒಳ್ಳೇದೊಂದು 'ಕೆಲಸ' ಆಗ್ತದಂದ್ರೆ ಒಂದಿಷ್ಟು ಕವನಗಳನ್ನು 'ಬರೀಲಿಕ್ಕೆ' ಆಗ್ದಿದ್ರೆ ಬ್ಯಾಡ. ಅನುಭವ ಸಿಕ್ರೆ ಇನ್ನೂ ಚೆನ್ನಾಗಿ ಬರೀಬಹುದಲ್ಲ?"

ಈ ಮಾತುಗಳಿಗೆ ಬಹುಶಃ ಒಂದು ಕಾವ್ಯ ಸಂದರ್ಭವನ್ನೇ ಚಿತ್ರಿಸುವ ಮತ್ತು ಕವಿತ್ವಕ್ಕೊಂದು ಸಿದ್ಧಾಂತವನ್ನು ಕಟ್ಟುವ ಅಂತಃಸತ್ವವಿದೆ ಎಂದು ಕೊಂಡಿದ್ದೇನೆ. ತಮ್ಮ ಸಂಕಲನಗಳನ್ನೇನೂ ಪ್ರಕಟಿಸದ ಈ ಆರೀಫ್, ಗಣೇಶ್, ಉಷಾ - ಈ ಮೂರು ಮುವ್ವತ್ತು ವಯಸ್ಸಿಗೆ ಮಾರು ದೂರವಿರುವ ಕವಿ ಮಿತ್ರರ ಪ್ರೀತಿ ಮತ್ತು ಕೃತಿಗಳ ಮೂಲಕ ನಾನು ನಿಜಕ್ಕೂ ಹೊಸದಾಗಿ ಸಾಹಿತ್ಯ ಸೃಷ್ಟಿಸುವವರ ಬಗೆಗಿನ ಅನೇಕ ಪ್ರಶ್ನೆ-ಸಂದೇಹಗಳಿಗೆ ಉತ್ತರವನ್ನು ಕಂಡುಕೊಂಡಿದ್ದೇನೆ.

ಉಷಾ ಕವಿತೆಗಳನ್ನು ಬರೆಯುವುದರ ಪ್ರಭಾವಕ್ಕೊಳಗಾದ, ಅವರ ಪಕ್ಕದ ಮನೆಯ ಕೆ. ಗೀತಾ, ೭ನೇ ತರಗತಿಯಲ್ಲಿ ಓದುತ್ತಿರುವ, ಕೂಲಿ ಕುಟುಂಬದ ಸಣ್ಣ ಹುಡುಗಿ. ಈಕೆ ಒಂದು ದಿನ 'ಅಕ್ಕಾ ಅಕ್ಕಾ, ನಾನೂ ಕವನ ಬರ್ದೀನಕ್ಕ' ಎಂದು ಉತ್ಸಾಹದ ಬುಗ್ಗೆಯಾಗಿ ನಮ್ಮೆದುರು ತಂದ ಸಾಲುಗಳನ್ನು ಓದಿದಳು. ಹೀಗೆ;

ಮಳೆ ಬಂದಾಗ
ಮನೆ ಸೋರಿದ ನೆನಪು
ಪಾತ್ರೆ ಇಟ್ಟಂತ ನೆನಪು
ಪಕ್ಕದ ಮನೆಯಲ್ಲಿ
ಮಲಗಿದ ನೆನಪು.

ಸೋರುವ ಮನೆಯ ಅನುಭವ ನನ್ನದೂ ಆದ್ದರಿಂದ ಈ ಕವಿಯತ್ರಿಯನ್ನೂ, ಆಕೆ ತನ್ನ ಉತ್ಸಾಹದ, ಆ ಸಾಲುಗಳಲ್ಲಿ ಕಟ್ಟಿಕೊಟ್ಟ ಚಿತ್ರಣವನ್ನೂ ನಾನೆಂದೂ ಮರೆಯಲಾರೆ. ಕನ್ನಡ ಕಾವ್ಯದ ಭವಿಷ್ಯದ ಬಗ್ಗೆಯೂ ನಾನು ಈ 'ನೆನಪಿನ' ಮೂಲಕ ಪ್ರತಿಕ್ರಿಯಿಸುತ್ತಿದ್ದೇನೆ.

ಒಬ್ಬ ಕತೆಗಾರ ಮಿತ್ರ ಒಮ್ಮೆ ಮಾತುಗಳ ನಡುವೆ ಇದ್ದಕ್ಕಿದ್ದಂತೆ -"ಕವಿತೆಗಳಿಗೆ ಇವತ್ತು ಒಳ್ಳೇ ಮಾರ್ಕೆಟ್ ಇದೆ. ಅದಕ್ಕೆ ನಾನು ಇನ್ಮೇಲೆ ಕವಿತೆಗಳನ್ನೇ ಬರೀಬೇಕು ಅಂದ್ಕೊಂಡಿದ್ದೀನಿ" ಎಂದ. ಹಾಗೆನ್ನಲು ಕಾರಣಗಳಿದ್ದುವು. ಆದರೆ ಅವನ ಮಾತಿನಲ್ಲಿ ತೂರಿಕೊಂಡ 'ಮಾರ್ಕೆಟ್'ಗೆ ಸಾಹಿತ್ಯಕ ಚರ್ಚೆಯಲ್ಲಿ ಯಾವೆಲ್ಲ ವಿಶೇಷ ಅರ್ಥಗಳು ಇರಬಹುದೆಂದು ಅರಿಯುತ್ತಿದ್ದೇನೆ.

ಇನ್ನೊಬ್ಬ ಕವಿಮಿತ್ರ ಒಮ್ಮೆ ಇದ್ದಕ್ಕಿದ್ದಂತೆ ಅಂದು ಬಿಟ್ಟ. "ಏ... ಈ ಕವನ, ಗಿವನ ಬಿಟ್ಟು ಬಿಡಬೇಕು ಮಾರಾಯ. ಈ ಗೋಷ್ಠಿ ಅಂತೆ, ಈ ಸಮಾರಂಭ ಅಂತೆ... ಇಷ್ಟು ಬಿಟ್ರೆ... ಎಲ್ಲೀ...ಯಾ ಸಂಕಲನದ ಬಗ್ಗೆಯಾದ್ರೂ...ಯಾ ಕವಿ ಬಗ್ಗೆಯಾದ್ರೂ ಎಲ್ಲಿ ಗಂಭೀರ ಚರ್ಚೆ ಆಗ್ಲಿಕ್ಕ ಹತ್ಯಾದ...ಕತೀ ಗಿತೀನರಾ ಬಂದ್ರ ಒಂದಿಷ್ಟು ಪತ್ರಿಕೆಯೊಳಗರಾ ಒಂಚೂರು....." ಇವರಿಬ್ಬರ ಉದ್ಗಾರವಾಗಲಿ, ಅಭಿಪ್ರಾಯವಾಗಲಿ ಹಗುರವಾದದ್ದು ಎಂದು ನಾನಂದು ಕೊಂಡಿಲ್ಲ.

ತಮ್ಮ ಅಪಾರ ಮಮಕಾರದಿಂದ ನನ್ನಂತಹವರನ್ನು ತಮ್ಮಂದಿರಂತೆ ಬೆಳೆಸುವ ಕುಂ ವೀ, ನಾನು ಕಂಡಾಗಲೆಲ್ಲಾ ಹೇಳ್ತಿರ್ತಾರೆ. "ಪೀರಣ್ಣಾ...ನೀನು ಕತೆಗಳನ್ನ ಬರೀ. ಚೆನ್ನಾಗಿ ಬರೀಬಲ್ಲಿ. ಬಿಟ್ಬಿಡು ಇದೆಲ್ಲಾ ಪದ್ಯಾ...ಬರೆಯೋದು.....ನೀನು ಕತೇ ಬರೀಬೇಕು. ಒಳ್ಳೇ ಕತೆಗಾರ ಆಗ್ತಿ.....". ನನ್ನನ್ನು 'ಒಳ್ಳೇ ಕವಿ' ಎಂದು ಒಪ್ಪಿಕೊಳ್ಳುತ್ತಲೇ ಕಥಾ ಪ್ರಕಾರದ ಪಕ್ಷಾಂತರಕ್ಕೇಕೆ ಕುಂ ವೀ ನನ್ನನ್ನು ಪ್ರಚೋದಿಸ್ತಾರೆ? ತಾವು ನೆಚ್ಚಿಕೊಂಡ ಪ್ರಕಾರವನ್ನು ಗಾಢವಾಗಿ ಪ್ರೀತಿಸುತ್ತಲೇ ನಾನು ನೆಚ್ಚಿಕೊಂಡ ಪ್ರಕಾರವನ್ನು ನಂತರದ 'ಅಂತರ'ದಲ್ಲಿಡ್ತಾರೆ?

ಸಹೃದಯತೆ ಮತ್ತು ಸಾಹಿತ್ಯದ ಅತ್ಯಾಸಕ್ತಿಗಳನ್ನೇ ಮೂಲ ಮಾಡಿಕೊಂಡು ಪ್ರಕಾಶನದ ಎಲ್ಲ ಪಡಿಪಾಟಲುಗಳನ್ನು ಅನುಭವಿಸುತ್ತಿರುವ ಲೋಹಿಯಾ ಪ್ರಕಾಶನದ ಸಿ. ಚನ್ನ ಬಸವಣ್ಣ ಅನೇಕ ಬಾರಿ ಹೇಳುತ್ತಿರುತ್ತಾರೆ. "ಛೀ,...ಛೀ...ಛೀ... ಯಾವ ಪುಸ್ತಕ ಮಾರಾಟಗಾರರ ಹತ್ರಾನೂ ಕವನ ಸಂಕಲನ ತಗಳ್ತೀರೇನ್ರಿ ಅಂತಾ ಕೇಳಂಗೇ ಇಲ್ಲ. ಅದೂ$_{sss}$ ಒತ್ತಾಯ ಮಾಡಿ ಇಟ್ ಬಂದ್ರೆ, ಮಾರಾಟ ಮಳಿಗೆಗಳಲ್ಲಿ ಹೆಂಗಿಟ್ಟೀರ್ತಿವೋ ಹಂಗೇ ಇರ್ತಾವು. ಇಲ್ಲಿ ಕವನ ಸಂಕಲನ ಕೊಂಡು ಓದೋರು ಯಾರೂ ಇಲ್ಲ. 'ನಮ್ಮ' ಜನಾನಾ ಈಗ ಕೊಂಡು ಓದೋದು ಬಿಟ್ಟಾರ...ಏನೂ$_{sss}$ ನಮ್ಮ ಹುಡುಗ್ರ ಅಂತಾ ನಾವು ಅಭಿಮಾನದಿಂದ ಪ್ರಕಟಿಸ ಬೇಕು ಅಷ್ಟೆ"

ಎಷ್ಟು ಪ್ರಕಾಶಕರಿಗೆ, ಎಷ್ಟು ಕವಿಗಳು 'ನಮ್ಮ ಹುಡುಗ್ರು' ಆಗಲು ಸಾಧ್ಯ? ಪ್ರಕಟಣೆಯೇ ಸಾಧನವಾಗದೇ ಎಷ್ಟೋ ಒಳ್ಳೆಯ ಕವಿಗಳು ಹೇಗೆ ಕಣ್ಣಿಗೆ ಬೀಳಲು ಸಾಧ್ಯ? ಪ್ರಕಟಗೊಂಡ, 'ಹುಡುಗ್ರ' ಕೃತಿಗಳನ್ನು 'ನಮ್ಮ ಜನ' ಯಾಕೆ ಕೇಳ್ತಿಲ್ಲ, ಎಷ್ಟರ ಮಟ್ಟಿಗೆ ಓದಿರಬಹುದು- ಇಂತಹ ಅನೇಕ ಪ್ರಶ್ನೆಗಳು ಹೊಸ ಬರಹಗಾರರವು. ಹೊಸ ಬರಹಗಾರರನ್ನು ಕುರಿತು ಪ್ರಶ್ನೆಗಳು ಏಳುತ್ತಲೇ, ಅವಕ್ಕೆ ಮುಖಾಮುಖಿಯಾಗಿ ಹೊಸ ಬರಹಗಾರರ 'ಪ್ರಶ್ನೆ'ಗಳು ನಿಲ್ಲುತ್ತವೆ. ಬರೀ ನಿಂತರೆ ಸಾಲದು. ಈ ಪ್ರಶ್ನೆಗಳಿಗೆ ಸಿಗುವ ಉತ್ತರವೇ 'ಕನ್ನಡ ನಾಳಿನ ಸಾಹಿತ್ಯ'ವನ್ನು ನಿರ್ಧರಿಸುತ್ತದೆ. ಕನಿಷ್ಠ ಪಕ್ಷ ಈ ಪ್ರಶ್ನೆಗಳಿಗೆ ಮುಖಾಮುಖಿಯಾಗಿ ಸಾಧನ ವಾಗದೇ ಹೋದರೆ...?

●

# ನನ್ನ ಖುಷಿಗಾಗಿ ಬರೆಯುವವನು

• ವೆಂಕಟ್ರಮಣ ಗೌಡ

ಸದ್ಯದ ಕನ್ನಡ ಸಾಹಿತ್ಯದ ಇಡೀ ವಾತಾವರಣವನ್ನೇ ಗ್ರಹಿಸಿದ್ದಾಗಿದೆ ಎಂದು ತಿಳಿದು ನೀವು ಕೇಳಿರುವ ಪ್ರಶ್ನೆಗಳೇ ಗೊಂದಲಮಯವಾಗಿವೆ.

ನಿಮ್ಮ ಪ್ರಶ್ನೆಗಳ ನೆಪದಲ್ಲಿ ನನಗೆ ಹೇಳಬೇಕೆನ್ನಿಸಿರುವುದು ಇಷ್ಟು:

೧. ನಾನು ಬರೆಯಲು ಶುರುಮಾಡಿದ ಅಥವಾ ಸಾಹಿತ್ಯ ಅರ್ಥ ಮಾಡಿಕೊಳ್ಳಲು ತೊಡಗಿದ ನಂತರ, ಕಳೆದ ಹತ್ತು ವರ್ಷಗಳಿಂದ ತಾತ್ವಿಕ ನಿಲುವು, ಮಣ್ಣು ಮಸಿ ಎಂಬುದೆಲ್ಲ ದೇವರಾಣೆಯಾಗಿಯೂ ಅರ್ಥ ಆಗಿಲ್ಲ. ನಾನು ಬರೆಯಬೇಕೆನ್ನಿಸಿದ್ದನ್ನು ನನ್ನ ಖುಷಿಗಾಗಿ ಬರೆಯುವವನು. ಕನ್ನಡ ಸಾಹಿತ್ಯಕ್ಕಾಗಲೀ, ಈ ಸಮಾಜಕ್ಕಾಗಲೀ ನನ್ನಿಂದ ಏನೋ ಸಂದಾಯವಾಗುತ್ತಿದೆ ಎಂಬ ಚಿಲ್ಲರೆ ಭ್ರಮೆಯನ್ನು ತಲೆಯಲ್ಲಿ ತುಂಬಿಕೊಂಡು ನಾನು ಓಡಾಡುತ್ತಿಲ್ಲವಾದ್ದರಿಂದ ನೀವು ಹೇಳುತ್ತಿರುವ ಅರ್ಥದ ಯಾವುದೇ ಬಿಕ್ಕಟ್ಟು, ನಿರಾಶಾದಾಯಕ ಸ್ಥಿತಿ ನನ್ನೆದುರಿಗೆ ಇಲ್ಲ. ಇನ್ನು, ಇವತ್ತಿನ ಹೊಸ ತಲೆಮಾರಿನ ಎಲ್ಲಾ ಬರಹಗಾರರ ದೃಷ್ಟಿಯಿಂದಲೇ ಇದರ ಬಗ್ಗೆ ಯೋಚಿಸಿದರೂ, ಕನಿಷ್ಠ ಮಟ್ಟದ ಬದುಕನ್ನೂ ಬಾಳಲಾರದ ಜನರೆದುರು ಇರುವ ನಿರಾಶಾದಾಯಕ ಸ್ಥಿತಿಗಿಂತ, ನನ್ನನ್ನೂ ಒಳಗೊಂಡಂತೆ ಏನನ್ನೋ ಬರಕೊಂಡು ಹರಕೊಂಡು ಕೂತಿರುವವರ ಎದುರಿಗೆ ಇದೆಯೆಂದು ನೀವು ಭಾವಿಸುತ್ತಿರುವ ನಿರಾಶಾದಾಯಕ ಸ್ಥಿತಿ ದೊಡ್ಡದಲ್ಲವೇ ಇಲ್ಲ. ಯಾಕೆಂದರೆ, ಬರೆದೇ ಹೊಟ್ಟೆ ಹೊರೆದುಕೊಳ್ಳಬೇಕಾದ ಸ್ಥಿತಿಯಲ್ಲಿ ಯಾವ ಬರಹಗಾರನೂ ಇವತ್ತು ಇಲ್ಲ. ಇಷ್ಟರ ಮೇಲೂ ನಿರಾಶಾದಾಯಕ ಸ್ಥಿತಿ ಇದೆ ಎಂದು ಹಲುಬುವವರು ಬರೆಯುವುದು ಬಿಟ್ಟು ಬೇರೆ ಕಸುಬು ಹಿಡಿದು ನಿಶ್ಚಿಂತರಾಗಲು ಬೇಕಾದಷ್ಟು Optionಗಳಿವೆ. ಬರೆಯುವುದು ವೈಯಕ್ತಿಕ ಗರಜು ಎಂದುಕೊಂಡವನು ಎಲ್ಲ ಸ್ಥಿತಿಯನ್ನೂ ಎದುರಿಸುತ್ತಾನೆ, ನಿಭಾಯಿಸುತ್ತಾನೆ.

೨. 'ಸಾಹಿತ್ಯ ಸೃಷ್ಟಿಸುವವರಿಗೆ' ಎಂಬ ಶಬ್ದವೊಂದು ನಿಮ್ಮ ಪ್ರಶ್ನೆಯಲ್ಲಿದೆ. ಏನು ಹಾಗೆಂದರೆ? ಯಾರು ಅವರು? ಅಂಥ ಶಬ್ದದ ಬಳಕೆಯೇ ನನಗಂತೂ ಹಿಡಿಸುವುದಿಲ್ಲ. ಅದು ಅಹಂಕಾರ ಮತ್ತು ಭ್ರಮೆಯದ್ದಾಗಿ ಮಾತ್ರ ತೋರುತ್ತದೆ. ಸಾಹಿತ್ಯ ಸೃಷ್ಟಿಯಾಗಿಯೇ ಇದೆ. ಅದನ್ನು ನೋಡಬೇಕಷ್ಟೇ, ಗ್ರಹಿಸಬೇಕಷ್ಟೆ. ನಮ್ಮ ಬರವಣಿಗೆ ಅಂಥ ದಿಕ್ಕಿನ ಒಂದು ಶೋಧ ಮಾತ್ರ ಎಂದು ನಾನು ನಂಬುತ್ತೇನೆ. ಆದ್ದರಿಂದ, ಇವತ್ತು ತಮ್ಮ ಪಾಡಿಗೆ ತಾವು ಬರೆದುಕೊಂಡಿರುವ ಮಂದಿಗೂ, ಈ 'ಸಾಹಿತ್ಯ ಸೃಷ್ಟಿಸುವ'ವರಿಗೂ ಯಾವುದೇ ಸಂಬಂಧ ಇಲ್ಲ. ಮತ್ತು ಇವರು ದೂರವೇ ಉಳಿದಷ್ಟೂ ತಮ್ಮ ಪಾಡಿಗೆ ತಾವು ಬರೆದುಕೊಂಡಿರುವ ಮಂದಿ ಆರೋಗ್ಯ ಕೆಡಿಸಿಕೊಳ್ಳದೆ ಇನ್ನೂ ಕೆಲಕಾಲ ಬರೆದಾರು. ಅಷ್ಟರ ಮಟ್ಟಿಗೆ ಅದು 'ಸಾಹಿತ್ಯ ಸೃಷ್ಟಿಸುವವರು' ಕನ್ನಡ ಸಾಹಿತ್ಯಕ್ಕೆ ಮಾಡುವ ಉಪಕಾರವಾದೀತು.

೩. ದೊಡ್ಡ ಪ್ರತಿಭೆಗಳಿಲ್ಲವೆಂಬ ಮಾತು ಕೇಳಿಬರುತ್ತಿರುವ ಇಂದಿನ ಸಂದರ್ಭಕ್ಕೆ ನನ್ನ ಪ್ರಶ್ನೆ ಇದು: ದೊಡ್ಡ ಪ್ರತಿಭೆಗಳಾಗಿರುವವರೆಲ್ಲ ಬರವಣಿಗೆಯ ಆರಂಭದ ದಿನಗಳಿಂದಲೇ ದೊಡ್ಡ ಪ್ರತಿಭೆಗಳಾಗಿ ಹೊಮ್ಮಿದವರೇ? ಈಚಿನ ವರ್ಷಗಳಲ್ಲಿ ಬರೆಯುತ್ತಿರುವ ಎಷ್ಟು ಮಂದಿಯನ್ನು ವಿಮರ್ಶಕರು ಬಲ್ಲರು? ಎಷ್ಟು ಮಂದಿಯ ಬರವಣಿಗೆಯನ್ನು ಅವರು ಓದಿದ್ದಾರೆ? ಎಷ್ಟರ ಬಗ್ಗೆ ಪ್ರಾಮಾಣಿಕವಾಗಿ ಮುಟ್ಟಿ ಬರೆದಿದ್ದಾರೆ? ವಿಮರ್ಶಕರು ಒಂದು ವಿಚಾರವನ್ನಂತೂ ನೆನಪಿಟ್ಟುಕೊಳ್ಳಲಿ: ತಾವು ಹೇಳಿದ್ದೆಲ್ಲಾ ಮಾತು, ತಮ್ಮ ಪೆನ್ನಿನಿಂದ ಕನ್ನಡ ಸಾಹಿತ್ಯವನ್ನು ಆಡಿಸುತ್ತೇವೆ ಎಂದೆಲ್ಲಾ ಅವರು ಭ್ರಮಿಸುವ ಕಾಲ ಇದಲ್ಲ. ಆ ಭ್ರಮೆಗಳೆಲ್ಲಾ ಅವರವರ 'ಪಿಎಚ್‌ಡಿ'ಗಳಲ್ಲೇ ಹೂತುಹೋದಷ್ಟೂ ಒಳ್ಳೆಯದು. ಹೊಸದಾಗಿ ಬರೆಯುತ್ತಿರುವವನೊಬ್ಬನ ಬಗ್ಗೆ ಒಂದು ಮಾತು ಹೇಳಲಾರದ ಸಜ್ಜನಿಕೆಯಿಲ್ಲದವರ ಪಾಂಡಿತ್ಯ ಅವರಿಗೆ ಭಾರವೊ ಅಲ್ಲವೊ, ಆದರೆ ಸಮಾಜಕ್ಕಂತೂ ಭಾರ.

೪. ಹೊಸಬರ ಬರಣಿಗೆಯ ಬಗ್ಗೆ ವಿಮರ್ಶಕರು ನಿರ್ಲಕ್ಷ್ಯ ತೋರಿರುವುದರ ಜೊತೆಗೇ ಪತ್ರಿಕೆಗಳೂ ಕುರುಡಾಗಿರುವಂತಿದೆ ಎಂದು ಯಾರಿಗೂ ಅನ್ನಿಸೀತು. ವಾಸ್ತವವೇನೆಂದರೆ, ಸಾಹಿತ್ಯದ ಗಂಧಗಾಳಿ ಇಲ್ಲದವರೇ ಎಷ್ಟೋ ಸಲ 'ಪುಸ್ತಕೋಪಚಾರ'ದ ಜವಾಬ್ದಾರಿ ವಹಿಸಿಕೊಂಡಿರುತ್ತಾರೆ. ದೊಡ್ಡ ಪ್ರತಿಭೆಗಳ ಬಗ್ಗೆಯೇ ಸರಿಯಾಗಿ ಗೊತ್ತಿರದ ಇವರಿಗೆ ಈಗಿನ್ನೂ ಬರೆಯಲಾರಂಭಿಸಿರುವವರ ಬಗ್ಗೆ ತಿಳಿಯುವ ಆಸಕ್ತಿಯೂ ಇರುವುದಿಲ್ಲ. ಇಂಥವರಿಂದ ಒಳ್ಳೆಯ ಸಾಹಿತ್ಯಕ್ಕೆ ನ್ಯಾಯ ಸಲ್ಲುವುದು ಹೋಗಲಿ, ಮಾಧ್ಯಮದ ಮರ್ಯಾದೆಯನ್ನೂ ಇಂಥವರು ಹಾಳುಗೆಡುವುತ್ತಾರೆ. ಎಲ್ಲೆಡೆಯೂ ಎಲ್ಲ ಕಾಲದಲ್ಲೂ ಹೀಗೆ ಎಂದಲ್ಲದಿದ್ದರೂ, ಬರೆಯುವವರು ಧನ್ಯತೆಗಾಗಿ ಅಲ್ಲಿ ಹುಡುಕುವುದು ಅವಶ್ಯವಿಲ್ಲ ಎಂಬುದಕ್ಕಾಗಿ ಈ ಮಾತು.

ಇಂಥ ಸ್ಥಿತಿ, ವಾತಾರವಣ ಏನಾರಾ ಒಂದೆನ್ನಿ; ಇಲ್ಲಿ, ನಿಜವಾಗಿಯೂ ಬರವಣಿಗೆಯನ್ನು ತನ್ನ ಪ್ರೀತಿಯ ಜಗತ್ತಿನ ಒಂದು ಅನಿವಾರ್ಯ ಸಂಕಟವೆಂದು ಸ್ವೀಕರಿಸಿದವನು, ವಿಮರ್ಶಕರ ಎಂಜಲು ಮಾತಿಗಾಗಿ ಆತ್ಮಾಭಿಮಾನ ಬಿಟ್ಟು ದೈನ್ಯದಿಂದ ಕೇಳದವನು, ಪತ್ರಿಕೆಗಳಲ್ಲಿನ ಪುಡಿ ವಿಮರ್ಶೆಗೆ ಹಾತೊರೆಯದವನು ಮಾತ್ರವೇ ಆತ್ಮವಿಶ್ವಾಸ ಕಾಯ್ದುಕೊಂಡು ಬರೆಯಬಲ್ಲ; ಮತ್ತು ಅಂಥ ಬರವಣಿಗೆಗಳಲ್ಲೇ ಕನ್ನಡ ಸಾಹಿತ್ಯದ ಹೊಸ ಕನಸುಗಳು ಗೋಚರಿಸಿಯಾವು ಎಂದು ನಾನು ನಂಬಿದ್ದೇನೆ. ಇಂದು ನನ್ನ ಜತೆಜತೆಗೇ ಬರೆಯುತ್ತಿರುವ ಬಹಳಷ್ಟು ಗೆಳೆಯರು ಇಂಥ ಆತ್ಮವಿಶ್ವಾಸಿಗಳಾಗಿದ್ದಾರೆ. ನನ್ನ ಮಾತನ್ನು ಅವರೂ ಒಪ್ಪುತ್ತಾರೆ ಎಂದು ಭಾವಿಸುತ್ತೇನೆ; ಭ್ರಮಿಸುವುದಿಲ್ಲ.

# ಇದು ಬಹುತ್ವ ಪ್ರತಿಭೆಗಳ ಕಾಲ

● ಕೃಷ್ಣಮೂರ್ತಿ ಬಿಳಿಗೆರೆ

ಸಾಹಿತ್ಯ ಕೇವಲ ಸಾಹಿತ್ಯ ಚಳುವಳಿಗಳಿಂದಲೇ ಸ್ಫೂರ್ತಿ ಪಡೆಯಬೇಕೆಂಬ ನಿಲುವಿಗೆ ಅಂಟಿಕೊಂಡವರು ಮಾತ್ರ ಚಳುವಳಿಗಳೆಲ್ಲಾ ಸ್ಥಗಿತಗೊಂಡಿವೆ ಎಂದು ಠರಾವು ಪಾಸು ಮಾಡಬಹುದು. ಸೃಜನಶೀಲತೆ ಈಗ ತನ್ನ ಎತ್ತರವನ್ನು ಕಳೆದುಕೊಂಡಿದೆ ಎಂದು, (ಬಹುಜನ ಧ್ವನಿ ನಿಚ್ಚಳವಾಗಿ ಕೇಳಿಬರುತ್ತಿರುವ ಈ ಹೊತ್ತಿನಲ್ಲಿಯೂ) ಹೇಳುವವರಿನ್ನೂ 'ಮಹಾಕವಿ, ಕವಿರತ್ನ, ರಾಷ್ಟ್ರಕವಿ' ಮುಂತಾದ ಏಕ ವ್ಯಕ್ತಿ ಪರಂಪರೆಯಲ್ಲಿಯೇ ಇದ್ದಾರೆ. ಆ ಕಾಲ ಮುಗಿದಿದೆ. ಇದು ಬಹುತ್ವದ ಕಾಲ.

೨೦ನೇ ಶತಮಾನದಲ್ಲಷ್ಟೇ ಸಾಹಿತ್ಯ ಒಟ್ಟು ಮನುಕುಲದ ಒಳಿತಿಗೆ ತುಡಿಯಲಾರಂಭಿಸಿದ ಬೆನ್ನಲ್ಲೇ ಅಕ್ಷರಗಳಿಗೆ ತನ್ಮೂಲಕ ಸಾಹಿತ್ಯಕ್ಕೆ ಗರ ಬಡಿದಿದೆ. ಸಾಹಿತ್ಯದ ಆಶಯಗಳ ಕೇಂದ್ರವು ಈಗ ಬದಲಾಗಬೇಕಿದೆ. ಹೀಗೆ ಬದಲಾಗದಿದ್ದರೆ ನಾವೀಗ ಆಡುತ್ತಿರುವ ಮಾತನ್ನೇ ಮತ್ತೆಮತ್ತೆ ಆಡುತ್ತ ಕಾಲ ಕಳೆಯಬೇಕಾಗುತ್ತದೆ. ಸಾಹಿತ್ಯದ ಪ್ರಸುತ್ತತೆ ಇರುವುದು, ಅದು ಪಡೆದುಕೊಳ್ಳುವ ಪ್ರೇರಣೆಯ ಮೂಲ ಎಷ್ಟು ಶಕ್ತಿಶಾಲಿಯಾದದ್ದು ಮತ್ತು ಎಷ್ಟು ಮಾನವೀಯವಾದದ್ದು ಎಂಬುದರ ಮೇಲೆ ನಿಂತಿರುತ್ತದೆ. ಧರ್ಮ ಮತ್ತು ರಾಜಕಾರಣಕ್ಕೆ ಕೊಡಬಾರದ ಆದ್ಯತೆಯನ್ನು ಕೊಟ್ಟುಕೊಂಡು ಬಂದು ಆತ್ಯಂತಿಕವಾಗಿ, ಧರ್ಮ ರಾಜಕಾರಣವಷ್ಟೇ ಸಾಹಿತ್ಯದ ಪ್ರೇರಕಶಕ್ತಿಯೆಂದು ಈಗಲೂ ಭಾವಿಸಿದರೆ ಯಾರಿಗೂ ಉಳಿಗಾಲವಿಲ್ಲ. ಧರ್ಮ ಮತ್ತು ರಾಜಕಾರಣಗಳನ್ನು ಮೀರಿದ ಅಥವಾ ಇವೆರಡನ್ನು ಅಂತರ್ಗತಗೊಳಿಸಿಕೊಂಡು ಇತರೆ ಲೋಕ ವ್ಯವಹಾರಗಳೂ ನಮ್ಮ ಸಾಹಿತ್ಯದ ಪ್ರೇರಕ ಶಕ್ತಿಗಳೆಂದು ಪರಿಗಣಿಸುವುದಾದರೆ, ಈಗಲೂ ನಮಗೆ ಅಂತಹ ಪ್ರೇರಣೆಗಳು ದಂಢಿಯಾಗಿವೆ.

ಫುಕುವೋಕ, ಅಣ್ಣಾಹಜಾರೆ, ರಾಜೇಂದ್ರಸಿಂಗ್ ಮುಂತಾದವರು, ಬದುಕಿನ ವಿವಿಧ ಕ್ಷೇತ್ರಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳು ಒಡ್ಡಿರುವ ಅಪಾಯಕಾರಿ ಸವಾಲುಗಳನ್ನು ಎದುರಿಸುತ್ತಿರುವ ಪರಿ, ಹೊಸ ಮಾನವಿಕ ಚಳುವಳಿಗೆ ನಾಂದಿಯಾಗಿದೆ. ಜೀವಪರ ಬದುಕು ರೂಪಿಸುತ್ತಿರುವ ಇಂತಹ ಚಳುವಳಿಗಳು ನಮ್ಮ ಸಾಹಿತ್ಯಕ್ಕೆ ಪ್ರೇರಕ ಶಕ್ತಿ ಆಗಬಾರದೇಕೆ? ಇವು ಕೃಷಿಕ್ಷೇತ್ರದ ಸೀಮಿತ ಆಂದೋಲನಗಳೆಂದು ಕಿರುಗಣ್ಣಿನಿಂದ ನೋಡಲಾದೀತೆ? ಅನಿಲ್ ಅಗರ್‌ವಾಲ್, ರಾಜೇಂದ್ರಸಿಂಗ್ ಮುಂತಾದವರು ಬಿತ್ತಿದ ಮಳೆಬೀಜದ ಚಳುವಳಿ, ಟಿಕಾಯತ್, ಶರದ್ ಜೋಶೀ, ನಂಜುಂಡಸ್ವಾಮಿ ಮುಂತಾದ ಬೇರು ಮತ್ತು ಹಸಿರುಳ್ಳ ಚಳುವಳಿಗಳಿಗಿಂತ ಮತ್ಯಾವ ಚಳುವಳಿಗಳು ನಮ್ಮ ಬದುಕಿಗೆ, ನಮ್ಮ ಬರಹಕ್ಕೆ ಪ್ರೇರಕವಾಗಬೇಕು? ನಿಜವಾಗಿಯೂ ಪ್ರಜ್ಞಾಸತ್ತಾತ್ಮಕವಾದ ನೆಲಮೂಲದ ಇಂತಹ ಚಳುವಳಿಗಳನ್ನು ಸುತ್ತಲೂ ಇಟ್ಟು

ಕೊಂಡು "ಚಳುವಳಿಗಳೆಲ್ಲ ಸ್ಥಗಿತಗೊಂಡಿವೆ" ಎಂದು ಬೊಬ್ಬೆ ಇಟ್ಟರೆ ಅದಕ್ಕೇನು ಅರ್ಥವಿದೆ! ಮೇಲೆ ಹೇಳಿದ ಚಳುವಳಿಗಳಿಂದ ಪ್ರೇರಣೆ ಪಡೆಯುವುದು, ಕೇವಲ ಪ್ರೇರಣೆ ಪಡೆಯುವಷ್ಟಕ್ಕೆ ನಿಲ್ಲುವುದಿಲ್ಲ. ಅದರೊಟ್ಟಿಗೆ ಚಳುವಳಿಗಳ ಭಾಗವಾಗಬೇಕಾಗುತ್ತದೆ. ಇದು ಕೊಡುಕೊಳುವ ಕ್ರಿಯೆ, ಇದು ಬಿಸಿಲಲ್ಲಿ ಒಣಗುವ ಮಳೆಯಲ್ಲಿ ನೆನೆಯುವ, ಅಧಿಕಾರಗಳನ್ನು ನಿರಾಕರಿಸುವ, ಸ್ಥಾಪಿತ ಹಿತಾಸಕ್ತಿಗಳನ್ನು ಎದುರುಹಾಕಿಕೊಳ್ಳುವ ಇತ್ಯಾದಿ ಕಟುವಾಸ್ತವಗಳನ್ನು ಹುಟ್ಟು ಹಾಕುತ್ತದೆ. ಯಾವ ವಾಸ್ತವಿಕ ಸವಾಲುಗಳು ಇಲ್ಲದೆ ಭ್ರಮಿತ, ಆರೋಪಿ, ನಿರುಪದ್ರವಿ (ಕೇವಲ ಉಪದೇಶ ಕೊಡುವ) ಹುಸಿ ಸವಾಲುಗಳನ್ನೇ ಅಗಿದುಗಿಯುತ್ತಾ ಸ್ವಯಂ ಸುಖವಾಗಿ ಕಾಲ ಕಳೆಯುತ್ತಿರುವ ಇಂದಿನ ಬಹುಪಾಲು ಸಾಹಿತಿಗಳು, ಮೇಲೆ ಹೆಸರಿಸಿದ ವಾಸ್ತವಿಕ ನೆಲೆಯ ಚಳುವಳಿಗಳನ್ನು ತಮ್ಮ ಅಂತರಂಗಕ್ಕೆ ಇಳಿಸಿಕೊಂಡು ಕಾರ್ಯಪ್ರವೃತ್ತರಾಗದಿದ್ದರೆ, ತನ್ನಷ್ಟಕ್ಕೆ ತಾನೆ ಇಂದಿನ, ಇನ್ನು ಮುಂದಿನ ಸಾಹಿತ್ಯಕ್ಕೆ ಘನತೆ ಎಂಬುದು ಪ್ರಾಪ್ತವಾಗಲಾರದು.

ಕನ್ನಡ ಸಾಹಿತ್ಯದ ಸಾಂಸ್ಥಿಕ ಶ್ರೀಮಂತಿಕೆ ಹೆಚ್ಚಿದೆ, ವಿಸ್ತಾರಗೊಂಡಿದೆ. ವಿವಿಧ ಅಕಾಡೆಮಿ, ಪ್ರಾಧಿಕಾರ, ಗ್ರಂಥಾಲಯಗಳು, ಕನ್ನಡ ಸಾಹಿತ್ಯದ ಹೆಸರಿನಲ್ಲಿ ಲಕ್ಷಾಂತರ ರೂಪಾಯಿ ವೆಚ್ಚ ಮಾಡುತ್ತ ಹಬ್ಬ ಉತ್ಸವಗಳನ್ನು ನಡೆಸುತ್ತಿರುವುದು ನಿಜ. ಆದರೆ ಇವೆಲ್ಲ ಆ ಕ್ಷಣದ ಸತ್ಯಗಳಾಗಿ ಅಳಿಸಿಹೋಗುತ್ತಿವೆ. ಇವು ಮಾಡುತ್ತಿರುವ ಸಾಹಿತ್ಯ ಕಾರ್ಯಕ್ರಮಗಳೂ ಅಷ್ಟೇ. ಆದರೆ ಕನ್ನಡ ಸಾಹಿತ್ಯದ ಸಾಮುದಾಯಿಕ ಸ್ಥಿತಿ ದೀನ ದರಿದ್ರವಾದ ಹಂತ ಮುಟ್ಟುತ್ತಿರುವುದು ಢಾಳಾಗಿ ಕಾಣಿಸುತ್ತಿದೆ. ಶ್ರೀಮಂತ, ಮಧ್ಯವರ್ಗದ ಜನ ಇವತ್ತು ತುಡಿಯುತ್ತಿರುವ ದಿಕ್ಕೇ ಬೇರೆ. ಅದು ಸಾಮಾಜಿಕ ಸಾಂಸ್ಕೃತಿಕ ತುಡಿತವಲ್ಲ. ಅದೇನಿದ್ದರೂ ಅತಿ ನಾಗರಿಕತೆಯ ತುಡಿತ. ಇದರೊಳಗೆ ಬಹುತೇಕ ಸಾಹಿತಿಗಳು ಬಿದ್ದು ಒದ್ದಾಡುತ್ತಿರುವುದು ನಗೆ ಹುಟ್ಟಿಸುವ ಸತ್ಯವಾಗಿದೆ. ನಗೆಯನ್ನು ಯಾಕೆ ಹುಟ್ಟಿಸುತ್ತಿದೆ ಎಂದರೆ, ಸಾಹಿತ್ಯದ ಆಶಯ ಒಂದಾದರೆ ಇವರು ಬದುಕುತ್ತಿರುವ ವಿಧಾನ ಅದಕ್ಕೆ ವಿರುದ್ಧವಾಗಿದೆ. ಕನ್ನಡದಲ್ಲಿ ಭಾಷಣ ಕುಟ್ಟಿ ಕನ್ನಡದಲ್ಲಿ ಕತೆ, ಕವಿತೆ, ವಿಮರ್ಶೆ, ಸಂಸ್ಕೃತಿ ಕಥನಗಳನ್ನು ಬರೆಯುವ ಸಾಹಿತಿ ಮಹಾಶಯರು ಸೆಮಿನಾರು, ಅಕಾಡೆಮಿ, ಪ್ರಾಧಿಕಾರಗಳ ಒಳಗೆ ಕನ್ನಡದ ಕಟ್ಟಾಳುಗಳು. ಅವುಗಳಿಂದೀಚೆಗೆ ಬಂದರೆ, ಮನೆಗಳಲ್ಲಿ, ತಮ್ಮ ಸಾಹಿತ್ಯೇತರ ಚಟುವಟಿಕೆಗಳಲ್ಲಿ ಅಪ್ಪಟ ವಿಶ್ವ ಮಾನವರು. ಇಂಗ್ಲೀಷ್ ಇವರ ತಾಯಿ, ಅಮೇರಿಕಾ ಇವರ ತಂದೆ.

ಅಕ್ಷರಗಳು ಅಂಗರೂಪಿಗಳೂ ವಸ್ತ್ರರೂಪಿಗಳೂ ಅಸ್ತ್ರರೂಪಿಗಳು ಅರ್ಥರೂಪಿಗಳೂ ಆಗಿ ಉರಿಯುತ್ತಿರುವ ಇಂದಿನ ಪೊತ್ತಿನಲ್ಲಿ, ಸಾಹಿತ್ಯದ ಭಾವಸ್ವರೂಪವನ್ನು, ಸಾಹಿತಿಯ ಅಂತರಂಗವನ್ನು ಅಳೆಯಲು ಹೊರಟಂತೆ ನನಗೆ ಅನ್ನಿಸಿದೆ. ಹೀಗಾಗುತ್ತಿರುವುದಕ್ಕೆ ತುಂಬಾ ಕಾರಣಗಳಿವೆ. ಸಾವಿರಾರು ವರ್ಷಗಳ ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ, ಅಲ್ಲಿ ಲೌಕಿಕ ಸತ್ಯದ ಹುಡುಕಾಟಕ್ಕಿಂತ ಪಾರಮಾರ್ಥಿಕ ಭ್ರಮೆಗಳನ್ನು ಹಿಡಿಯುವ ಪ್ರಯತ್ನಗಳೇ ನಡೆದಂತೆ ತೋರುತ್ತದೆ. ಈ ಹಿಂದಿನ ಸಾಹಿತಿಗಳು ಮತ್ತವರ ಸಾಹಿತ್ಯ ಅಲ್ಲೊಮ್ಮೆ ಇಲ್ಲೊಮ್ಮೆ ಸಮುದಾಯಕ್ಕಾಗಿ ತುಡಿದಂತೆ ನಾವೀಗ ವರ್ತಿಸುವಂತಿಲ್ಲ. ಮೇಲ್ಪದರದ ಸಾಮುದಾಯಿಕ ತುಡಿತ ಸಾಹಿತಿಗಳಿಗೆ ಜೀವರಕ್ಷೆಗಾಗಿ ಇನ್ನು ಮೇಲೆ ನಿಲ್ಲಲಾರದು.

'ದೊಡ್ಡ ಪ್ರತಿಭೆ'ಗಳ ವಿಷಯಕ್ಕೆ ಬಂದರೆ, ಅನೇಕ ಪ್ರಶ್ನೆಗಳು ಉದ್ಭವಿಸುತ್ತವೆ. ದೊಡ್ಡ ಪ್ರತಿಭೆ ಎಂದರೆ ಏನು? ಯಾರಿಗೆ ದೊಡ್ಡ ಪ್ರತಿಭೆ? ಇವರು ಎಷ್ಟು ಕಾಲದವರೆಗೆ ದೊಡ್ಡ ಪ್ರತಿಭೆ? ಇದನ್ನು ನಿರ್ಧರಿಸುವವರು ಯಾರು? ಇತ್ಯಾದಿ. ಈ ಎಲ್ಲಾ ಪ್ರಶ್ನೆಗಳನ್ನು ಚರ್ಚಿಸುವ ಅಗತ್ಯವಿಲ್ಲ. ಈಗಿನ ಒಂದೇ ಒಂದು ಮುಖ್ಯ ಪ್ರಶ್ನೆ ಎಂದರೆ, ದೊಡ್ಡ ಪ್ರತಿಭೆಗಳು ಈಗ ಯಾಕೆ ಬೇಕು? ಒಂದೋ ಎರಡೋ ದೊಡ್ಡ ಪ್ರತಿಭೆಗಳು ಈಗ ನಾಡನ್ನು ಬದಲಿಸಲಾರವು ಎಂಬುದು ನಮಗೆ ಗೊತ್ತಾಗಿದೆ. ಆದ್ದರಿಂದ ನಮಗೀಗ ಬೇಕಾಗಿರುವುದು ದೊಡ್ಡ ಪ್ರತಿಭೆಯಲ್ಲ. ನೂರಾರು ಸಾವಿರಾರು ಪ್ರತಿಭೆಗಳು. ಈ ಪ್ರತಿಭೆಗಳು ಎದುರಿಸಬೇಕಾಗಿರುವ ಸವಾಲು ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟಕ್ಕೆ 'ಏರುವುದಲ್ಲ', ಸ್ಥಳೀಯ ಮಟ್ಟಕ್ಕೆ ಇಳಿಯುವುದು. ಹೊಸದಾಗಿ ಬರೆಯುತ್ತಿರುವ ಅಷ್ಟೇ ಏಕೆ, ಬರೆಯುತ್ತಿರುವ ಎಲ್ಲ ಬರಹಗಾರರು ಈ ನಿಜವಾದ ಸವಾಲನ್ನು ಸ್ವೀಕರಿಸಲು ಹಿಂದೇಟು ಹಾಕುತಿದ್ದಾರೆ. ಇದರಿಂದಲೇ 'ದಿಕ್ಕು ತೋಚದ ಸ್ಥಿತಿ' ಎದುರಾಗಿದೆ. ಇದು ಸ್ವಯಂಕೃತ ಸ್ಥಿತಿ. ಎಲ್ಲರೂ ಅವರವರ ಪಾಲಿನ ಸವಾಲುಗಳನ್ನು ಎದುರಿಸಲು ಅಣಿಯಾಗುತ್ತಿರುವ ಇಂದಿನ ದಿನಗಳಲ್ಲಿ ಲೇಖಕರು 'ಕ್ರಿಯಾಬರಹ'ವನ್ನು ರೂಢಿಸಿಕೊಳ್ಳದಿದ್ದರೆ ಮೂಲೆಗುಂಪಾಗುವುದು ಖಚಿತ.

ಸಾಹಿತಿಗಳು ತಾವಿರುವ ಕಡೆಗಳಲ್ಲಿ ಆವರಿಸಿಕೊಳ್ಳಬೇಕು. ತಮ್ಮ ಬರಹ ಮತ್ತು ಕ್ರಿಯೆಗಳಿಂದ ಜನರೊಳಗೆ ಒಂದಾಗಬೇಕು. ಇದೂ ನಿಜವಾದ ರಾಜಕೀಯ ಮತ್ತು ಸಾಂಸ್ಕೃತಿಕ ಕ್ರಿಯೆ ಎಂಬುದನ್ನು ಅರಿಯಬೇಕು. ಕೇವಲ ಬರೆಯುವ ಮೂಲಕ ರಾಜ್ಯಮಟ್ಟದ ಹೆಸರು ಮಾಡಬಹುದು, ರಾಷ್ಟ್ರಮಟ್ಟಕ್ಕೆ ಏರಿಬಿಡಬಹುದು. ಆದರೆ ಈ ಹೆಸರುಗಳಿಗೆ ಬೇರುಗಳೇ ಇರದಿದ್ದರೆ ಗತಿಯೇನು. ಇದರ ಅರಿವು ಇಲ್ಲದೇ ಹೋದದ್ದರಿಂದಲೇ ಸಾಹಿತ್ಯ ಚಳುವಳಿಗೆಲ್ಲ ಸಾಹಿತಿಗಳಿಗೇ ಸೀಮಿತವಾದದ್ದು. ಕೊನೆಗೀಗ ಅವೂ ಇಲ್ಲದಂತಾಗಿ ಸಾಹಿತಿಗಳು ಒಬ್ಬಂಟಿಗರಾಗಿ ಓಡಾಡುತ್ತಿರುವುದು, ಸಾಹಿತಿಗಳೆಂದರೆ ವೇದಿಕೆಗಳಿಂದಾಗಿ ಪ್ರಶಸ್ತಿಗಳಿಗಾಗಿ ಹಪಹಪಿಸುವ ಪ್ರಾಣಿಯಾಗಿ ಜನರ ಕಣ್ಣಲ್ಲಿ ಉಲ್ಬಾಡುತ್ತಿರುವುದು, ಕವಿಗೋಷ್ಠಿಗಳಲ್ಲಿ ಕವಿಗಳಷ್ಟೇ ಇರುವುದು, ಸೆಮಿನಾರುಗಳಲ್ಲಿ ಸಾಹಿತಿಗಳ ಮುಖಗಳಷ್ಟೇ ವಿಜೃಂಭಿಸುತ್ತಿರುವುದನ್ನು ಯಾರು ತಾನೇ ಅಲ್ಲಗಳೆಯಲು ಸಾಧ್ಯ. ಈ ಸ್ಥಿತಿಗೆ ಕಾರಣ ಸ್ವಯಂ ಲೇಖಕರೇ ಎಂಬುದನ್ನು ಮನಗಂಡು, ಈಗಲಾದರೂ ಊರ ಕಸ ಗುಡಿಸಿ ನಂತರ ಊರೊಳಗೆ ಕವಿತೆ ಕಥೆ ಓದುವ, ರೈತರ, ಕಾರ್ಮಿಕರ ಕಷ್ಟಜೀವಿಗಳೊಟ್ಟಿಗೆ ಸೇರಿ ಮಾತುಕತೆಗೆ ಇಳಿಯುವ, ದೈಹಿಕ ಶ್ರಮಕ್ಕೂ ಮನಸ್ಸು ಮಾಡಿದರೆ, ಲೇಖಕ ಇವತ್ತು ಪ್ರಸ್ತುತವಾಗಬಹುದು. ಅದು ಬಿಟ್ಟು ಜನ, ಪುಸ್ತಕ ಓದುವುದಿಲ್ಲ, ಪುಸ್ತಕ ಕೊಳ್ಳುವುದಿಲ್ಲ, ಸಾಂಸ್ಕೃತಿಕ ಎಚ್ಚರವೇ ಇಲ್ಲ ಇತ್ಯಾದಿ ಪುಕ್ಕಟೆ ಹೇಳಿಕೆಗಳಿಂದ ಸಮಸ್ಯೆ ಬಗೆ ಹರಿಯುವುದಿಲ್ಲ. ಹುತ್ತ ಬಡಿದಂತಾಗುತ್ತದೆ ಅಷ್ಟೆ.

# ನಿರಾಶಾದಾಯಕ ವಾತಾವರಣ ಇದೆ

• ಕಂನಾಡಿಗಾ ನಾರಾಯಣ

ಕನ್ನಡದಲ್ಲಿ ಹೊಸದಾಗಿ ಸಾಹಿತ್ಯ ಸೃಷ್ಟಿಸುವವರಿಗೆ ಇಂದು ನಿಜಕ್ಕೂ ನಿರಾಶಾದಾಯಕವಾದ ಗೊಂದಲಮಯವಾದ ವಾತಾವರಣ ಇದೆ ಎಂದೇ ನಾನು ಭಾವಿಸುತ್ತೇನೆ. ಸಾಹಿತ್ಯಿಕ ಮನಸ್ಸನ್ನು, ಸಂವೇದನಾಶೀಲ ಮನಸ್ಸನ್ನು ಹುಟ್ಟುವ ಎಲ್ಲಾ ಮನುಷ್ಯರೂ ಹೊಂದಿರುತ್ತಾರೆ. ಆದರೆ ಎಲ್ಲೋ ಕೆಲವರಿಗೆ ಎಲ್ಲೋ ಕೆಲವು ಸಂದರ್ಭದಲ್ಲಿ ಮಾತ್ರ ಇಂತಹ ಸಂವೇದನೆಯ ಝಳಕು ತಗುಲಿ, ಅದರಲ್ಲಿ ಆಸಕ್ತಿಯನ್ನು ಕಂಡುಕೊಂಡು ಕಲೆ-ಸಾಹಿತ್ಯದಲ್ಲಿ ಆಸಕ್ತಿಯನ್ನು ರೂಢಿಸಿ ಕೊಳ್ಳುತ್ತಾರೆ. ನಮ್ಮ ವಿಶ್ವವಿದ್ಯಾಲಯಗಳು ಸಾಹಿತ್ಯವನ್ನು ಬೋಧಿಸುತ್ತವೆಯೇ ವಿನಾ, ಒಂದು ಕ್ರಿಯಾಶೀಲವಾದ ಸೃಜನಶೀಲವಾದ ಮನಸ್ಸನ್ನು ಸೃಷ್ಟಿಸುವಲ್ಲಿ ವಿಫಲವಾಗುತ್ತಿವೆ. ಈವತ್ತಿನ ಕನ್ನಡ ಸಾಹಿತ್ಯಿಕ ಸಂದರ್ಭದಲ್ಲಿ ಒಬ್ಬನೇ ಒಬ್ಬ ವ್ಯಕ್ತಿಯೂ ಸ್ವಆಸಕ್ತಿಯಿಂದಲ್ಲದೇ ಓದಿನ ಕಾರಣಕ್ಕಾಗಿ ಸೃಜನಶೀಲ ಲೇಖಕನಾಗಿರುವುದನ್ನು ನಾನು ಕಾಣೆ. ಅಂದರೆ ವಿದ್ಯಾಭ್ಯಾಸದ ಬೇರೆ ಪ್ರಕಾರಗಳಲ್ಲಿಯಂತೆ (ಉದಾಹರಣೆಗೆ ವೈದ್ಯಕೀಯ, ಇಂಜಿನಿಯರಿಂಗ್ ಕೋರ್ಸ್‌ಗಳಂತೆ) ಸಾಹಿತ್ಯ ಓದಿದ್ದಕ್ಕಾಗಿ ಸಾಹಿತಿಯಾದ (ವಿಮರ್ಶಕನಲ್ಲ) ಎಂಬುವವರು ವಿರಳ ಅಥವಾ ಇಲ್ಲವೇ ಇಲ್ಲ ಎನ್ನಬಹುದು.

ವಿಪರ್ಯಾಸವೆಂದರೆ, ಈವತ್ತಿನ ಸಂದರ್ಭದಲ್ಲಿ ಸಾಹಿತ್ಯವನ್ನು ಸೃಷ್ಟಿಸುವ ಕ್ರಿಯೆಯಲ್ಲಿ ತೊಡಗಿದ ಅನೇಕ ಜನ ಜೀವನಕ್ಕೋಸ್ಕರವಾದರೂ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿದ್ದಾರೆ. ಆದರೆ ವಿಮರ್ಶಕರು ಮಾತ್ರ ಅಕೆಡೆಮಿಕ್ ವಲಯದವರೇ ಆಗಿರುತ್ತಾರೆ. ಅಕೆಡೆಮಿಕ್ ವಲಯದಲ್ಲಿರುವ ಕೆಲವರು ನಾನ್-ಅಕೆಡೆಮಿಕ್ ಮಂದಿ ಬರೆಯುವ ಸಾಹಿತ್ಯದಲ್ಲಿ ಹುರುಳಿಲ್ಲ ಎಂದು ಸ್ವಯಂ ಘೋಷಿಸಿ ಅಥವಾ ಸಂಪರ್ಕದ ಕೊರತೆಯಿಂದಾಗಿಯೋ ಕೃತಿಯೊಂದನ್ನ ಸೀರಿಯಸ್ ಆಗಿ ಓದುವ ಗೋಜಿಗೂ ಹೋಗದೇ, ಕಣ್ಣೋಟದಲ್ಲೇ ಮೌಲ್ಯವನ್ನು ಅಳೆದು ಬಿಡುತ್ತಿರುವುದು ಈವತ್ತಿನ ಅಪಾಯಗಳಲ್ಲಿ ಒಂದು. ಅಕೆಡೆಮಿಕ್ ವಲಯದಲ್ಲಿರುವವರ ಅನುಭವಗಳು ಈವತ್ತು ಸೀಮಿತಗೊಂಡಿವೆ. ಬದುಕಿನ ಬೇರೆ ಬೇರೆ ಸ್ತರಗಳಲ್ಲಿ ಅವರ ಅನುಭವದ ಬಾಹುಗಳು ಚಾಚಲಾರದೇ ಅಂಗವಿಕಲವಾಗಿವೆ. ಆದಾಗ್ಯೂ ಕುರುಡರು ಸೇರಿ ಆನೆ ಮುಟ್ಟಿದ ಕತೆಯಂತೆ ಪರಸ್ಪರ ಒಬ್ಬರ ಬೆನ್ನನ್ನು ಒಬ್ಬರು ತಟ್ಟಿ ಕೊಳ್ಳುತ್ತಾ, ತಮಗೆ ಕಂಡದ್ದನ್ನೇ ಸಾಹಿತ್ಯ ಎಂದು ಕೊಂಡು ಬಿಟ್ಟಿರುವುದು ಮಾತ್ರ ವಿಪರ್ಯಾಸ.

ಸಾಹಿತ್ಯಕ್ಕೆ ಬೇಕಾದ ಪ್ರಚಾರವನ್ನು ಕೊಡುವ ಸಾಮರ್ಥ್ಯವುಳ್ಳ ಪತ್ರಿಕೆಗಳೂ ಸಹ, ಇಂದು ಜನಪ್ರಿಯ ಸಾಹಿತ್ಯಕ್ಕೆ ಮರುಳಾಗಿ ಬೇಕಿದ್ದೋ ಬೇಕಿಲ್ಲದೆಯೋ ಅಗ್ಗದ ಪ್ರಚಾರಕ್ಕೆ ಕೈಚಾಚಿ ನಿಂತುಕೊಂಡಿವೆ. ಅವರಿಗೂ ಗಂಭೀರ ಸಾಹಿತ್ಯ ಬೇಕಾಗಿಲ್ಲ. ಕಾರಣ ಸ್ಪಷ್ಟ. ಪತ್ರಿಕೆಗಳ ಓದು

ಗರಲ್ಲಿ ಬಹುಪಾಲು ಮಹಿಳೆಯರು ಮತ್ತು ಹದಿವಯಸ್ಸಿನವರು. ಅವರಿಗೆ ರೋಮಾಂಚನ ಬೇಕು, ಥ್ರಿಲ್ ಬೇಕು ಅಷ್ಟೆ. ಜೀವನ ಮೌಲ್ಯ ಕಟ್ಟಿಕೊಂಡು ಅವರಿಗೇನಾಗಬೇಕಿದೆ. ಹೀಗಾಗಿ ಸೀರಿಯಸ್ ಆಗಿ ಬರೆಯಬೇಕೆಂದಿರುವ ಲೇಖಕ ಓದುಗರ ಕೊರತೆಯನ್ನು, ಪ್ರಚಾರದ ಕೊರತೆಯನ್ನು ತನ್ಮೂಲಕ ಪ್ರಕಾಶನದ ಕೊರತೆಯನ್ನು ಅನುಭವಿಸುತ್ತಾನೆ. ತಾನು ಬರೆದದ್ದು ಎಲ್ಲೂ ಪ್ರಕಟವಾಗದೇ ಇದ್ದಾಗ ಆತ ಆತಂಕಗೊಳ್ಳುತ್ತಾನೆ, ತನ್ನ ಬರವಣಿಗೆಯಲ್ಲಿ ಶಕ್ತಿ ಇಲ್ಲವೇನೋ ಎಂದು ಬಗೆಯುತ್ತಾನೆ. ಮುಂದೆ ಆ ತರಹದ್ದನ್ನ ಬರೆಯಲಿಕ್ಕೇ ಹಿಂಜರಿಯಲಾರಂಭಿಸುತ್ತಾನೆ. ಹೀಗಾಗಿ ಕ್ರಮೇಣ ಆತನ ಸೃಜನಶೀಲ ಮನಸ್ಸೇ ಸತ್ತು ಹೋಗುವ ಸಾಧ್ಯತೆ ಹೆಚ್ಚಾಗಿದೆ.

ಕೆಲವು ಪತ್ರಿಕೆಗಳಲ್ಲಿನ ವಿಮರ್ಶೆಯೂ ಇದಕ್ಕೆ ಪೂರಕವಾಗೇ ಇರುತ್ತದೆ. ಈ ಲೇಖಕನಿಗೆ ಕುಣಿತವೇ ಗೊತ್ತಿಲ್ಲ ಎಂದೋ, ವಾಕ್ಯರಚನೆ ಸರಿಯಿಲ್ಲವೆಂದೋ ಯಾವುದೋ ಮೂಲೆಯ ಸಣ್ಣ ಸಣ್ಣ ತಪ್ಪುಗಳನ್ನು ಹಿಡಿದು ಲೇಖಕನ ಮೂಲಸೆಲೆಯನ್ನೇ ಬತ್ತಿಸಿಬಿಡುವ ಕೆಲಸವನ್ನು ಅದು ಮಾಡುತ್ತವೆ. ಆದರೆ ಆ ಲೇಖಕ ಏನನ್ನು ಹೇಳಲು ಪ್ರಯತ್ನಿಸುತ್ತಿದ್ದಾನೆ; ಅವನ ಅನುಭವ ಏನು ಎಂಬುದನ್ನ ನಮ್ಮ ವಿಮರ್ಶಕರು ಅವಶ್ಯವಾಗಿ ಮನಗಾಣಬೇಕಾಗಿದೆ. ಬರೆಯುವ ಓಘದಲ್ಲಿ ಸಣ್ಣಪುಟ್ಟ ತಪ್ಪುಗಳು ಆಗಬೇಕು. ಇಲ್ಲವಾದರೆ ಆತ ಅತ್ಯಂತ ಪ್ರಜ್ಞಾಪೂರ್ವಕ ಸ್ಥಿತಿಯಲ್ಲಿ ಬರೆಯುತ್ತಿದ್ದಾನೆ ಎಂದು ಅರ್ಥ. ನಿಜವಾದ ಸೃಜನಶೀಲ ಸಾಹಿತ್ಯವನ್ನು ಬರೆಯುತ್ತೇನೆ ಎನ್ನುವುದು ಸುಳ್ಳು; ಅದೇ ಬರೆಸಿಕೊಳ್ಳುತ್ತದೆ, ಬರೆಸಿಕೊಳ್ಳಬೇಕು. ಅಕೆಡೆಮಿಕ್ ವಲಯದವರಿಗೆ ಮಕ್ಕಳ ಅಕ್ಷರಗಳನ್ನು, ತಪ್ಪುಗಳನ್ನು ತಿದ್ದೀತಿದ್ದಿ, ಸಾಹಿತ್ಯದಲ್ಲಿಯೂ ಅಕ್ಷರದ ತಪ್ಪುಗಳನ್ನ ಹುಡುಕುವುದರಲ್ಲಿ ತಮಗರಿವಿರದೇ ತೊಡಗಿಕೊಂಡು ಬಿಟ್ಟಿರುತ್ತಾರೇನೋ ಅನಿಸುತ್ತದೆ. ವಿಪರ್ಯಾಸವೆಂದರೆ, ಹೀಗೆ ತಪ್ಪು ಹುಡುಕುತ್ತಿದ್ದ ಲಂಕೇಶ್‌ರಂತವರೇ, ನಿಜವಾಗಿಯೂ ಕಾಗುಣಿತ ಗೊತ್ತಿಲ್ಲದ, ವಾಕ್ಯ ರಚನೆ ಗೊತ್ತಿಲ್ಲದಂತಹವರವನ್ನೂ ದೊಡ್ಡ ಸಾಹಿತಿಗಳಂತೆ ಪ್ರತಿಬಿಂಬಿಸಿದ್ದಾರೆ.

ನಮ್ಮ ವಿಮರ್ಶೆಯ ಮಾನದಂಡಗಳೂ ಇಂದು ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ತಮಗೆ ಬೇಕಾದವರ ಪುಸ್ತಕಗಳ ವಿಮರ್ಶೆಗಳು ಮಾತ್ರ ಪತ್ರಿಕೆಗಳಲ್ಲಿ ಅಪಿಯರ್ ಆಗುತ್ತವೆ. ಇಲ್ಲೆಲ್ಲಾ ಜಾತಿ ರಾಜಕೀಯ, ಗುಂಪು ರಾಜಕೀಯ, ಸೆಕ್ಸ್ ರಾಜಕೀಯ ಕೆಲಸ ಮಾಡುತ್ತವೆ. ಉದಾಹರಣೆಗೆ ನನ್ನದೊಂದು ಪುಸ್ತಕವನ್ನು ಹಿರಿಯ ವಿಮರ್ಶಕರೊಬ್ಬರು ಪ್ರಸಿದ್ಧ ಪತ್ರಿಕೆಯೊಂದರಲ್ಲಿ ವಿಮರ್ಶಿಸಿದ್ದರು. ಅವರು ಎಲ್ಲೂ ನನ್ನ ಪುಸ್ತಕದ ಗುಣಾವಗುಣಗಳನ್ನು ಗುರುತಿಸದೆ, ಅದಕ್ಕೆ ಮುನ್ನುಡಿ ಬರೆದಿದ್ದವರನ್ನು ಚಚ್ಚಿ ಹಾಕಲು ಪ್ರಯತ್ನಿಸಿದ್ದರು. ಅದನ್ನು ಓದಿ ಸುಮ್ಮನೆ ವಿಷಾದದ ನಗೆ ನಕ್ಕು, ಮುನ್ನುಡಿ ಬರೆದ ಹಿರಿಯ ಲೇಖಕರಿಗೆ ಫೋನ್ ಮಾಡಿ 'ನನ್ನಿಂದಾಗಿ ನಿಮಗೆ ಕೆಟ್ಟ ಹೆಸರು ಬರುತ್ತಿದೆ' ಎಂದೆ. ಅದಕ್ಕೆ ಅವರೆಂದರು: 'ನನ್ನಿಂದ ಮುನ್ನುಡಿ ಬರೆಸಿಕೊಂಡಿದ್ದರಿಂದ ನಿಮಗೆ ಅವಮಾನವಾಗುತ್ತಿದೆಯೆಂದು ಖಿನ್ನರಾಗಬೇಕಿಲ್ಲ'.

ಈ ಮಧ್ಯೆ ಸಾಹಿತ್ಯದಲ್ಲೂ ಒಂದು ತರಹದ ಮೀಸಲಾತಿ ತಾಂಡವವಾಡುತ್ತದೆ. ಕೆಲವು ಸಲ ಮಹಿಳೆ ಎಂಬ ಕಾರಣಕ್ಕೆ, ದಲಿತ ಎಂಬ ಕಾರಣಕ್ಕೆ, ಅಲ್ಪಸಂಖ್ಯಾತ ಎಂಬ ಕಾರಣಕ್ಕೆ

ಅಥವಾ ದಲಿತ/ಅಲ್ಪ ಸಂಖ್ಯಾತರಲ್ಲೂ ಮಹಿಳೆ ಎಂಬ ಕಾರಣಕ್ಕೆ ಅಥವಾ ಇಂತಿಂಥವರ ಮಗ, ಮಗಳು, ಅಳಿಯ ಅಥವಾ ಸೊಸೆ ಎಂಬ ಕಾರಣಕ್ಕೆ ಆಯಾ ಗುಂಪುಗಳನ್ನು ಓಲೈಸುವವರಿಂದ ವಿಪುಲ ಅವಕಾಶಗಳು ಸಿಗುತ್ತವೆ. ಕೆಲವೊಮ್ಮೆ ಅದು ಎಷ್ಟರಮಟ್ಟಿಗೆ ಎಂದರೆ, ಅವರು ಬರೆಯುತ್ತಾರೆ ಎಂಬುದೇ ಮಹಾ ಸೋಜಿಗ ಎಂಬಂತೆ. ಅದರಲ್ಲೂ ಬೋಲ್ಡ್ ಆಗಿರುವ ಲೇಖಕಿಯರ ಮೇಲೆ ಕೆಲವು ಸಂಪಾದಕರಿಗೆ ವಿಶೇಷ ಮಮತೆ. ವಾರ್ಷಿಕ, ದಶಕದ ಲೇಖಕರಾಗಲು ಯೋಗ್ಯತೆಯಿಲ್ಲದವರೂ ಏಕದಂ ಶತಮಾನದ ಲೇಖಕರಾಗಿ ಹೊರ ಹೊಮ್ಮುವುದು ಈ ಕಾರಣಕ್ಕಾಗಿ. ಸಾಮಾಜಿಕ ಕಳಕಳಿಯ ಹೆಸರಲ್ಲಿ ಮಹಿಳಾ ಪ್ರಾತಿನಿಧ್ಯ, ದಲಿತ, ಅಲ್ಪಸಂಖ್ಯಾತ ಪ್ರಾತಿನಿಧ್ಯ ಎಂದು ಸುಳ್ಳು ಸುಳ್ಳೇ ಭಾಷಣ ಮಾಡುವವರೂ ಆಂತರಿಕವಾಗಿ ಎಷ್ಟು ಕಲುಷಿತರು ಎಂದು ನನಗೆ ಗೊತ್ತು. ಮತ್ತು ಆಯಾ ವರ್ಗದ ಜನ ತಾವು ಅಂತಹವರು ಎಂಬ ಕಾರಣಕ್ಕಾಗಿಯೇ ತಮಗೆ ಸಿಗಬೇಕಾದ ಸೌಲಭ್ಯ/ಪ್ರಚಾರ ಸಿಗುತ್ತಿಲ್ಲ ಎಂದೂ ವಾದಿಸಬಹುದು. ಲಂಕೇಶ್ ಬೆಳೆಸಿದ್ದ ಇಂಥ ಅನೇಕ ಪ್ರತಿಭೆಗಳು ಅವರೊಂದಿಗೇ ಸತ್ತ ಹೋದದ್ದು ಮತ್ತೊಂದು ವಿಪರ್ಯಾಸ. ಇಂತಹ ಸಂದರ್ಭಗಳಲ್ಲಿ ಒಂದು ಕಡೆ ಹೀಗೆ ಹೊಗಳಿಸಿಕೊಂಡವನ ತಲೆಗೆ ಮತ್ತು ಬಂದು, ತಾನು ಬರೆದುದೆಲ್ಲಾ ಸರ್ವಶ್ರೇಷ್ಠ ಎಂದು ತಿಳಿದು ಹಾಳಾಗಿ ಹೋದರೆ, ಇನ್ನೊಂದು ಕಡೆ ಯಾವುದೋ ಕಾರಣಕ್ಕೆ ಯಾವುದೇ ಪುರಸ್ಕಾರ ಸಿಗದೇ ನಿಜವಾದ ಪ್ರತಿಭೆಗಳೂ ಮುರುಟಿ ಹೋಗುತ್ತವೆ. ಅಂತಿಮವಾಗಿ ಕಾಲ ಎಲ್ಲವನ್ನೂ ನಿರ್ಧರಿಸುತ್ತದೆ ಎಂಬುದು ಸತ್ಯವಾದರೂ ಆ ಕಾಲ ಬರುವವರೆಗೆ ತಾಳ್ಮೆಯಿಂದ ಕಾಯುವವರಾರು? ಹೀಗೆ ನಿಜವಾದ ಪ್ರತಿಭೆಗಳನ್ನು ಗುರುತಿಸುವಲ್ಲಿ ವ್ಯತ್ಯಯ ಉಂಟಾಗಿ ಇವತ್ತು ಕನ್ನಡ ಸಾರಸ್ವತ ಲೋಕ ಕೊರಗುತ್ತಿದೆ. ಸ್ವಯಂ ಪ್ರಭೆಯಿಂದ ಮೇಲೆ ಬರುವಷ್ಟರಲ್ಲಿ ಕೆಲವೊಮ್ಮೆ ಮನುಷ್ಯನ ಜೀವಿತಾವಧಿಯೇ ಮುಗಿದು ಹೋಗಿರುತ್ತದೆ. ಹಿಂದಿನ ಬರವಣಿಗೆಗೆ ಪ್ರತಿಕ್ರಿಯೆ ಸಿಕ್ಕದೇ ಮುಂದಿನ ಬರವಣಿಗೆ ಮುಂದುವರೆಯುವುದಾದರೂ ಹೇಗೆ? ಆದಾಗ್ಯೂ ಬರೆಯುತ್ತಾನೆ ಎಂದರೆ ಆತನಿಗೆ ಸಾಹಿತ್ಯದ ಹುಚ್ಚು ಹಿಡಿದಿರಬೇಕಷ್ಟೇ!

ಹೊಸದಾಗಿ ಬರೆಯುತ್ತಿರುವ ಯುವ ಲೇಖಕರಿಗೆ ಏನನ್ನು ಬರೆಯಬೇಕು, ಯಾವಾಗ ಯಾವ ಪ್ರಕಾರದಲ್ಲಿ ಬರೆಯಬೇಕು, ಯಾವ ತಾತ್ವಿಕ ನಿಲುವಿನಲ್ಲಿ ತಮ್ಮನ್ನ ಗುರುತಿಸಿಕೊಳ್ಳಬೇಕು ಮುಂತಾದ ಬಿಕ್ಕಟ್ಟುಗಳು ಉಂಟಾಗಿ, ದಿಕ್ಕು ತೋಚದಂತಹ ಸ್ಥಿತಿ ನಿರ್ಮಾಣವಾಗಿದೆ. ಸಾಹಿತ್ಯಾಸಕ್ತ ಸ್ವತಃ ತಾನೇ ಓದಿಕೊಳ್ಳಬೇಕು. ತಾನೇ ಬರೆದುಕೊಳ್ಳಬೇಕು ಎಂಬಂತಹ ವಾತಾವರಣ ಇದೆ. ಬರೆಯುವವನಿಗೆ ಎಂತಹ ಬರವಣಿಗೆ ತನಗೆ ಒಗ್ಗುತ್ತದೆ ಎಂಬುದು ತಿಳಿದುಕೊಳ್ಳಲು ಸ್ವಲ್ಪ ಕಾಲ ಬೇಕಾಗಬಹುದು. ಕೆಲವರು ಬೇಗ ತಮ್ಮ ದಾರಿ ಗುರುತಿಸಿಕೊಳ್ಳಬಹುದು; ಇನ್ನು ಕೆಲವರು ಅನೇಕ ಪ್ರಯೋಗಗಳನ್ನು ಮಾಡಿ ನಂತರ ತಮ್ಮತನವನ್ನು ಗುರುತಿಸಿಕೊಳ್ಳಬಹುದು. ಸಾಹಿತ್ಯವನ್ನು ಮೇಜರ್ ಆಗಿ ತೆಗೆದುಕೊಂಡವರಿಗೆ ಸಾಹಿತ್ಯವನ್ನು ಹೇಗೆ ಅರ್ಥೈಸಬೇಕು, ವಿಮರ್ಶಿಸಬೇಕು ಎಂದು ಹೇಳಿಕೊಡಲಾಗುತ್ತದೆಯೇ ಹೊರತು, ಸೃಜನಶೀಲ ಸಾಹಿತ್ಯವನ್ನು ಹೇಗೆ ನಿರ್ಮಿಸಬೇಕು ಎಂದು ಕಲಿಸಲಾಗುವುದಿಲ್ಲ. ಅದು ಅವರವರ

ಪ್ರತಿಭೆಗೆ ಮೀಸಲಾದದ್ದು. ಕಥೆ ಬರೆಯುವುದು ಹೇಗೆ, ಕಾವ್ಯ ಕಾದಂಬರಿ ಬರೆಯುವುದು ಹೇಗೆ ಎಂದು ಕೆಲವೊಮ್ಮೆ ದೂರವಿರುವವರೇ ಆಗಿರುತ್ತಾರೆ, ಇಲ್ಲವೇ ಸೃಜನಶೀಲ ಸಾಹಿತ್ಯ ಸೃಷ್ಟಿಸುವವರು ಮಾತಿನ ಮೂಲಕ ಇದನ್ನೆಲ್ಲಾ ವಿವರಿಸುವುದರ ಕೊರತೆಯನ್ನು ಅನುಭವಿಸುತ್ತಿರುತ್ತಾರೆ. ಸಾಮಾನ್ಯವಾಗಿ ಸೃಜನಶೀಲ ವ್ಯಕ್ತಿ ಅಂತರ್ಮುಖಿಯಾಗಿರುವ ಸಂದರ್ಭವೇ ಹೆಚ್ಚು. ಆತ ಬರೆದಷ್ಟು ಸಲೀಸಾಗಿ ಮಾತನಾಡಲಾರ. ಏಕೆಂದರೆ ಬರವಣಿಗೆ ಮತ್ತು ಮಾತುಗಾರಿಕೆ ಎರಡು ಪ್ರತ್ಯೇಕ ಧ್ರುವಗಳು. ಈ ಎರಡೂ ಧ್ರುವಗಳು ಸಮ್ಮಿಳಿತವಾಗುವುದು (ಉದಾಹರಣೆಗೆ ಅನಂತಮೂರ್ತಿಯಂತಹವರು) ಬಹಳ ಅಪರೂಪ.

ಅನೇಕ ಕಾರಣಗಳಿಗಾಗಿ ಕೆಲವರಿಗೆ ಬೇಗ ಪ್ರಚಾರ ಸಿಕ್ಕಬಹುದು; ಇನ್ನು ಕೆಲವರಿಗೆ ಪ್ರತಿಭೆ ಇದ್ದರೂ ಇದು ಅಲಭ್ಯವಾಗಬಹುದು. ಅದು ಅವರವರ ವೈಯಕ್ತಿಕ ಹಿತಾಸಕ್ತಿಯ ಮೇಲೆ ನಿರ್ಧರಿತವಾಗುತ್ತದೆ. ನಮ್ಮ ಮಧ್ಯೆ ಇರುವವರಲ್ಲೇ ಅನೇಕರಿಗೆ ಪ್ರತಿಭೆ ಇಲ್ಲದಿದ್ದರೂ ಸಂದರ್ಭಗಳು ಪೂರಕವಾಗಿ ಕೂಡಿಬಂದು ಪ್ರಸಿದ್ಧರಾಗಿರಬಹುದು; ಕೆಲವರು ಎಲ್ಲಾ ಇದ್ದರೂ ಪ್ರಸಿದ್ಧಿ ಲಭ್ಯವಾಗಿಲ್ಲದಿರಬಹುದು. ಎಲ್ಲಿಯವರೆಗೆ ನಾವು ಅವರವರ ಸಾಹಿತ್ಯವನ್ನು ಅವರ ಪ್ರಸಿದ್ಧಿಯ ಮಾನದಂಡದ ಮೂಲಕ ಅಳೆಯುತ್ತಿರುತ್ತೇವೋ, ಅಲ್ಲಿಯವರೆಗೆ ಪ್ರತಿಭೆಯನ್ನು ನಿಷ್ಕಪಟವಾಗಿ ಮುಕ್ತವಾಗಿ ನಿರ್ಧರಿಸಲಾಗುವುದಿಲ್ಲ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಸೃಜನಶೀಲತೆ ತನ್ನ ಎತ್ತರವನ್ನು ಕಳಕೊಂಡಿದೆ ಎಂದು ತಾತ್ಕಾಲಿಕವಾಗಿ ಅನ್ನಿಸಬಹುದು. ದೊಡ್ಡ ದೊಡ್ಡ ಪ್ರತಿಭೆಗಳು ಹೀಗಾಗಿ ಮಂಕಾಗಿ ಕಾಣಿಸಬಹುದು. ನಿಜವಾದ ಪ್ರತಿಭೆಯಿದ್ದವನಿಗೆ ಅವಕಾಶವಿರುವುದಿಲ್ಲ. ಪ್ರತಿಭೆಯಿಲ್ಲದವನು ಪ್ರಚಾರದ ಮೂಲಕ ದೊಡ್ಡವನಾಗಲು ಪ್ರಯತ್ನಿಸುತ್ತಿರುತ್ತಾನೆ. ಆದರೆ ಅದು ಅಲ್ಲಿಯವರೆಗೆ ಸಾಧ್ಯ? ಇದರಿಂದಾಗಿ ಎರಡೂ ವರ್ಗಗಳೂ ವಿಫಲವಾಗಿ ನಮ್ಮ ಕಣ್ಣ ಮುಂದೆ ದೊಡ್ಡ ವ್ಯಾಕ್ಯುಂ ಕಂಡುಬರುತ್ತಿದೆ.

ಈಗ ಯಾವುದೇ ಚಳವಳಿಗಳಿಲ್ಲ. ಚಳುವಳಿಗಳಿದ್ದಾಗ ಹುಟ್ಟಿದ ಸಾಹಿತ್ಯವೆಲ್ಲಾ ಸರ್ವಶ್ರೇಷ್ಠವಾದದ್ದು ಎಂದು ನಾನು ನಂಬುವುದಿಲ್ಲ. ತಾತ್ಕಾಲಿಕವಾಗಿ ಚಳುವಳಿಯ ನೆನಪದಲ್ಲಿ, ಪದೇ ಪದೇ ಅಂತಹ ಒಂದು ಕೃತಿಯನ್ನು ಉದಾಹರಿಸುವುದರಿಂದ ಆ ಕೃತಿ ದೊಡ್ಡದಾಗುವುದಿಲ್ಲ. ಆದರೆ ಅಂತಹ ಭ್ರಮೆಯೊಂದನ್ನು ಅದು ಹುಟ್ಟಿಸುವುದಂತೂ ನಿಜ. ಇದರಿಂದಾಗಿ ದಾರಿ ತಪ್ಪಿದ ಅನೇಕರು ಅದೇ ನಿಟ್ಟನ್ನು ಹಿಡಿದು ತಮ್ಮ ಶ್ರಮ ಪ್ರತಿಭೆ ಎಲ್ಲವನ್ನು ವ್ಯರ್ಥಮಾಡಿಕೊಳ್ಳುವುದು ಸಹಜ. ಆದರೆ ಈಗಿನಂತಹ ಮುಕ್ತ ವಾತಾವರಣವೇ ನಿಜವಾದ ಸಾಹಿತ್ಯ ಸೃಷ್ಟಿಗೆ ಸೂಕ್ತವಾದ ಕಾಲ ಎಂದು ನನಗನಿಸುತ್ತದೆ.

ನಮ್ಮ ತರುಣ ಲೇಖಕರನ್ನು ಸ್ವಲ್ಪ ತಾಳ್ಮೆಯಿಂದ ಗಮನಿಸುತ್ತಿರಿ. ನಮ್ಮ ಕೆಲ ಲೇಖಕರಷ್ಟು ವೇಗವಾಗಿ ಅಲ್ಲದಿದ್ದರೂ ಕ್ರಮೇಣವಾಗಿ ಮೇಲೆ ಬರುತ್ತಾರೆ. ಬೈಪಾಸ್‌ನಿಂದ ಮೇಲೆ ಬಂದವರು ಕಾಲನ ಕೈಯಲ್ಲಿ ಬಹಳ ಬೇಗ ಮರೆತು ಹೋಗಿಬಿಡುತ್ತಾರೆ. ಆದರೆ ಕ್ರಮೇಣವಾಗಿ ಹಂತ ಹಂತವಾಗಿ ಮೇಲೆ ಬಂದವರು ಶಾಶ್ವತವಾಗಿ ಉಳಿಯುತ್ತಾರೆ. ಆದರೆ ಈಗಾಗಲೇ ಉನ್ನತ ಸ್ಥಾನ ಅಲಂಕರಿಸಿ ಕುಂತಿರುವವರು ಉದಯೋನ್ಮುಖರ ಸಾಹಿತ್ಯವನ್ನು ಸೀರಿಯಸ್ ಆಗಿ

ಓದಬೇಕು. ಓದದೇ ಒಂದು ಕೃತಿಯ ಮೌಲ್ಯಮಾಪನ ಮಾಡುವುದು ಮಹಾಪರಾಧ ಎಂಬುದನ್ನು ಅವರು ತಿಳಿಯಬೇಕು. ನಿಷ್ಪಕ್ಷಪಾತವಾಗಿ ಸಂದರ್ಭ ಸಿಕ್ಕಾಗ ನಾಲ್ಕು ಒಳ್ಳೆಯ ಮಾತಾಡಬೇಕು. ಹೀಗೆ ಮಾತಾಡಿದರೆ ಎಲ್ಲಿ ಅವರು ದೊಡ್ಡವರಾಗಿ ಬಿಡುತ್ತಾರೋ ಎಂಬ ಸಣ್ಣ ಗುಣವನ್ನು ಬಿಡಬೇಕು.

●

## ಬರ ಇರುವುದು ಓದುಗರದ್ದು

●ರಾಮಲಿಂಗಪ್ಪ ಟಿ. ಬೇಗೂರ್

ನನ್ನ ಭಾವನೆ ಅಭಿಪ್ರಾಯಗಳನ್ನು ಹಂಚಿಕೊಳ್ಳುವ ಮೊದಲು ಒಂದು ಕತೆ ಹೇಳಬೇಕೆನಿಸುತ್ತಿದೆ. ಹಲವಾರು ಮೌಖಿಕ ಕಥನಗಳನ್ನು ದಾಖಲಿಸಿರುವ ೧೯ನೇ ಶತಮಾನದ ತಮಿಳು ಕೃತಿ 'ವಿನೋದ ರಸಮಂಜರಿ'ಯಲ್ಲಿ ಉಲ್ಲೇಖಿತವಾಗಿರುವ ದಂತಕತೆಯಿದು. ಇದನ್ನು ಎ ಕೆ ರಾಮಾನುಜನ್ ತಮ್ಮ 'ಟೆಲ್ ಇಟ್ ಟು ದಿ ವಾಲ್ಸ್' ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

ಒಮ್ಮೆ ಚೋಳ ರಾಜನಿಗೆ ರಾಮಾಯಣ ಬರೆಸಬೇಕು ಅನ್ನಿಸಿತು. ಅವನು ಕವಿ ಕಂಬನ್‌ಗೂ ಅವನ ವಿರೋಧಿ ಒಟ್ಟಕುಟ್ಟನ್‌ಗೂ ಆಸ್ಥಾನಕ್ಕೆ ಆಹ್ವಾನಿಸಿ ರಾಮಾಯಣ ಬರೆಯಲು ಹೇಳಿದನು. ಶ್ರಮಶೀಲನಾದ ಒಟ್ಟಕುಟ್ಟನ್ ಕೆಲವೇ ದಿನಗಳಲ್ಲಿ ಐದು ಕಾಂಡಗಳನ್ನು ಬರೆದು ಮುಗಿಸಿದನು. ಆದರೆ ಕಂಬನ್ ಇನ್ನೂ ವಿನೋದದಲ್ಲಿಯೇ ಕಾಲ ಕಳೆಯುತ್ತಿದ್ದನು. ಒಂದು ದಿನ ರಾಜನು ಇಬ್ಬರನ್ನೂ ಆಸ್ಥಾನಕ್ಕೆ ಕರೆಸಿ ಎಷ್ಟೆಷ್ಟು ಬರೆದಿದ್ದೀರಿ ಎಂದು ಕೇಳಿದಾಗ, ಒಟ್ಟಕುಟ್ಟನ್ ತಾನು ಐದು ಕಾಂಡಗಳನ್ನು ಬರೆದಿರುವುದಾಗಿ ಹೇಳಿದನು. ತಾನು ಬರೆದಿಲ್ಲವೆಂದರೆ ಅವಮಾನವೆಂದು ಕಂಬನ್ 'ನಾನು ಐದು ಕಾಂಡಗಳಿಗಿಂತ ಸ್ವಲ್ಪ ಹೆಚ್ಚಾಗಿ ಬರೆದಿದ್ದೇನೆಂದು' ಹೇಳಿದನು. ರಾಜನು ಕಂಬನ್‌ಗೆ ಇತ್ತೀಚಿನ ಕೆಲವು ಸಾಲುಗಳನ್ನು ಕೇಳ ಬೇಕಾಗಿದೆ ಹೇಳು ಎಂದನು. ಕಂಬನ್ ಅಲ್ಲೇ ಕೆಲವು ಸಾಲುಗಳನ್ನು ಆಶುಕಾವ್ಯದಂತೆ ರಚಿಸಿ ಹೇಳಿಬಿಟ್ಟನು. ಆಗ ಒಟ್ಟಕುಟ್ಟನ್ 'ಇವನು ಯಾರೂ ಕೇಳಿರದ ತುಮಿ ಎಂಬ ಶಬ್ದ ಬಳಸಿದ್ದಾನೆ. ಅದು ಅಪಬಳಕೆ' ಎಂದು ಆಪಾದಿಸಿದನು. ಆ ಶಬ್ದವು ಇಲ್ಲವೆಂದು ತಿಳಿದಿದ್ದರೂ ಕಂಬನ್ ವಿರೋಧಿಯೆದುರು ಸೋಲಬಾರದೆಂದು 'ಅದೊಂದು ಉಪಭಾಷಾ ಶಬ್ದ. ಅದನ್ನು ದನ ಮೇಯಿಸುವ ಗೊಲ್ಲರು ಆಡುತ್ತಾರೆ' ಎಂದನು. 'ಅದಕ್ಕೆ ಸಾಕ್ಷಿ ಏನು' ಎನ್ನಲು 'ನಾಳೆ ಗೊಲ್ಲಕೇರಿಗೆ ಬಂದರೆ ಅಲ್ಲಿ ಈ ಶಬ್ದ ಬಳಕೆಯನ್ನು ತೋರುತ್ತೇನೆ' ಎಂದನು.

ಆ ರಾತ್ರಿ ಕಂಬನ್ ಶಾರದೆಗೆ ಮೊರೆ ಹೋಗಲು, ಮಾರನೇ ದಿನ ಶಾರದೆ ಗೊಲ್ಲತಿಯಾಗಿ ವೇಷ ತೊಟ್ಟು, ವಿಜ್ಞಾನ ಕಲೆಗಳಿಗೆಲ್ಲ ಗೊಲ್ಲ ಮಕ್ಕಳಂತೆ ವೇಷಾಂತರ ಮಾಡಲು ಆಜ್ಞಾಪಿಸಿ ತಂಗಿದಳು. ರಾಜ ಮತ್ತು ಒಟ್ಟಕುಟ್ಟನ್ ಬಂದಾಗ ಗೊಲ್ಲತಿಯು ಮಕ್ಕಳಿಗೆ 'ಆ ತುಮಿಯನ್ನು

ಚೆಲ್ಲ ಬೇಡಿರೋ' ಎಂದು ಗದರಿಸುತ್ತಿರುವುದು ಕೇಳಿಸಿತು. ಒಟ್ಟಕುಟ್ಟನ್ ಕಂಬನ್‌ನ ಆಡುಭಾಷಾ ಜ್ಞಾನಕ್ಕೆ ತಲೆದೂಗಿದನು.

ರಾಮಾಯಣ ಬರೆದ ನಂತರ ಕಂಬನ್ ಶ್ರೀರಂಗಂ ವಿಷ್ಣುದೇವಾಲಯದ ಸಭೆಯಲ್ಲಿ ತನ್ನ ಕೃತಿ ಸ್ವೀಕೃತವಾಗಬೇಕೆಂದು ಬಯಸಿದ. ಅಲ್ಲಿನ ಪುರೋಹಿತರು 'ನೀನು ಸಂಸ್ಕೃತದಲ್ಲಿ ಬರೆದಿಲ್ಲ, ತಮಿಳು ನಮಗೆ ತಿಳಿಯದು, ಚಿದಂಬರಂನಲ್ಲಿ ೩೦೦೦ ಜನ ತಮಿಳು ವಿದ್ವಾಂಸರಿದ್ದಾರೆ, ಅವರು ಒಪ್ಪುವುದಾದರೆ ನಿನ್ನ ಕೃತಿ ಸ್ವೀಕರಿಸುತ್ತೇವೆ' ಎಂದರು. ಕಂಬನ್ ಚಿದಂಬರಂಗೆ ಹೋಗಿ ಎಲ್ಲರನ್ನೂ ಎಡತಾಕಿ ಬೇಡಿದ. ಒಬ್ಬೊಬ್ಬರೂ ಒಂದೊಂದು ಸಬೂಬು ಹೇಳಿ ತಪ್ಪಿಸುತ್ತಾರೆ.

ಕೊನೆಗೆ ಕಂಬನ್ ವಿಷ್ಣುವನ್ನು ಪ್ರಾರ್ಥಿಸಿದಾಗ ವಿಷ್ಣು ಪ್ರಸನ್ನನಾಗಿ 'ನೀನು ಆ ೩೦೦೦ ವಿದ್ವಾಂಸರ ಪ್ರಧಾನ ವಿದ್ವಾಂಸನ ಮನೆಗೆ ನಾಳೆ ಹೋಗು. ಅಲ್ಲಿ ಅವನ ಹಿರಿಮಗ ಸರ್ಪ ಕಚ್ಚಿ ಸತ್ತು ಬಿದ್ದಿರುತ್ತಾನೆ. ಎಲ್ಲರೂ ಬಂದಿರುತ್ತಾರೆ. ನನ್ನ ಕಾವ್ಯದ ಸಾಲುಗಳನ್ನು ಓದಿ ಮಗನಿಗೆ ಮರುಜೀವ ತರುವುದಾಗಿ ಹೇಳುಹೋಗು' ಎಂದ. ಮಾರನೇ ದಿನ ಹಾಗೇ ಆಯಿತು. ಕಂಬನ್ ಸರ್ಪಾಸ್ತ್ರದಿಂದ ಘಾತಗೊಂಡ ಲಕ್ಷ್ಮಣನಿಗೆ ಹನುಮಂತನು ಶುಶ್ರೂಷೆ ಮಾಡುವ ಭಾಗದ ಸಾಲುಗಳನ್ನು ತೆಗೆದು ಮಂತ್ರೋಚ್ಚಾರದ ರೀತಿ ಓದತೊಡಗಿದ. ಎಲ್ಲಿಂದಲೋ ಹಾವು ಬಂದು ವಿದ್ವಾಂಸರೆಲ್ಲ ನೋಡನೋಡುತ್ತಿದ್ದಂತೆಯೇ ಕಚ್ಚಿದ ಗಾಯದಿಂದ ವಿಷ ಹೀರಿತು. ಹುಡುಗ ನಿದ್ರೆಯಿಂದೆಂಬಂತೆ ಎದ್ದ. ಚಕಿತಗೊಂಡ ವಿದ್ವಾಂಸರೆಲ್ಲ ಕಾವ್ಯ ಓದಿಸಿ ಕೇಳಿ ಪುರಸ್ಕರಿಸಿದರು.

ಇಲ್ಲಿಗೆ ಕತೆ ಮುಗಿಯಲಿಲ್ಲ. ಶ್ರೀರಂಗನ ಅರ್ಚಕರು ಜೈನ ಸಮುದಾಯದ ಒಪ್ಪಿಗೆ ಪಡೆದು ಬರಲು ಕಂಬನ್‌ನಿಗೆ ಹೇಳಿದರು. ಕಂಬನ್ ಜೈನರಲ್ಲಿಗೆ ಹೋಗಿ ಅವರ ಸಿದ್ಧಾಂತಗಳೂ ತನ್ನ ರಾಮಾಯಣದಲ್ಲಿವೆಯೆಂದು ತೋರಿಸಿ, ಅವರ ಒಮ್ಮತ ಪಡೆದು ಬಂದ. ಆದರೂ ತೃಪ್ತರಾಗದ ಪುರೋಹಿತರು ಮಹಾವಿಮರ್ಶಕನಾದ ಆಸ್ಥಾನ ವಿದ್ವಾಂಸನಲ್ಲಿಗೆ ಕಳಿಸಿದರು. ಅವನೂ ಕಂಬನ್‌ನ ಕಾವ್ಯ ಓದಿ ತಲೆದೂಗಿದ. ಹೀಗೆ ಬೇರೆಬೇರೆ ಜನರ ಹತ್ತಿರ ಕಳಿಸಲಾಗಿ, ಅವರಿಗೆಲ್ಲ ಸಂಬಂಧಿಸಿದ ಏನಾದರೂ ತನ್ನ ಕಾವ್ಯದಲ್ಲಿ ಇದೆಯೆಂದು ತೋರಿಸಿ ಕಂಬನ್ ಸಮ್ಮತಿ ಪಡೆದನು.

ಕಂಬನ್‌ನ ಈ ತಿರುಗಾಟ ನಿಜವಾಗಿಯೂ ತನ್ನ ಓದುಗರನ್ನು ಕಟ್ಟಿಕೊಳ್ಳುವ ತಿರುಗಾಟದಾಗಿದೆ. ಕಾವ್ಯವನ್ನು ತಮ್ಮ ಹೃದಯಕ್ಕೆ ಸ್ವೀಕರಿಸುವ 'ಪಠ್ಯ ಸಮುದಾಯ'ವನ್ನು ಸುತ್ತಣ ಸಮಾಜದಿಂದ ಸೃಷ್ಟಿಸಿಕೊಳ್ಳುವ ಕ್ರಿಯೆ ಇದು. ನಿಜಕ್ಕೂ ಇಂದು ನಮ್ಮ ಕಾವ್ಯ-ಕವಿಗಳಿಗೆ, ಕಂಬನ್‌ನಿಗೆ ಒದಗಿದ ಗತಿಯೇ ಒದಗಿದೆ. ನಾವು ಸಹೃದಯ ಸಮುದಾಯದ ತೀವ್ರ ಕೊರತೆಯನ್ನು ಎದುರಿಸುತ್ತಿದ್ದೇವೆ. ಕಾವ್ಯಕ್ಕಂತೂ ಓದುಗರೇ ಇಲ್ಲದಂತಾಗುತ್ತಿದೆ. ಕಂಬನ್‌ನಂತೆ ನಾವೆಲ್ಲಾ ಒಂದು ಸಾಹಿತ್ಯಕ ತಿರುಗಾಟಕ್ಕೆ ಸಜ್ಜುಗೊಳ್ಳಬೇಕಿದೆ. ಕಾವ್ಯಕ್ಕೊಂದು ಪಠ್ಯ ಸಮುದಾಯವನ್ನು ನಿರ್ಮಿಸಿಕೊಳ್ಳುವುದಕ್ಕಾಗಿ, ಕಾವ್ಯವನ್ನು ಜನರೆಡೆಗೆ ತೆಗೆದುಕೊಂಡು ಹೋಗು

ವುದಕ್ಕಾಗಿ ಏನಾದರೂ ಕಾರ್ಯಕ್ರಮಗಳನ್ನು ರೂಪಿಸಬೇಕಾಗಿದೆ. ಆ ಮೂಲಕ ಸಮುದಾಯಕ್ಕೆ ನಮ್ಮ ಕಾವ್ಯವನ್ನು ತಲುಪಿಸಬೇಕಿದೆ.

ಕವಿಗೋಷ್ಠಿಗಳೆಂದರೆ ಮೂಗು ಮುರಿವ, ಕಾವ್ಯವೆಂದರೆ ಅಸಹನೆಗೊಳ್ಳುವ, ಸ್ಥಿತಿ ಇಂದು ನಿರ್ಮಾಣವಾಗಿದೆ. ಹಾಗೇ ಕಾವ್ಯ-ಸಂಗೀತ, ಕವಿತೆ-ಭಾವನೆ, ಕವಿತೆ-ಹಾಡುಗಾರಿಕೆ (ವಾಚನ) ಇವು ಅವಳಿ ವೈರುಧ್ಯ (Bynary Oppositions) ಗಳೆಂಬಂತೆ ಭಾವಿಸಲಾಗುತ್ತಿದೆ. ಇದನ್ನು ಹೋಗಲಾಡಿಸಬೇಕಾಗಿದೆ. ಜನರ ಅಭಿರುಚಿಯನ್ನು ತಿದ್ದುವ ಹಾಗೂ ಅನಕ್ಷರಸ್ಥರೆಂದು ದೂರವಿಟ್ಟಿರುವ ಗ್ರಾಮೀಣ ಸಮುದಾಯಕ್ಕೂ ನಾವು ಪ್ರವೇಶ ಪಡೆಯಬೇಕಿದೆ. ಜನ ಸಮುದಾಯವನ್ನು ಎಲ್ಲಿ ನಾವು ಕಳಕೊಳ್ಳುತ್ತೇವೋ ಅಲ್ಲಿ ಜೀವಂತಿಕೆ ಇರಲು ಸಾಧ್ಯವೇ ಇಲ್ಲ. ನಗರದ ಡಿಜಿಟಲ್ ಮನಸ್ಸುಗಳಿಗೆ ಕಾವ್ಯದ ಹಸಿವನ್ನು ಉಂಟು ಮಾಡುವುದು ಹೇಗೆ ಎಂಬುದರ ಜೊತೆಗೇ, ಗ್ರಾಮೀಣ ಕುಂಟೆ ಕೂರಿಗೆಯ ಜಂಜಾಟದ ಮನಸ್ಸುಗಳಿಗೂ ಕಾವ್ಯವನ್ನು ಹಿತಗೊಳಿಸುವ ಬಗೆಗೂ ಚಿಂತಿಸಬೇಕಿದೆ. ಈ ಚಿಂತನೆಗೆ ವಿಮರ್ಶಕ, ಪ್ರಕಾಶಕ, ಲೇಖಕ, ಶಿಕ್ಷಕ, ಸಮೂಹ ಮಾಧ್ಯಮ ಎಂಬ ಭೇದ ಬೇಕಿಲ್ಲ. ಮನುಷ್ಯರಾದವರೆಲ್ಲರ ಕೆಲಸ ಇದು.

ಇಂದು ಓದುಗ ಸಮುದಾಯ ಇಲ್ಲವೇ ಇಲ್ಲವೆಂದಲ್ಲ. ಇದೆ, ಅದು ತುಂಬಾ ಚಿಕ್ಕದಾದದ್ದು. ಈ ಚಿಕ್ಕ ಸಮುದಾಯದ ಓದೂ ಕೂಡ ಇಂದು ಬೋಧನೆ ಮತ್ತು ಮಾಗಜಿನ್ನು ಹಾಗೂ ಸಂಕಿರಣಗಳಿಂದ ನಿಯಂತ್ರಿತವಾಗುತ್ತಿದೆ. ಬರೆವವರು ಮಾತ್ರ ಓದುವವರು ಆಗುತ್ತಿದ್ದಾರೆ. ಹೀಗೇ ಆದರೆ ನಾವು ಬರೆದದ್ದನ್ನು ನೀವೂ, ನೀವು ಬರೆದದ್ದನ್ನು ನಾವೂ ಓದುತ್ತ, ಬೆನ್ನನ್ನು ಒಬ್ಬರ ಮತ್ತೊಬ್ಬರು ಕೆರೆಯುತ್ತ ಅಷ್ಟಕ್ಕೇ ಮುದಗೊಳ್ಳುತ್ತ ಇರಬೇಕಾದೀತು. ಬರೆಯುವವರ ಜೊತೆಗೆ ಬರೆಯದಿರುವ (ಓದು-ಕೇಳುಗ-ವೀಕ್ಷಕ) ಸಹೃದಯ ಸಮುದಾಯವನ್ನು ವಿಸ್ತರಿಸಿಕೊಳ್ಳ ಬೇಕಾದ ಅಗತ್ಯ ಇಂದು ಖಂಡಿತಾ ಇದೆ.

ಈಗಿನ ಜನರು ಕಾವ್ಯ ಸ್ವರೂಪ ಅದರ ರಚನಾ ವಿಧಾನ ಹಾಗೂ ವ್ಯಾಪ್ತಿಯ ಬಗೆಗೆ ತಮ್ಮದೇ ಆದ ಬೇಡಿಕೆ-ನಿರೀಕ್ಷೆಗಳನ್ನು ಇಟ್ಟುಕೊಂಡಿದ್ದರೆ, ಅದನ್ನು ಅನುಸರಿಸುವುದು ಹೇಗೆ? ಅನುಸರಿಸಬೇಕೆ? ಈ ಪ್ರಶ್ನೆಗಳು ನನ್ನನ್ನು ಕಾಡುತ್ತಲೇ ಇವೆ. ಅರ್ಥವಾಗುವ ಹಾಗೆ ಬರೆಯ ಬೇಕು. ಓದುವ ಹಾಗೆ ಬರೆಯಬೇಕು. ಚೆನ್ನಾಗಿ ಬರೆದರೆ ಓದೋರು ಇದ್ದೇ ಇರ್ತಾರೆ. ಇಂಥಾ ಹೇಳಿಕೆಗಳಿಗೇನೂ ಬರಗಾಲವಿಲ್ಲ. ಆದರೆ ನಿಜವಾಗಿಯೂ ಬರ ಇರುವುದು ಓದುಗರದ್ದು.

ಕಾವ್ಯ-ಸಾಹಿತ್ಯ ಕೇವಲ ಒಂದು ಖಾಸಗಿ ಚಟುವಟಿಕೆಯಲ್ಲ, ಸಾಮಾಜಿಕವಾದದ್ದು. ಇದಕ್ಕೆ ಸಹೃದಯ ಸ್ಪಂದನ ಇಲ್ಲದೇ ಹೋದರೆ ಇದರ ಸರ್ವನಾಶ ಖಂಡಿತ. ನನ್ನ ಕವನ ಸಂಕಲನವನ್ನು ನನ್ನ ಆಪ್ತರಿಗೆ (ಕೆಲವು ಖ್ಯಾತನಾಮರು ಬಿಡಿ) ಕೆಲವರಿಗೆ ಕಳಿಸಿದೆ. ಕಾವ್ಯದ ಬಗ್ಗೆ ಪ್ರೀತಿ ಯುಳ್ಳವರು ಅವರು. ಮೇಷ್ಟ್ರುಗಳು, ಸಹಲೇಖಕರು, ಭೇಟಿಯಾದಾಗೆಲ್ಲ ಸಂಕಲನ ತಲುಪಿದ ಬಗೆಗೂ ಚಕಾರವೆತ್ತದೆ, ಆ ಈ ಲೋಕ ವ್ಯಾಪಾರದ ಬಗೆಗೆ ಮಾತಾಡಿ ಹೋದರು. ನಾಲ್ಕಾರು ಮಂದಿ ಹೊಗಳಿ, ತೆಗಳಿ ಕಾರ್ಡು ಹಾಕಿದರು. ಒಂದಿಬ್ಬರು ಚಿಕ್ಕ ವಿಮರ್ಶಾ ಲೇಖನಗಳನ್ನೇ

ಬರೆದು ಕಳಿಸಿದರು. ಚೋದ್ಯವೆಂದರೆ ಪ್ರತಿಕ್ರಿಯಿಸಿದವರೆಲ್ಲ ಹಿರಿಯ ವಿದ್ವಾಂಸರಾಗಿದ್ದರು. ಆದರೆ ನನ್ನ ಸಮಕಾಲೀನ ಲೇಖಕ-ವಿಮರ್ಶಕರು ಮಹಾ ದುರ್ಮೌನಿಗಳಾಗಿದ್ದಾರೆ. ಯಾಕೆ ಹೀಗೆ?

ನನ್ನ ಸಂಕಲನದ ಪುಣ್ಯವೆಂದರೆ ಮುನ್ನುಡಿಗೆ ಹೋದ ವಿದ್ವಾಂಸರ ಹತ್ತಿರ ಆರು ತಿಂಗಳು ಪ್ರಕಾಶಕರ ಹತ್ತಿರ ಮತ್ತಾರು ತಿಂಗಳು ಕಾಲ ಬಲಿತೂ ಬಲಿತೂ ಪ್ರಕಟವಾದದ್ದು. ಮುನ್ನುಡಿಗೆ, ಪ್ರಕಟಣೆಗೆ, ಬಿಡುಗಡೆಗೆ ನೂರೆಂಟು ವಿಘ್ನಗಳು. ಚಂದಾಮಾಮಾ ಎಂದೇ ಖ್ಯಾತರಾದ ಶೂದ್ರರ ಜಿಎಸ್‌ಎಸ್ ಕಾವ್ಯ ಪ್ರಶಸ್ತಿ ನನ್ನ ಸಂಕಲನಕ್ಕೆ ದೊರಕಿದರೂ ಪ್ರಶಸ್ತಿಯ ಹಣ ಮಾತ್ರ ದೊರಕಲಿಲ್ಲ. ಕನ್ನಡ ಪುಸ್ತಕ ಪ್ರಾಧಿಕಾರದ ಪ್ರೋತ್ಸಾಹ ಧನ ಘೋಷಣೆಯಾದರೂ ಧನ ಮಾತ್ರ ದೊರಕಲಿಲ್ಲ. ಕೊನೆಗೆ ನಷ್ಟವಾದದ್ದು ಪ್ರಕಾಶಕರಿಗೆ.

ಇನ್ನೂ ಹಿರಿಕಿರಿಯ ತಲೆಮಾರುಗಳ ನಡುವೆ ಸಂಘರ್ಷ ಇದ್ದದ್ದೇ. ಹಿರಿಯರು ತಾವು ಕಿರಿಯರನ್ನು ಪ್ರೋತ್ಸಾಹಿಸುವಾಗ ಎಚ್ಚರದಿಂದ ಆಯ್ಕೆ ಮಾಡಿಕೊಳ್ಳುತ್ತಾರೆ. ಈ ಆಯ್ಕೆ ಪ್ರಕ್ರಿಯೆಯಲ್ಲಿ ಪರಂಪರೆಯಿಂದ ಸಿಡಿದು ಹೋದವನಿಗೆ ಅವಕಾಶವಿಲ್ಲ. ಅಲ್ಲದೆ ಅವರ ಆಯ್ಕೆಯು ಅವರ ಆಲೋಚನಾ ವಿಧಾನ-ನಂಬಿಕೆಗಳಿಂದಲೇ ನಿರ್ದೇಶಿತವಾಗುತ್ತಿರುತ್ತದೆ. ಹಾಗೆ ನೋಡಿದರೆ ವಸ್ತುನಿಷ್ಠತೆ ಎಂಬುದು ಶುದ್ಧ ಸುಳ್ಳು. ಯಾವಾಗಲೂ ವ್ಯಕ್ತಿನಿಷ್ಠ, ವಿಚಾರ ನಿಷ್ಠವಾಗಿಯೇ ಒಂದು ಸಾಮಾಜಿಕ ಸ್ಥಿತಿ ನಿರ್ಮಾಣಗೊಳ್ಳುತ್ತಿರುತ್ತದೆ. ಅಂಥಲ್ಲಿ ಹೊಸಬರಿಗೆ-ಕಿರಿಯರಿಗೆ ಬಿಕ್ಕಟ್ಟು ಕಟ್ಟಿಟ್ಟದ್ದೇ. ಇದು ಇಂದಿನ ಪೀಳಿಗೆಯ ಬಿಕ್ಕಟ್ಟು ಅಷ್ಟೇ ಅಲ್ಲ. ಈ ಬಿಕ್ಕಟ್ಟಿಗೆ ಚರಿತ್ರೆಯಿದೆ, ಭವಿಷ್ಯವೂ ಇದೆ. ಆದರೆ ಬಿಕ್ಕಟ್ಟಿನ ಪ್ರಮಾಣ ಸ್ವರೂಪ ಭಿನ್ನ ಅಷ್ಟೇ. ಇದು ಪತ್ರಿಕೆ, ವಿಮರ್ಶಕ, ಪ್ರಕಾಶಕರೆಲ್ಲರ ಜೊತೆಗೂ ಅನ್ವಯಿಸುವ ವಿಷಯ.

ಅವರಿಗೆ ಅವರವರದೇ ಕಷ್ಟಗಳು-ಒತ್ತಡಗಳು ಇಂದಿನ ಜಾಗತೀಕರಣಗೊಳ್ಳುತ್ತಿರುವ ಸಂದರ್ಭದಲ್ಲಿ ಇವೆ. ಆದರೆ ಕಾವ್ಯಕ್ಕೆ-ಕವಿಗಳಿಗೆ ಮಾತ್ರ ಹೆಚ್ಚಿನ ಕಷ್ಟಗಳಿವೆ. ಕಾವ್ಯ ಓದುವವರ ಸಂಖ್ಯೆ ಇವತ್ತು ಬರಹಗಾರರ ಸಂಖ್ಯೆಗಿಂತ ಹೆಚ್ಚಿಗೆ ಇಲ್ಲ. ಕಥನಕ್ಕೆ ಇರುವ ಓದುಗ ಸಮುದಾಯಕ್ಕೆ ಹೋಲಿಸಿದರೆ ಕಾವ್ಯ ಸಹೃದಯರ ಸಂಖ್ಯೆ ತೀರಾ ಕಡಿಮೆ. ಪ್ರಕಾಶಕರಲ್ಲಂತೂ ಕಾವ್ಯ ಪ್ರಕಟಿಸುವುದೆಂದರೆ ಲಾಸು ಮಾಡಿಕೊಳ್ಳುವುದು ಎಂಬ ಭಾವನೆ ತೀವ್ರವಾಗಿದೆ. ಪತ್ರಿಕೆಗಳು ಕವಿತೆಗಳನ್ನು ಪುಟ ತುಂಬಿಸಲು ಬಳಸುತ್ತಿವೆ. ಒಮ್ಮೆ 'ವಿಜಯ ಕರ್ನಾಟಕ' ನನ್ನ ಕವಿತೆಯನ್ನು ಪುಟ ತುಂಬಿಸಲೆಂದೇ ಪ್ರಕಟಿಸಿದಂತಿತ್ತು. 'ಮಲ್ಲಿಗೆ'ಯ ಈಚಿನ ಒಂದೆರಡು ಸಂಚಿಕೆಗಳನ್ನು ನೋಡಿದರೆ ಈ ಪುಟ ತುಂಬಿಸುವ ಸಾಧನವಾಗಿ ಕವಿತೆಗಳು ಎಷ್ಟು ಚೆನ್ನಾಗಿ ಬಳಕೆಯಾಗಿದೆ ಎಂದು ತಿಳಿಯುತ್ತದೆ. ಜನಪ್ರಿಯ ದಿನಪತ್ರಿಕೆಗಳಂತೂ (ಉದಾ: ಪ್ರಜಾವಾಣಿ) ಖ್ಯಾತನಾಮರ ಬೆನ್ನು ಹತ್ತುತ್ತವೆ. ಇಲ್ಲವೇ ಒತ್ತಡಗಳಿಂದಾಗಿ ತಗಡು ಪದ್ಯಗಳನ್ನೆಲ್ಲ ಪ್ರಕಟಿಸುತ್ತವೆ. ಇವು ವಾರಕ್ಕೊಂದು ಕವಿತೆ ಪ್ರಕಟಿಸುವ ಶಾಸ್ತ್ರಕ್ಕಿಂತ ಭಿನ್ನವಾಗಿ ಕಾವ್ಯ ಕಲೆಗೆ ಪ್ರೋತ್ಸಾಹಿಸಲು ಆಗುವುದಿಲ್ಲವೇ?

ಕತೆಗಳಿಗೆ ಪತ್ರಿಕೆಗಳು ಸಾವಿರಾರು ರೂಪಾಯಿ ಬಹುಮಾನವಿಟ್ಟು ವಿಶೇಷ ಪ್ರೋತ್ಸಾಹ ನೀಡುತ್ತಿವೆ. ಆದರೆ ಕವಿತೆಗಳಿಗೆ ಯಾವು ಪತ್ರಿಕೆಯೂ ಈ ಪ್ರೋತ್ಸಾಹ ನೀಡುತ್ತಿಲ್ಲ ಯಾಕೆ?

ಸಾಹಿತ್ಯ ಪತ್ರಿಕೆಗಳಂತೂ (ಶೂದ್ರ ಸತ್ತೇ ಹೋಗಿದೆ.) ಸಂಕ್ರಮಣ, ಸಂವಾದ, ಅನ್ವೇಷಣೆ, ಅಭಿನವ ಸಂಚಯಗಳೆಲ್ಲ ಅನಿಯತಕಾಲಿಕಗಳಾಗಿವೆ. 'ಸಂವಾದ' 'ಅಭಿನವ'-ಕೆಲವೊಮ್ಮೆ 'ಸಂಚಯ'ಗಳಂತೂ ಸಂಚಿಕೆಗಳಾಗಿಯೂ-ಪುಸ್ತಕಗಳಾಗಿಯೂ ಉಭಯ ವಾಸಿಗಳಾಗುತ್ತಿವೆ. ಇದಕ್ಕೆಲ್ಲ ಕಾರಣಗಳೇನು? ಸಾಹಿತ್ಯಕ್ಕೆ ಪ್ರಾಶಸ್ತ್ಯ ನೀಡುತ್ತಿದ್ದ 'ಭಾವನಾ'ದಂತಹ ಪತ್ರಿಕೆಗಳು ಮರುಜೀವ ಪಡೆಯಬೇಕಾಗಿದೆ. ಒಂದು ಓದುಗ ವರ್ಗ ಹುಟ್ಟು ಹಾಕಲು ಪತ್ರಿಕೆಗಳಿಂದ ಸಾಧ್ಯವಿದೆ. ಓದುಗರ ಅಭಿರುಚಿ ನಿರ್ಮಾಣವೂ ಸಾಧ್ಯವಿದೆ. ನಿಷ್ಪಕ್ಷಪಾತ ಪಾಕ್ಷಿಕ, ಮಾಸಿಕ ಸಾಹಿತ್ಯ ಪತ್ರಿಕೆಗಳು ಹೆಚ್ಚಿದಷ್ಟೂ, ಅವುಗಳ ನಡುವೆ ಪೈಪೋಟಿ ಹೆಚ್ಚಿದಷ್ಟೂ ಪರಿಸ್ಥಿತಿ ಇಂದಿಗಿಂತ ಉತ್ತಮವಾಗುವುದರಲ್ಲಿ ಸಂಶಯವಿಲ್ಲ.

ಮೊನ್ನೆ ಬೆಂಗಳೂರು ವಿ.ವಿ. ಮತ್ತು ಪುಸ್ತಕ ಪ್ರಾಧಿಕಾರಗಳ ಸಹಯೋಗದ ಕವಿ ಗೋಷ್ಠಿಯಿತ್ತು. ಅಲ್ಲಿ ಜರಗನಹಳ್ಳಿ ಪದ್ಯ ಓದಿದಾಗ ಶಿಳ್ಳೆ, ಕರತಾಡನ ಮೊರೆದವು. ನಂತರ ನಾನು ಓದಲು ಹೋದೆ. ಸ್ವಲ್ಪ ದೀರ್ಘವಾಗಿದೆ ಪದ್ಯ ಅದನ್ನೇ ಓದುತ್ತೇನೆ ಎಂದಾಗ ಹಾಲಿಡೀ ಸಂತಾಪ ಮೌನದಂತೆ ಸ್ತಬ್ಧವಾಯಿತು. ನನಗೆ ಒಂದುಕ್ಷಣ ದಿಗಿಲಾಯಿತು. ತಕ್ಷಣ ದೀರ್ಘ ಪದ್ಯ ಓದುವ ನಿರ್ಧಾರ ಬದಲಿಸಿಕೊಂಡೆ. ಜನರಿಗೆ ಕವಿ ಬರೆದ ಎಲ್ಲ ಪದ್ಯಗಳೂ ಇಷ್ಟವಾಗುವುದಿಲ್ಲ ನಿಜ. ಆದರೆ ಸ್ವಲ್ಪ ಪದ್ಯ ದೀರ್ಘವಾದರೆ ಜನ ಕೇಳೊಲ್ಲ. ಚುಟುಕವಾದರೆ ಕೇಳ್ತಾರೆ. ಯಾಕೆ ಹೀಗೆ? ಹೀಗಾಗೇ ಏನೋ ಇತ್ತೀಚಿನ ಪದ್ಯಗಳೆಲ್ಲ ಚಿಕ್ಕವಾಗ್ತಾ ರೆಕ್ಕೆ ಮುರಿದ ಹಕ್ಕಿಗಳಂತಾಗುತ್ತಿವೆ. ಕಥನ ಕವಿತೆಗಳಂತೂ ಕಾಣೆಯಾಗುತ್ತಿವೆ. ಇದೆಲ್ಲ ಸಹೃದಯ ಸ್ಪಂದನ ಪ್ರಭಾವ. ಮಾರ್ಕೆಟ್ಟಿದ್ದಂತೆ ಪ್ರೊಡಕ್ಷನ್ ಅಲ್ಲವಾ! ಇದನ್ನು ತಪ್ಪಿಸಲು ಏನು ಮಾಡಬೇಕು ಚಿಂತಿಸಬೇಕಿದೆ.

ಕವಿಗೋಷ್ಠಿಗಳಿಗೆ ಬರುವ ಎಲ್ಲರೂ ಕಾವ್ಯಪ್ರಿಯರಲ್ಲ. ಬಂದ ಪ್ರತಿಯೊಬ್ಬರೂ ಖಂಡಿತಾ ಸಂಕಲನಗಳನ್ನೆಕೊಂಡು ಓದುವುದಿಲ್ಲ. ಅವರಲ್ಲಿ ಕೊಂಡು ಓದುವವರು (ಈಸಿಕೊಂಡು ಓದುವವರು ಕೂಡ) ಯಾರೋ ಒಬ್ಬಬ್ಬರು ಅಥವಾ ಬೆರಳೆಣಿಕೆಯಷ್ಟು ಮಂದಿ ಮಾತ್ರ. ಹೀಗಾಗಿ ನಾನು ಅವತ್ತು ನನ್ನ ಹತ್ತಾರು ಕವಿತೆಗಳ, ನನಗಿಷ್ಟವಾಗುವ ಇಮೇಜುಗಳುಳ್ಳ, ಮುರಿದ ಎರಡು, ಮೂರು, ನಾಲ್ಕು ಸಾಲುಗಳ ಭಾಗಗಳನ್ನು ಎಲ್ಲ ಪದ್ಯಗಳಿಂದ (ಒಂದು ಪದ್ಯದಿಂದ ಕಣ್ಣು ಒಂದು ಪದ್ಯದಿಂದ ಕಿವಿ ಇನ್ನೊಂದರಿಂದ ಮೂಗು, ಕೈ, ಕಾಲು ಹೀಗೆ ಕಿತ್ತು ಒಟ್ಟು ಒಂದಾಕಾರ ಮಾಡುವ ಹಾಗೆ) ಕಿತ್ತು ಕಿತ್ತು ಓದಿದೆ. ಕವಿಗೋಷ್ಠಿಯಲ್ಲಿ ಮಾಸ್‌ಗೆ ಅರ್ಥವಾಗುವುದಕ್ಕಿಂತ, ಫೀಲಾಗುವುದಕ್ಕಿಂತ ರಂಜನೆ ಮುಖ್ಯ ಅಂತನ್ನಿಸಿತು. ಹೆಚ್ಚು ಕಾಲ ಓದಿದರೂ ಪರವಾಗಿಲ್ಲ. ಒಂದು ದೀರ್ಘಪದ್ಯಕ್ಕಿಂತ ಹತ್ತಾರು ಮುರಿದ ಪದ್ಯಗಳೇ ಜನಕ್ಕೆ ಇಷ್ಟ ಅಂತ ತಿಳಿಯಿತು. ಆವತ್ತು ಜನ ನನ್ನ ಕವಿತೆಗಳನ್ನಂತೂ ಓದುವುದಿಲ್ಲ, ಈ ಮೂಲಕ ವಾದರೂ ಒಂದೊಂದು ಪದ್ಯದ ಒಂದೊಂದು ತುಂಡಾದರೂ ಇವರು ಕೇಳಲಿ ಎಂಬ ಆಸೆ ನನ್ನೊಳಗಿತ್ತು. ಕವಿಗೆ-ಕವಿತೆಗೆ ಈ ದುಸ್ಥಿತಿ ಬರಬಾರದಲ್ಲವೆ?

ಜನರು ಓದುವಂತೆ, ಕೇಳುವಂತೆ ಮಾಡಲು ಏನಾದರೂ ಮಾಡಬೇಕಿದೆ. ಜನರು ನಮ್ಮೆಡೆ ಬರದಂತಾದಾಗ ನಾವೇ ಜನರನ್ನೆ ತಲುಪುವ ಮಾರ್ಗಗಳನ್ನು ಶೋಧಿಸಬೇಕು. ಕಂಬನು

ಆಸ್ಥಾನ ವಿದ್ವಾಂಸ, ಬ್ರಾಹ್ಮಣ ಪಂಡಿತ, ಜೈನ, ತಮಿಳ, ಜನಸಾಮಾನ್ಯರೆಲ್ಲ ಆಸ್ವಾದಿಸುವಂತಹ ಬಹುಜನ-ಪ್ರಿಯ ಕಾವ್ಯ ಬರೆದ. ಬರೆದ ಮೇಲೆ ಓದುಗರಿಗಾಗಿ ಅಲೆದ. ಅಲೆದಾಡಿ ಪಠ್ಯ ಸಮುದಾಯವನ್ನು ಕಟ್ಟಿದ. ಅಂದರೆ ಅವರಿವರಿಚ್ಛೆ ಪಡುವುದನ್ನೇ ಬರೆದನೆಂದಲ್ಲ. ಬಳಕೆಯಲ್ಲೇ ಇಲ್ಲದ ನವಪದಗಳನ್ನೂ ಬಳಸುವ ಮೂಲಕ ಜನಮೆಚ್ಚುಗೆ ಗಳಿಸಿದ. ನವನಿರ್ಮಾಣದೊಂದಿಗೆ ಕಾವ್ಯದ ಸ್ವರೂಪವನ್ನೂ ವಿಸ್ತರಿಸಿದ. ಅವರಿಗಿಷ್ಟವಾಗುವಂತೆ ಕಾವ್ಯ ತಲುಪಿಸುವ ಕಷ್ಟ ತೆಗೆದುಕೊಂಡ. ಇದೊಂದು ಕವಿ ಸಹೃದಯ ಪಠ್ಯ ತ್ರಿವಳಿ ಅನುಸಂಧಾನ. ಇಂಥಾ ಕಂಬನ್ ನಮಗೊಂದು ಮಾದರಿ. ಅಂದರೆ ಈ ಕೆಲಸ ಕವಿಗೆ ಮಾತ್ರ ಸೀಮಿತವಾಗಬೇಕಾದ ಕಾರ್ಯವಲ್ಲ. ಇದು ಸಂಸ್ಕೃತಿ ಚಿಂತಕರೆಲ್ಲರ ಸಾಮೂಹಿಕ ಜವಾಬ್ದಾರಿ. ಸಹೃದಯ ಸಮುದಾಯವನ್ನು ಸೃಷ್ಟಿಸಿಕೊಳ್ಳಬೇಕಾಗಿದೆ. ವಿಸ್ತರಿಸಿಕೊಳ್ಳಬೇಕಾಗಿದೆ. ಇವತ್ತು ಓದುಗರನ್ನು ನಿರ್ಮಾಣ ಮಾಡುವದೇ ಒಂದು ಪವಾಡ.

●

## ಸಂಕೀರ್ಣ ಆಯಾಮಗಳಲ್ಲಿ ಫ್ರೆಶ್ ಆಗಬೇಕಿದೆ

● ಬಿ ಎಂ ಪುಟ್ಟಯ್ಯ

ಇಂದಿನ ಸಾಹಿತ್ಯಕ ವಾತಾವರಣದ ಬಗ್ಗೆ ಹಲವಾರು ಪ್ರಶ್ನೆಗಳಿರಬಹುದು. ಅಂತಹ ಪ್ರಶ್ನೆಗಳು, ಬರಹಗಾರರನ್ನು ಮಾತ್ರವಲ್ಲ. ಓದುವವರನ್ನೂ ಅವಲಂಬಿಸಿರುತ್ತವೆ. ಈ ಎರಡು ವರ್ಗಗಳನ್ನು ಬಿಟ್ಟು, ಮೂರನೇ ಆಯಾಮ ಕೂಡ (ವ್ಯಾಪಾರಿ ಚಟುವಟಿಕೆ) ಸಾಹಿತ್ಯ ಚಟುವಟಿಕೆಗಳ ಮೇಲೆ ನೇರ ಸಂಬಂಧ ಹೊಂದಿದೆ. ಹಾಗಾಗಿ ಸಾಹಿತ್ಯ ಸನ್ನಿವೇಶದ ಬಗ್ಗೆ ಪ್ರಶ್ನೆ ಕೇಳುವಾಗ ಈ ಮೂರು ಆಯಾಮಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಈ ಹಿನ್ನೆಲೆಯಲ್ಲಿ ಮೂರು ಮುಖ್ಯ ಪ್ರಶ್ನೆಗಳನ್ನು ರೂಪಿಸಬಹುದು.

೧. ಯಾವುದರ ಬಗ್ಗೆ ಬರೆಯಬೇಕು? ಯಾವುದರ ಬಗ್ಗೆ ಓದಬೇಕು?

೨. ಯಾರಿಗಾಗಿ ಬರೆಯಬೇಕು? ಯಾರಿಗಾಗಿ ಓದಬೇಕು?

೩. ಹೇಗೆ ಬರೆಯಬೇಕು? ಹೇಗೆ ಓದಬೇಕು?

ಮೇಲಿನ ಮೂರು ಪ್ರಶ್ನೆಗಳು ಬೇರೆಬೇರೆಯಾಗಿ ಕಾಣುತ್ತಿವೆ. ಆದರೆ ಅವುಗಳ ನಡುವೆ ನೇರವಾದ ಒಳಸಂಬಂಧವಿದೆ. ಅದರಿಂದಾಗಿ ಅವೆಲ್ಲವನ್ನೂ ಒಂದೇ ಪ್ರಶ್ನೆಯಾಗಿ ಹೀಗೆ ರೂಪಾಂತರಿಸಿಕೊಳ್ಳಬಹುದು. ಯಾವುದರ ಬಗ್ಗೆ, ಯಾರಿಗಾಗಿ, ಹೇಗೆ ಬರೆಯಬೇಕು/ಓದಬೇಕು? ಯಾವುದೇ ಸಾಹಿತ್ಯಕ ಪಠ್ಯ ಬರೆದಿರುವುದರಿಂದ ಮಾತ್ರ ಮಹತ್ವದ್ದಾಗುವುದಿಲ್ಲ. ಓದು-ಚರ್ಚೆ-ಸಂವಾದ-ವಿಮರ್ಶೆ-ಪ್ರಶಸ್ತಿ-ಪಠ್ಯಕ್ರಮ-ಮಾರಾಟ ಮುಂತಾದುವುಗಳಿಂದ ಐಡೆಂಟಿಟಿ ಪಡೆಯುತ್ತದೆ, ಮಹತ್ವದ್ದು ಎನಿಸಿಕೊಳ್ಳುತ್ತದೆ. ಇದರಲ್ಲಿ ಯಾವುದು ಮೊದಲು-ಯಾವುದು ಅನಂತರ ಎಂಬ ಗಣಿತೀಯ ಲೆಕ್ಕಾಚಾರ ನಿರುಪಯುಕ್ತ. ಪಂಪನ ಕೃತಿಗಳನ್ನು ಇಂದು ಓದದೇ

ಇದ್ದರೆ, ಅವು ಅಸ್ತಿತ್ವ ಪಡೆಯುವುದಿಲ್ಲ; ಪ್ರಸ್ತುತವಾಗುವುದಿಲ್ಲ. ಔಪಚಾರಿಕ ಶಿಕ್ಷಣದ ಸಾಹಿತ್ಯಕ ಪಠ್ಯಕ್ರಮಗಳನ್ನು ರದ್ದುಮಾಡಿಬಿಟ್ಟರೆ, ಎಷ್ಟೋ ಕೃತಿಗಳು ನಿರಾಯಾಸವಾಗಿ ನಿರ್ನಾಮವಾಗುತ್ತವೆ. ಹಳ್ಳಿಯಿಂದ-ಡೆಲ್ಲಿಯವರೆಗೆ ಸಾಹಿತಿಗಳಿಗೆ/ಸಾಹಿತ್ಯಕ್ಕೆ ಕೊಡುತ್ತಿರುವ ಪ್ರಶಸ್ತಿ ಬಹುಮಾನಗಳನ್ನು ಸಂಪೂರ್ಣ ನಿಲ್ಲಿಸಿಬಿಟ್ಟರೆ, ಎಷ್ಟೋ ಸಾಹಿತಿಗಳು ಹಾಡುಹಗಲೇ ಕಣ್ಮರೆಯಾಗಿ ಬಿಡುತ್ತಾರೆ. ಸಾರ್ವಜನಿಕ ಗ್ರಂಥಾಲಯ ಇಲಾಖೆ, ಪುಸ್ತಕ ಪ್ರಾಧಿಕಾರ, ಇತರೆ ಕೆಲವು ಮಾರಾಟಗಾರರು ಪುಸ್ತಕಗಳನ್ನು ಕೊಳ್ಳದಿದ್ದರೆ, ಎಷ್ಟೋ ಪುಸ್ತಕಗಳು ಪ್ರೆಸ್ಸಿನಲ್ಲೇ ಕೊಳೆತು ಗೊಬ್ಬರವಾಗುತ್ತವೆ. ಈ ಮಾತುಗಳನ್ನು ಗಮನಿಸಿದರೆ, ಸಾಹಿತ್ಯ ಓದು-ಪ್ರತಿಕ್ರಿಯೆ ಇವುಗಳನ್ನು ಬಿಟ್ಟು ಬೇರೆ ಕೆಲವು ಆಯಾಮಗಳು ಸಾಹಿತ್ಯದ ಪ್ರಸ್ತುತತೆಗೆ ಊರುಗೋಲಾ ಗಿರುವುದು ತಿಳಿಯುತ್ತದೆ. ಪತ್ರಿಕೆಗಳು ಏರ್ಪಡಿಸುವ ಸಾಹಿತ್ಯ ಸ್ಪರ್ಧೆಗಳು, ಅಲ್ಲಿ ತೀರ್ಪುಗಾರರ ರಾಜಕೀಯ, ಪಕ್ಷಪಾತತನ, ಇವುಗಳಿಂದ ಸಾಹಿತಿಗಳು ಹುಟ್ಟುತ್ತಿರುವುದು ಸಾಹಿತ್ಯದ ಘೋರ ದುರಂತ.

ಯಾವುದರ ಬಗ್ಗೆ ಬರೆಯಬೇಕು/ಓದಬೇಕು? ಎಂಬ ಪ್ರಶ್ನೆಯನ್ನು ಸರಳೀಕರಿಸಿ ವಿಷಯವಾರು ವಿಂಗಡಣೆಗೆ ಅನ್ವಯಿಸಬಾರದು. ಬದಲಾಗಿ ಬರೆಯುವವರು/ಓದುವವರು ವ್ಯವಸ್ಥೆಯ ಎಂತಹ ವಸ್ತುಸ್ಥಿತಿಯ ಬಗ್ಗೆ ಗಮನಿಸುತ್ತಿದ್ದಾರೆ ಎಂಬುದಿಲ್ಲಿ ಮುಖ್ಯ. ಬರೆಯುವವರು/ಓದುವವರು ವ್ಯವಸ್ಥೆಯ ನಿಜಸ್ಥಿತಿಯನ್ನೆ ಅನುಸರಿಸುತ್ತಿದ್ದೇವೆಂದು ಭಾವಿಸಿದ್ದಾರೆ. ವಾಸ್ತವವಾಗಿ ಇವರ ಗಮನದಲ್ಲಿರುವ 'ನಿಜಸ್ಥಿತಿ' ಎಷ್ಟರಮಟ್ಟಿಗೆ ನಿಜ? ಒಂದು ಉದಾಹರಣೆ: ಕಾರ್ಗಿಲ್ ಯುದ್ಧದ ಸಮಯದಲ್ಲಿ ಹೆಸರಾಂತ ಬುದ್ಧಿಜೀವಿ/ ಸಾಹಿತಿಗಳು ಮಾರಕ ದೇಶಪ್ರೇಮ ವನ್ನು ಪ್ರತಿಪಾದಿಸಿದರು. ಇವರು ತಮ್ಮ ಆಲೋಚನೆಗಳನ್ನು ಮುಗ್ಧತೆಯಿಂದ ತಮ್ಮವೆಂದೇ ಭ್ರಮಿಸಿದ್ದರು. ಆದರೆ ಅವುಗಳ ಬೇರುಗಳು ಸಾಮ್ರಾಜ್ಯಶಾಹಿಯ ವಿಷಗರ್ಭದ ಭ್ರೂಣದಿಂದ ಬಂದಿದ್ದವು.

ಸಾಮಾಜಿಕ ವಸ್ತುಸ್ಥಿತಿಯು ಸಾಹಿತ್ಯದ ಮೂಲಕ ಓದುಗರಿಗೆ ತಲುಪುವಾಗ ಮೂರು ಹಂತಗಳನ್ನು ದಾಟಿಕೊಂಡು ನಾಲ್ಕನೇ ಹಂತ ತಲುಪುತ್ತದೆ. ಇದರಲ್ಲಿ ಮೊದಲನೆಯದು ಇರುವಿಕೆಯ ಸ್ವರೂಪ ಯಾವುದು ಎಂಬುದು. ಈ ಮಾತನ್ನು ಸ್ವಲ್ಪ ವಿವರಿಸಬೇಕು. ಸಮಾಜದ ಅಥವಾ ವ್ಯವಸ್ಥೆಯಲ್ಲಿ ವಸ್ತುಸ್ಥಿತಿ ಯಾವುದು ಎಂಬುದು ಇಲ್ಲಿಯ ಪ್ರಧಾನ ಪ್ರಶ್ನೆ. ಇದರ ಚಲನಶೀಲತೆಯ ಆಯಾಮಗಳು ಯಾವುವು ಎಂಬುದು ಇಲ್ಲಿಯ ಪೂರಕ ಪ್ರಶ್ನೆ. ಸಮಾಜದ ನಾನಾ ಸ್ತರಗಳಲ್ಲಿರುವ ಜನರು ನೂರಾರು ಬಗೆಯ ಸಂಕಟಗಳಿಗೆ ಒಳಗಾಗಿದ್ದಾರೆ. ಅವು ತುಂಬಾ ಸಂಕೀರ್ಣವಾಗಿವೆ. ಅದರ ಮೂಲ ಕಾರಣಗಳನ್ನು ತಿಳಿಯಲಾರದಂತಹ ಸ್ಥಿತಿ ಇದೆ. ಉದಾ: ಇತ್ತೀಚೆಗೆ ಮಳೆ ಬೀಳುವ ಪ್ರಮಾಣ ಕಡಿಮೆಯಾಗುತ್ತಿದೆ. ಇದರ ಕಾರಣಗಳ ಆಯಾಮ ಒಂದಿದ್ದರೆ, ಪರಿಣಾಮಗಳ ಆಯಾಮ ಮತ್ತೊಂದಿದೆ. ಕಾರಣಗಳನ್ನು ಹೇಳಿಕೆಗಳ ಮಟ್ಟದಲ್ಲಿ ಮಂಡಿಸುವುದು ಕಷ್ಟ. ಅದಕ್ಕೆ ಇತರೆ ಜ್ಞಾನಶಾಖೆಗಳ ನೆರವು ಅಗತ್ಯವಿದೆ. ಪರಿಣಾಮವನ್ನು ಕುರಿತ ಆಯಾಮವೂ ಕೂಡ ಅಷ್ಟೆ. ನೀರನ್ನು ಉಪಯೋಗಗಳಿಗೆ ಬಳಸಲಾಗುತ್ತಿದೆ. ಅಲ್ಲೆಲ್ಲ ಗಂಭೀರ ಪರಿಣಾಮಗಳುಂಟಾಗುತ್ತವೆ. ನೀರು ತೀವ್ರಗತಿಯಲ್ಲಿ ಮಾರಾಟದ ವಸ್ತುವಾಗಿ

ಮಾರ್ಪಾಟಾಗುತ್ತದೆ. ಉಳ್ಳವರು ಕೊಳ್ಳುತ್ತಾರೆ. ಇಲ್ಲದವರು ಅನುಭವಿ ಸುತ್ತಾರೆ. ಪರಿಸ್ಥಿತಿ ಹೀಗಿರುವಾಗ, ಮಳೆಯ ಪ್ರಮಾಣ ಕಡಿಮೆಯಾಗುತ್ತಿರುವುದು ಮೂಲತಃ ನೈಸರ್ಗಿಕ ಕಾರಣವೊ ಅಥವಾ ಮಾನವ ನಿರ್ಮಿತವೋ? ಎಂಬ ಪ್ರಶ್ನೆ ಎದುರಾಗುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಸಮಾಜದಲ್ಲಿ, ಪ್ರಕೃತಿಯಲ್ಲಿ, ಪರಿಸರದಲ್ಲಿ, ರಾಜ್ಯ ವ್ಯವಸ್ಥೆಯಲ್ಲಿ ನಮ್ಮ ಅನುಭವಕ್ಕೆ ಬರುತ್ತಿರುವುದೆಲ್ಲವೂ ವಾಸ್ತವವಾಗಿ ಇರುವಿಕೆಯೊ ಅಥವಾ ತೋರುವಿಕೆಯೋ? ತೋರುವಿಕೆಯನ್ನೇ ನಾವು 'ಇರುವಿಕೆ' ಎಂದು ಭಾವಿಸುವಂತಹ ಪರಿಸ್ಥಿತಿ ಇದೆಯೇ? ಎರಡನೆಯದು ಇರುವಿಕೆಯನ್ನು ಅರಿಯುವ ಸಾಧನಗಳು, ಮಾರ್ಗಗಳು ಯಾವುವು ಎಂಬುದು. ವಸ್ತುಸ್ಥಿತಿಯು ಮಾನವ ಪ್ರಜ್ಞೆಗೆ ಪ್ರತ್ಯಕ್ಷ ಮತ್ತು ಪರೋಕ್ಷ ಎರಡು ವಿಧಾನಗಳಲ್ಲಿ ಬರುತ್ತದೆ. ಇಂದು ನೇರ ಮಾರ್ಗಗಳಿಗಿಂತ ಪರೋಕ್ಷ ಮಾರ್ಗಗಳು ಹೆಚ್ಚು ಪ್ರಭಾವಶಾಲಿ ಯಾಗಿವೆ. ಈ ಪರೋಕ್ಷ ಮಾರ್ಗಗಳಲ್ಲಿ ವಸ್ತುಸ್ಥಿತಿಯನ್ನು ತಿರುಚುವ, ಕೆಲಸ ನಡೆಯುತ್ತಿದೆ. ಹೀಗೆ ಅರಿಯುವಿಕೆಯ ಸಾಧನಗಳೆಲ್ಲವೂ ಬಹುತೇಕ ಭ್ರಷ್ಟಗೊಂಡಿವೆ. ಮೂರನೆಯ ಹಂತ ಬರೆಯುವಿಕೆ. ಕ್ಷಿಪ್ರಗತಿಯಲ್ಲಿ ಬದಲಾಗುತ್ತಿರುವ ಚಲನಶೀಲ ವಸ್ತುಸ್ಥಿತಿಯ ಎಲ್ಲಾ ಆಯಮಾಗಳೂ ಬರವಣಿಗೆಯಲ್ಲಿ ದಾಖಲಾಗುತ್ತವೆ ಎಂದು ತಿಳಿಯಲು ಸಾಧ್ಯವಿಲ್ಲ. ಇರುವಿಕೆಯನ್ನು ಕುರಿತು ಬರೆಯುತ್ತಿರುವಾಗಲೇ ಅದರ ಆಗುವಿಕೆಯ ಬಹು ಸಾಧ್ಯತೆಗಳು ಬೇರೊಂದು ರೂಪ ತಾಳಿರುತ್ತವೆ. ಹಾಗಾಗಿ ಇಂದಿನ ಬರಹಗಾರರಿಗೆ/ಓದುಗರಿಗೆ ವಿವರಿಸಲು ಅಸಾಧ್ಯವಾದಂತಹ ಸಿದ್ಧತೆಗಳು ಬೇಕಾಗುತ್ತವೆ. ಇಂತಹ ಸಿದ್ಧತೆಗಳ ಬಹುದೊಡ್ಡ ಗೈರುಹಾಜರಿ ಸಾಹಿತ್ಯಕ ಹಿನ್ನಡೆಯ ಲಕ್ಷಣವಾಗಿ ಗೋಚರಿಸುತ್ತಿದೆ. ವಸ್ತುಸ್ಥಿತಿಯ ಇರುವಿಕೆ ಯನ್ನು ಸಾಹಿತ್ಯ ಮಾತ್ರ ತಿಳಿಸುವುದಿಲ್ಲ. ಸಾಹಿತ್ಯೇತರ ಹಲವು ಮಾಧ್ಯಮಗಳು ಅತ್ಯಂತ ಪ್ರಭಾವಶಾಲಿಯಾಗಿ ಈ ಕೆಲಸ ಮಾಡುತ್ತಿವೆ. ಇವು ಸಾಮಾಜಿಕ ಜ್ಞಾನವನ್ನು ಕೇವಲ ಜಡಮಾಹಿತಿಗಳಾಗಿ ಮಾರ್ಪಡಿಸುತ್ತಿವೆ. ಮಾರುಕಟ್ಟೆಯ ಜಗತ್ತು, ಈ ಜಡಮಾಹಿತಿಗಳನ್ನು ತನ್ನ ಹಿತಾಸಕ್ತಿಗಾಗಿ ದುರುಪಯೋಗ ಪಡಿಸಿಕೊಳ್ಳುತ್ತಿದೆ. ಇದರ ಗ್ರಾಹಕರು ಮಾರುಕಟ್ಟೆಯ ಹಿತಾಸಕ್ತಿಯನ್ನು ತಮ್ಮ ಹಿತಾಸಕ್ತಿಯೆಂದೇ ಭ್ರಮಿಸಿದ್ದಾರೆ. 'ಕೌನ್ ಬನೇಗಾ ಕರೋಡ್ ಪತಿ'ಯಂತಹ ಉದಾಹರಣೆಗಳು ನಮ್ಮ ಮುಂದಿವೆ. ಹಾಗಾಗಿ ಬರವಣಿಗೆಯ ಮೂಲಕ ಓದುಗ ವಲಯವನ್ನು ಪ್ರಭಾವಿಸಬಹುದಾಗಿದ್ದ ಸಾಧ್ಯತೆಯು ತುಂಬಾ ದುರ್ಬಲಗೊಂಡು ಕ್ಷೀಣವಾಗಿದೆ. ಈ ಮಾಧ್ಯಮಗಳೊಂದಿಗೆ ಸಾಹಿತ್ಯವು ಸ್ಪರ್ಧಿಸಿ ಗೆಲ್ಲುವ ಸ್ಥಿತಿಯಲ್ಲಂತೂ ಖಂಡಿತಾ ಇಲ್ಲ. ಇದರಿಂದ ಒಟ್ಟಾಗಿ ಸಾಹಿತ್ಯದ ಪಾತ್ರವೇ ಕಿರಿದಾಗುತ್ತಾ, ಗೌಣವಾಗುತ್ತಾ ಸಾಗಿದೆ.

ಯಾರಿಗಾಗಿ ಬರೆಯಬೇಕು/ಓದಬೇಕು ಎಂಬುದು ಇಲ್ಲಿಯ ಎರಡನೇ ಪ್ರಶ್ನೆ. 'ಯಾರಿಗಾಗಿ' ಎಂಬುದನ್ನು ಬದಲಾಯಿಸಿ 'ಯಾತಕ್ಕಾಗಿ' ಎಂಬುದಾಗಿಯೂ ಪ್ರಶ್ನೆಯನ್ನು ರೂಪಿಸಬಹುದು. ಆಗ ಚರ್ಚೆಯ ಆಯಾಮವೇ ಸಂಪೂರ್ಣ ಬದಲಾಗಿ ಹೋಗುತ್ತದೆ. ಈ ಎರಡೂ ಬಗೆಯ ಪ್ರಶ್ನೆಗಳನ್ನು ಬರಹಗಾರರು ಕೇಳಿಕೊಳ್ಳುತ್ತಾರೆ. ಯಾತಕ್ಕಾಗಿ ಬರೆಯಬೇಕು ಎಂದು ಕೇಳಿಕೊಳ್ಳುವವರೆಲ್ಲರೂ ಬಹುತೇಕ ವ್ಯಕ್ತಿವಾದಿಗಳು. ಸೈದ್ಧಾಂತಿಕವಾಗಿ ಅಧ್ಯಾತ್ಮವಾದಿಗಳು. ಸಾಮಾಜಿಕ

ವಾಗಿ ಸಮಾಜವಿಮುಖಿಗಳು. ವ್ಯಕ್ತಿವಾದವನ್ನು ಸಾಮಾನ್ಯೀಕರಿಸಲು ಅವರು ಶತಪ್ರಯತ್ನ ಮಾಡುತ್ತಾರೆ. ಆರ್ಥಿಕವಾಗಿ ಸಾಮಾಜಿಕವಾಗಿ ಅಭದ್ರತೆಯಲ್ಲಿರುವ ಓದುಗರ ಅಸಹಾಯಕತೆಯನ್ನು ಎನ್‌ಕ್ಯಾಷ್ ಮಾಡಿಕೊಳ್ಳುತ್ತಾರೆ. ಆತ್ಮರತಿಯಲ್ಲಿ ಮುಳುಗೇಳುತ್ತಾರೆ.

ವ್ಯಕ್ತಿವಾದಿಗಳಲ್ಲದ ಎಲ್ಲಾ ಬರಹಗಾರರು ಕೇಳಿಕೊಳ್ಳಬೇಕಾದ ಪ್ರಶ್ನೆ 'ಯಾರಿಗಾಗಿ ಬರೆಯಬೇಕು' ಎಂಬುದು. ಕೆಲವರು ಇದಕ್ಕೆ 'ಯಾರನ್ನು ಕುರಿತು ಬರೆಯುತ್ತೇವೆಯೋ ಅವರು ಓದುವುದಿಲ್ಲ' ಎಂದು ಹೇಳುತ್ತಾರೆ. ಸಮಾಜದಲ್ಲಿ ಶೋಷಕರು ಇದ್ದಾರೆ. ಶೋಷಿತರೂ ಇದ್ದಾರೆ. ಓದಲಾರದವರು ಬಹುತೇಕ ಇರುವುದೇ ಶೋಷಿತರಲ್ಲಿ. ಅವರು ಓದುವುದಿಲ್ಲ ಎಂದು ಅವರನ್ನು ಕುರಿತು ಬರೆಯದಿರಲು ಸಾಧ್ಯವಿಲ್ಲ. ವಾಸ್ತವವಾಗಿ ಇವರನ್ನೇ ಕುರಿತು ಬರೆಯಬೇಕಾಗಿದೆ. ಯಾವುದೇ ಸಾಹಿತ್ಯದಲ್ಲೂ ಈ ಆಯಾಮ ಇದ್ದೇ ಇರುತ್ತದೆ. ಓದುವುದರ ಮೂಲಕ, ವಿಚಾರ-ವಿಮರ್ಶೆಯ ಮೂಲಕ ಈ ಆಯಾಮವನ್ನು ಮುಂಚೂಣಿಗೆ ತರಬೇಕಾಗಿದೆ.

ಹಾಗಾದರೆ ಹೇಗೆ ಓದಬೇಕು? ಎಂಬ ನಮ್ಮ ಚರ್ಚೆಯ ಮೂರನೇ ಪ್ರಶ್ನೆ ಎದುರಾಗುತ್ತದೆ. ಇದು ಹೇಗೆ ಬರೆಯಬೇಕು ಎಂಬ ಪ್ರಶ್ನೆಯೊಂದಿಗೆ ಸಂಬಂಧ ಹೊಂದಿದೆ. ಹೇಗೆ ಬರೆಯಬೇಕು ಎಂಬುದನ್ನು ಸರಳೀಕರಿಸಿ ಕೇವಲ ನಿರೂಪಣಾ ವಿಧಾನ, ಶೈಲಿ, ಕಲಾತ್ಮಕ ಸೌಂದರ್ಯ ಮುಂತಾದುವುಗಳಿಗೆ ಸೀಮಿತ ಮಾಡಬಾರದು. ಇದರ ಆಳದಲ್ಲಿ ಹುದುಗಿರುವ ಬೀಜವೆಂದರೆ ಬರವಣಿಗೆಯ ಸೈದ್ಧಾಂತಿಕತೆ. ಬರವಣಿಗೆಯ ಹಿಂದಿರುವ ಸೈದ್ಧಾಂತಿಕತೆಯೇ ಅದರ ವಿಧಾನ, ಶೈಲಿ, ಕಲಾತ್ಮಕತೆ ಮುಂತಾದುವುಗಳನ್ನು ರೂಪಿಸುತ್ತದೆ; ಪ್ರಭಾವಿಸುತ್ತದೆ. ಈ ಸೈದ್ಧಾಂತಿಕತೆಯು ರಾಜಕೀಯ ದೃಷ್ಟಿಕೋನದ ಮೇಲೆ ನಿಂತಿರುತ್ತದೆ.

ಎರಡನೇ ಪ್ರಪಂಚ ಯುದ್ಧದ ನಂತರ ಸಾಮ್ರಾಜ್ಯಶಾಹಿ ದೇಶಗಳು ಉಳಿದ ದೇಶಗಳನ್ನು ಗುಲಾಮಗಿರಿಗೆ ತಳ್ಳಿದವು. ರಾಜಕೀಯ-ಆರ್ಥಿಕ ನೆಲೆಗಳಲ್ಲಿ ತಮಗೆ ಅವಲಂಬನೆ ಆಗಿರುವಂತಹ ವಾತಾವರಣವನ್ನು ಸೃಷ್ಟಿಸಿದವು. ಇದಕ್ಕೆ ಸಮಾನಾಂತರವಾಗಿ ಸಾಮ್ರಾಜ್ಯಶಾಹಿ ಬೌದ್ಧಿಕ ಶಿಬಿರವು ತನ್ನ ಸಿದ್ಧಾಂತಗಳಿಗೆ ಉಳಿದವರು ಅವಲಂಬನೆ ಆಗಿರುವಂತಹ ಸನ್ನಿವೇಶ ನಿರ್ಮಿಸಿತು. ಪರಿಣಾಮವಾಗಿ ಇಂದು ಕಲೆ-ಸಾಹಿತ್ಯವನ್ನು ರಾಜಕೀಯ ದೃಷ್ಟಿಕೋನ ರಹಿತ ಸೌಂದರ್ಯಾತ್ಮಕ ಆಯಾಮದಲ್ಲಿ ಮಾತ್ರವೇ ಗ್ರಹಿಸಬೇಕೆಂಬ ವಿಧಾನ ಮುಂಚೂಣಿಗೆ ಬಂದಿದೆ. ವಿಶೇಷವಾಗಿ ಇದು ಓದುಗ ವಲಯದ ಮೇಲೆ ತೀವ್ರ ಪರಿಣಾಮ ಉಂಟುಮಾಡಿದೆ. ಕಲೆ-ಸಾಹಿತ್ಯದಲ್ಲಿ ರಾಜಕೀಯ ದೃಷ್ಟಿಕೋನವನ್ನು ಅಪೇಕ್ಷಿಸಬೇಕಿಲ್ಲ; ಅದು ಪ್ರತ್ಯೇಕ ಜ್ಞಾನಶಾಖೆಯ ಸೊತ್ತು ಎಂಬಂತೆ ಬಿಂಬಿಸಲಾಗುತ್ತಿದೆ. ಇದರಿಂದ ಸಮಗ್ರ ಗ್ರಹಿಕೆಯ ವಿಧಾನವು ಛಿದ್ರಗೊಂಡು ವಿಚ್ಛಿದ್ರಕಾರಿ ವಿಧಾನಗಳು ಮುಂಚೂಣಿಗೆ ಬಂದಿವೆ. ಇದನ್ನು ಎದುರಿಸುವ ಸಲುವಾಗಿ ಬರಹಗಾರರು ಮತ್ತು ಓದುಗರು ಆದ ನಾವು ರಾಜಕೀಯ ದೃಷ್ಟಿಕೋನಕ್ಕೆ ಪ್ರಾಥಮಿಕ ಗಮನ ಕೊಡಬೇಕಾಗಿದೆ.

ಇಂದಿನ ಬರಹಗಾರರು ಮತ್ತು ಓದುಗರ ನಡುವೆ ಗುರುತಿಸಬಹುದಾದ ಒಂದು ಕಂದಕವಿದೆ. ಇಂದಿನ ಬರಹಗಾರರು ಎಂದರೆ ಈ ಚರ್ಚೆಯಲ್ಲಿ ಇತ್ತೀಚೆಗೆ ಬರೆಯುತ್ತಿರುವ ಹೊಸ ತಲೆಮಾರಿನವರು ಎಂದೇ ಅರ್ಥ. ಆದರೆ ಇಂದಿನ ಓದುಗರು ಎಂದರೆ ಕೇವಲ ಇತ್ತೀಚೆಗೆ

ಓದುತ್ತಿರುವ ಹೊಸತಲೆಮಾರಿನವರಲ್ಲ. ಇದರಲ್ಲಿ ತರಾವರಿ ಆಸಕ್ತಿ, ಹಿತಾಸಕ್ತಿ, ಧೋರಣೆ ಉಳ್ಳವರಿದ್ದಾರೆ. ಹಳೆತಲೆಮಾರಿನವರೂ ಇದ್ದಾರೆ. ಇವರು ಹೊಸ ಬರಹಗಾರರ ಸಾಹಿತ್ಯವನ್ನು ಓದಿ, ಪ್ರತಿಕ್ರಿಯಿಸಿ, ಮೌಲ್ಯಮಾಪನ ಮಾಡಿ, ಮುಂಚೂಣಿಗೆ ತರಬೇಕಾದ ಸೂಕ್ಷ್ಮ ಆಯಕಟ್ಟಿನ ಜಾಗದಲ್ಲಿದ್ದಾರೆ. ದುರಂತವೆಂದರೆ, ಈ ಕೆಲಸಕ್ಕೆ ಹಳೆತಲೆಮಾರಿನವರು ಬಹುತೇಕ ರಡಿ ಇಲ್ಲ. ಇವರು ಇಂದಿನ ಬರಹಗಾರರನ್ನು ಮಿತ ಅಂದಾಜು ಮಾಡುತ್ತಾರೆ. ಇವರಲ್ಲಿ ಅನೇಕರು ಅಜ್ಜ ಹಾಕಿದ ಆಲದ ಮರಕ್ಕೆ ನೇಣು ಹಾಕಿಕೊಳ್ಳಲು ಕೊನೆತನಕ ಹೋರಾಟಕ್ಕೆ ಮುಂದಾಗಿದ್ದಾರೆ. ಬಾಬ್ರಿ ಮಸೀದಿಯನ್ನು ಧ್ವಂಸಗೊಳಿಸಿದ್ದು ಸಾಮ್ರಾಜ್ಯಶಾಹಿ ಪೋಷಿತ ಧಾರ್ಮಿಕ ಮೂಲ ಭೂತವಾದಿ ಶಕ್ತಿಗಳು ಎಂಬುದಕ್ಕೆ ಇಂದು ವಿವರಣೆಯ ಅಗತ್ಯವಿಲ್ಲ. ಆದರೆ ಕನ್ನಡ ವರ್ಣ ಮಾಲೆಯಲ್ಲಿ 'ಋ' ಕಾರವನ್ನು ಉಳಿಸಿಕೊಳ್ಳಲು ವಾದ ಹೂಡಿದವರ ಬಗ್ಗೆ ಅತ್ಯಂತ ಎಚ್ಚರಿಕೆ ಯಿಂದ ಮೌಲ್ಯಾಂಕನ ಮಾಡಬೇಕಾಗಿದೆ. ಸಾಮ್ರಾಜ್ಯಶಾಹಿಯು ವಾಲೆಂಟರ್ ಏಜೆನ್ಸೀಸ್‌ಗಳ ಮೂಲಕ ಎಲ್ಲ ಬಗೆಯ ಮೂಲಭೂತವಾದಗಳನ್ನು ನವೀಕರಿಸುವ ಪರಿಣಾಮಕಾರಿ ಹುನ್ನಾರ ದಲ್ಲಿ ತೊಡಗಿದೆ. 'ಋ' ಕಾರ ಇರಲೇಬೇಕೆಂದು ವಾದ ಮಾಡಿದ್ದು ಇದರ ಒಂದು ಸರಳ ಸ್ಯಾಂಪಲ್ ಅಷ್ಟೆ. ಇದರಿಂದಾಗಿ ಇವರು ತಮ್ಮನ್ನು ಮರುವಿಮರ್ಶೆ ಮಾಡಿಕೊಳ್ಳಲು ಮುಂದಾಗ ಬೇಕಿದೆ. ಹೀಗೆ ಹಿರಿಯ ತಲೆಮಾರಿನ ಓದುಗರು ಬದಲಾಗುತ್ತಿರುವ ಸನ್ನಿವೇಶಕ್ಕೆ ತಕ್ಕಂತೆ ರಿನ್ಯೂ ಆಗಬೇಕಿದೆ. ಜತೆಗೆ ಹೊಸ ತಲೆಮಾರಿನ ಬರಹಗಾರರಾದ ನಾವು ಹಿಂದಿನೆಲ್ಲ ಬರಹ ಗಾರರಿಗಿಂತ ಸಂಕೀರ್ಣ ಆಯಾಮಗಳಲ್ಲಿ ಫ್ರೆಶ್ ಆಗಬೇಕಿದೆ.

●

## ಲಿಂಗ ರಾಜಕಾರಣದ ಠರಾವುಗಳ ವಿರುದ್ಧ

●ಎಂ ಎಸ್ ವೇದಾ

ಇಂದು ಯಾವುದೇ ಕ್ಷೇತ್ರ ಇರಲಿ, 'ಎಲ್ಲವೂ ನಿರಾಶಾದಾಯಕ, ಗೊಂದಲಮಯ' ಎಂಬ ಮಾತು ಸಾರಾಸಗಟಾಗಿ ಉಪಯೋಗಗೊಳ್ಳುತ್ತಿದೆ. ವೃದ್ಧರಾದವರ ಮಾತುಗಳಲ್ಲಿ ಇದ್ದೇ ಇರುತ್ತಲ್ಲ ಹಾಗೆ. ಆದರೆ ಯಾವ ಕಾಲಕ್ಕೂ ಅದು ವಸ್ತುಸ್ಥಿತಿಯಾಗಿರಲು ಸಾಧ್ಯವಿಲ್ಲ. ಅದೊಂದು ಮಾನಸಿಕ ಸ್ಥಿತಿಯಷ್ಟೆ. ನಿರಾಶಾದಾಯಕಸ್ಥಿತಿ, ಗೊಂದಲಗಳು, ಸಂಘರ್ಷಗಳು, ಬಿಕ್ಕಟ್ಟುಗಳು- ಹೀಗೆ ನಾವು ಯಾವುದನ್ನು 'ನೆಗೆಟಿವ್' ಆಗಿ ನೋಡುತ್ತಿರುತ್ತೇವೋ ಅವುಗಳೇ ಸೃಜನಶೀಲ ಮರುಹುಟ್ಟುಗಳ ನೆಲೆಗಳೂ ಆಗಿರುತ್ತವೆ.

ನಾನು ಕವನ ಬರೆಯಲಾರಂಭಿಸಿದ್ದು ಏಳನೆಯ ತರಗತಿಯಲ್ಲಿ. ಸಾಹಿತ್ಯ, ಸೃಜನಶೀಲತೆ ಪ್ರತಿಭೆ, ವಾದ, ಚಳುವಳಿಗಳು-ಇತ್ಯಾದಿಗಳೆಂದರೆ, ಏನೂ ತಿಳಿಯದ ಕಾಲದಲ್ಲಿ. ಎಂ.ಎ. ದಿನಗಳಲ್ಲಿಯೇ ಇವುಗಳನ್ನೆಲ್ಲಾ ಕೇಳಿ ಒಂದಿಷ್ಟು ಅರಿತಿದ್ದು. ನನ್ನ ಮೊದಲ ಕಥೆ ಬರೆದದ್ದು

ಪ್ರಥಮ ಬಿ.ಎ.ಯಲ್ಲಿ ಇದ್ದಾಗ. ಅದನ್ನು ಬರೆಯುವಾಗ ನಂಜನಗೂಡಿನ ಭಾಷೆ, ಚಾಮರಾಜ ನಗರದ ಭಾಷೆ, ಧಾರವಾಡದ ಭಾಷೆ ಎಂಬಿತ್ಯಾದಿ 'ಡೈಲೆಕ್ಟ್'ಗಳ ಬಗೆಗಿನ ಅರಿವು ಎಳ್ಳಷ್ಟೂ ಇರಲಿಲ್ಲ. ನನ್ನಮ್ಮ ಸಂಪೂರ್ಣವಾಗಿ ತನ್ನನ್ನು ತೆರೆದುಕೊಳ್ಳುವ ಸಂದರ್ಭಗಳಲ್ಲಿ, ಅಜ್ಜಂದಿರ ಮನೆಗಳಲ್ಲಿ, ಹಳ್ಳಿಗೆ ಹೋದಾಗ ಅಲ್ಲೆಲ್ಲಾ ಆಡುತ್ತಿದ್ದ ಭಾಷೆ ಅದೆಂದು ಮಾತ್ರ ಗೊತ್ತಿತ್ತು. ಅಮ್ಮನ ಮಗಳಾದ ನಾನೂ ಅದೇ ಭಾಷೆಯನ್ನು ಉಪಯೋಗಿಸುತ್ತಿದ್ದೆ. ಮೈಸೂರಿನ ನಾಗರಿಕತೆಯ ಅಪ್ಪಾ 'ನನ್ನ ನಾಲಿಗೆಯನ್ನು ದರ್ಭೆ ತೆಗೆದು ಕೊಂಡು ಸುಡಬೇಕು' ಎನ್ನುತ್ತಿದ್ದರು. ನನ್ನ ಗ್ರಾಮೀಣ ಹಿನ್ನೆಲೆಯ ಕಥೆಗಳಲ್ಲಿ 'ಸತ್ವಯುತವಾದ ಭಾಷೆ' ಎಂದು ವಿಮರ್ಶಕರಿಂದ ಬೆನ್ನು ತಟ್ಟಿಸಿಕೊಳ್ಳುವ ಈ ಭಾಷಾ ಬಳಕೆಯೂ ಸಹ ಅತ್ಯಂತ ಸಹಜವಾಗಿ (ಬೇರಾವ ರೀತಿಯ ತಿಳಿವಳಿಕೆಯೂ ಇಲ್ಲದೇ ಇದ್ದ ದಿನಗಳಲ್ಲಿ) ಬಳಕೆಗೊಂಡಿತ್ತು.

ಈ ಎರಡು ಸಂಗತಿಗಳನ್ನು ಏಕೆ ಹೇಳುತ್ತಿದ್ದೇನೆ ಎಂದರೆ, ಸಾಹಿತ್ಯ ರಚನೆ, ಸೃಜನಶೀಲತೆ ಸಹಜವಾದುದು, ನಿರಪೇಕ್ಷವಾದುದು, ಅನಂತರ ಅದಕ್ಕೆ ವಾದಗಳು, ಚಳುವಳಿಗಳು ಇತರ ಇತ್ಯಾದಿ ಅಂಶಗಳು ಬಂದು ಸೇರಿಕೊಳ್ಳುತ್ತವೆ ಎನ್ನುವುದಕ್ಕೆ. ಚಾರಿತ್ರಿಕವಾಗಿ ಗಮನಿಸಿದಾಗ ಕಂಡು ಬರುವ ಸತ್ಯವೆಂದರೆ ಯಾವೊಬ್ಬ ಲೇಖಕಿಗೂ ಯಾವ ವಾದಗಳು, ಚಳುವಳಿಗಳು ಒತ್ತಾಸೆ ನೀಡಿಲ್ಲ ಎಂಬುದು. ಲಂಕೇಶರ ನೆನಪಿಗಾಗಿ ಬರೆಯುತ್ತಾ, ಒಂದು ಕಡೆ ವೈದೇಹಿಯವರು ತಮ್ಮ ಲೇಖನದಲ್ಲಿ ಸರಸ್ವತೀಬಾಯಿ ರಾಜವಾಡೆ ಯವರ ಅಪಮಾನ ಎನ್ನಬಹುದಾದ ಕ್ಷಣ ಕುರಿತು ಬರೆಯುತ್ತಾರೆ. ಸನ್ಮಾನಕ್ಕೊಳಗಾದ ರಾಜವಾಡೆಯವರನ್ನು ಅವರ ಸಮಕಾಲೀನ ಹಿರಿಯ ಸಾಹಿತಿಯೊಬ್ಬರು "ಆ ಹೆಂಗಸು ಇನ್ನೂ ಇದೆಯೋ?" ಎಂಬ ಉದ್ಗಾರ ತೆಗೆದ ಸಂಗತಿಯದು. ತನ್ನ ಕಾಲದ ಲೇಖಕಿಗೆ ಈ ಬಗೆಯ ಗೌರವ ಕೊಟ್ಟ ಹಿನ್ನೆಲೆಯಲ್ಲಿ ನಮ್ಮ ಸಾಹಿತ್ಯ ಜಗತ್ತು ಲೇಖಕಿಯರನ್ನು ಹೇಗೆ ಕಂಡಿದೆ ಎಂಬುದು ಗುರುತಾಗುತ್ತದೆ. ರಾಜವಾಡೆ ಯವರು ಬರವಣಿಗೆ ನಿಲ್ಲಿಸಿದ್ದರಲ್ಲಿ ಇದೂ ಒಂದು ಕಾರಣ.

ತನ್ನ ಕಾಲದ ಲೇಖಕಿಯೊಬ್ಬಳಿಗೆ ಸಹ ಲೇಖಕನೋರ್ವ ತೋರುವ ಅಸಹನೆಯ ಉಡಾಫೆಯ ನುಡಿಗಳವು. ಇಂದು ಬರೆಯುತ್ತಿರುವ ನನಗೆ ಆ ಸ್ಥಿತಿಯಿಲ್ಲ. ರಾಜವಾಡೆ, ತಿರುಮಲಾಂಬ, ಕಲ್ಯಾಣಮ್ಮನವರಂಥ ಲೇಖಕಿಯರು ಸಹಿಸಿದ ಅವಜ್ಞೆಯ ಕ್ಷಣಗಳು- ವೀಣಾ, ವೈದೇಹಿ, ಸಾರಾರಂತಹ ಲೇಖಕಿಯರು ನೆಲೆಯೂರಿದ ಕ್ಷಣಗಳು-ಸ್ತ್ರೀಯರ ಸಾಹಿತ್ಯಕ್ಕೆ ಗಳಿಸಿ ಕೊಟ್ಟಿರುವ ಒಂದು ಪರಂಪರೆ ಮತ್ತು ಸತ್ತ್ವವನ್ನು, ಬೆನ್ನಿಗೆ ಇಟ್ಟುಕೊಂಡು ಬರೆಯುತ್ತಿದ್ದೇನೆ. ನಾನು ಬರೆಯುತ್ತಿರುವ ಈ ದಿನಗಳು ಖಂಡಿತವಾಗೂ ದಿಕ್ಕೆಟ್ಟ ಪರಿಸ್ಥಿತಿ ಯಲ್ಲ. ಬೆನ್ನು ತಟ್ಟಿದ ಹಿರಿಯ ಲೇಖಕರು, "ಮೇಡಂನೋರು ಚೆನ್ನಾಗಿ ಬರೀತಾರೆ" ಎಂದು ಪುಸ್ತಕಗಳನ್ನು ಪ್ರಕಟಿಸುವ ಪ್ರಕಾಶಕ ಮಿತ್ರರು, ಬೆನ್ನು ತಟ್ಟುವ ಹಿರಿಯ ಲೇಖಕಿಯರು, ಬೆನ್ನು ತಟ್ಟುವ ಸಹಲೇಖಕಿಯರು, ನೂರಾರು ಪತ್ರ ಬರೆಯುವ ಓದುಗರು-ನನ್ನ ಇರುವು ಇವರೆಲ್ಲರ ನಡುವೆ ಇದೆ.

ಇದರ ಜೊತೆಗೇ ಮತ್ತೊಂದು ಅರಿವಿದೆ. ಸಾಹಿತ್ಯ ಕ್ರಿಕೆಟ್ ಅಲ್ಲ ಎಂಬ ಅರಿವು. ಒಂದು ಸೆಂಚುರಿ ಬಾರಿಸಿದ ತಕ್ಷಣ ದಿನ ಬೆಳಗಾಗುವುದರೊಳಗೆ ಹೆಸರು ಮಾಡಿ ಬಿಡುವ, 'ಸೊನ್ನೆ'

ಯಾದಾಗ ಮನೆಯಲ್ಲಿ ಕೂರಬೇಕಾದ ಪರಿಸ್ಥಿತಿ ಏರ್ಪಡುವ ರೀತಿಯದಲ್ಲ. ಅದು ಬರಹಗಾರರು ಕೊನೆಯ ಘಳಿಗೆಯ ತನಕ ನಡೆಸುವ ಅನುಸಂಧಾನದ ನಿರಂತರ ಪ್ರಕ್ರಿಯೆ. ಅಂತಹ ಸಾಹಿತ್ಯ ಕುರಿತಾದ ಅಭಿಪ್ರಾಯ, ಅನಿಸಿಕೆ, ವಿಮರ್ಶೆಗಳೂ ಸಹ ಕ್ರಿಕೆಟ್ ಕಾಮೆಂಟರಿಯಾಗಲು ಸಾಧ್ಯವಿಲ್ಲ. ಹಾಗಾಗಿಯೇ ಪಂಪನಿಂದ ಹಿಡಿದು ಇಂದಿನ ಲೇಖಕರವರೆಗೆ ಅವರವರ ಎತ್ತರ ಬಿತ್ತರಗಳು, ಮರುಓದು, ಮರುಮೌಲ್ಯಮಾಪನಗಳಿಗೆ ಒಳಗಾಗುತ್ತಲೇ ಇವೆ. ದಿನ ಬೆಳಗಾಗು ವುದರೊಳಗಾಗಿ ಎತ್ತರದ ಲೇಖಕರು ಸೃಷ್ಟಿಯಾಗಿ ಬರುವುದಿಲ್ಲ. ನಿರಂತರ ಓದು, ಮರುಮೌಲ್ಯ ಮಾಪನಗಳಿಂದ ಒಬ್ಬ ಬರಹಗಾರರು ಎತ್ತರಗೊಳ್ಳುತ್ತಾ, ರೂಪುಗೊಳ್ಳುತ್ತಾ ಹೋಗುತ್ತಾರೆ. ಸರ್ವಜ್ಞ ನೆಲೆಯ 'ತೀರ್ಪು', 'ತೀರ್ಮಾನ'ಗಳಿಗೆ ಇಲ್ಲಿ ಖಂಡಿತ ವಾಗಿಯೂ ಅವಕಾಶ ಇರುವುದಿಲ್ಲ. ಪಂಪನಾದಿಯಾಗಿ ನವೋದಯ, ನವ್ಯ, ಪ್ರಗತಿಶೀಲ ಘಟ್ಟಗಳ ಸಾಹಿತ್ಯವು ಇಂದೂ ಚರ್ಚೆಗೆ ಒಳಗಾಗುತ್ತಿರುವಾಗ ಇಂದಿನ ಸಾಹಿತ್ಯ ಸಂದರ್ಭವನ್ನು ನೇತ್ಯಾತ್ಮಕವಾಗಿ ಅರ್ಥೈಸುವುದು, ಸಾಧ್ಯತೆಗಳೇ ಇಲ್ಲದ ಕಾಲವೆಂದು ತೀರ್ಮಾನಿಸಿ ಬಿಡುವುದು, ಚಾರಿತ್ರಿಕ ಪ್ರಜ್ಞೆ ಇಲ್ಲದ ತೀರ್ಮಾನಗಳಷ್ಟೆ ಆಗಿ ಉಳಿಯುತ್ತವೆ.

ಸ್ತ್ರೀಯರ ಸಾಹಿತ್ಯ ಸಾಂಸ್ಕೃತಿಕವಾಗಿ ಮತ್ತು ಸಾಹಿತ್ಯಕವಾಗಿ ಮುಖ್ಯವಾಗುತ್ತಿರುವ, ಸ್ತ್ರೀ ವಾದನ್ನು, ಸ್ತ್ರೀವಾದಿ ಚಳುವಳಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ಬರೆಯುತ್ತಿರುವ ಇಂದಿನ ದಿನಗಳು, ಹಿಂದೆಂದಿಗಿಂತಲೂ ಸವಾಲಾಗುವ ವಾತಾವರಣವನ್ನು ಏರ್ಪಡಿಸಿವೆ. ಸಾಹಿತ್ಯ ಸೃಷ್ಟಿಯನ್ನು ಕಾತುರದಿಂದ ನಿರೀಕ್ಷಿಸುವಂತೆ ಮಾಡಿವೆ. 'ಯಾವ ಸಾಧ್ಯತೆಗಳೂ ಇಲ್ಲ' ಎಂದು ಹೇಳುತ್ತಿರುವ ಹಿರಿಯರು ಇದನ್ನು ಗಮನಿಸಬೇಕಿದೆ. ಚಳುವಳಿಗಳು, ವಾದಗಳು ಸ್ಥಗಿತ ಗೊಂಡಿವೆ ಎಂದು ಠರಾವು ಹೊರಡಿಸುವ ಮಂದಿ ಕೊಂಚ ತಾಳ್ಮೆ ವಹಿಸಬೇಕಿದೆ.

ದಲಿತ ಮತ್ತು ಬಂಡಾಯದ ಜೊತೆ ಜೊತೆಗೇ ಬಂದ ಲಿಂಗಾಧಾರಿತ ಅಸಮಾನತೆಯ ವಿರುದ್ಧ ಧ್ವನಿ, ಇಂದು ಒಂದು ಪ್ರತ್ಯೇಕ ವಾದವಾಗಿ, ಚಳುವಳಿಯಾಗಿ ರೂಪುಗೊಳ್ಳುತ್ತಿದೆ. ಸಾಹಿತ್ಯಿಕ ಮತ್ತು ವಿಮರ್ಶಕ ರಾಜಕಾರಣಗಳನ್ನೂ ಮೀರಿ ಆ ಕಾರ್ಯ ಇಂದು ಸಾಧಿತವಾ ಗುತ್ತಿದೆ. ಎಷ್ಟು ಮಂದಿ ಲೇಖಕಿಯರು ಗಂಭೀರ ನೆಲೆಯಲ್ಲಿ ಎಲ್ಲ ಪ್ರಕಾರಗಳಲ್ಲಿಯೂ ಏಕಕಾಲಕ್ಕೆ ಬರೆಯುತ್ತಿದ್ದಾರೆ, ಎಷ್ಟು ಪ್ರತಿಷ್ಠಿತ ಸಾಹಿತ್ಯ ಸ್ಪರ್ಧೆ ಗಳಿರಬಹುದು, ಅಕಾಡೆಮಿ ಪ್ರಶಸ್ತಿಗಳಿರಬಹುದು, ಎಷ್ಟು ಮಹತ್ವಾಕಾಂಕ್ಷೆಯನ್ನುಳ್ಳ ಕೃತಿಗಳ ರಚನೆಗಳಿರಬಹುದು-ಎಲ್ಲಿ ಯಾರು ಸ್ಥಾನಗಳಿಸಿಕೊಳ್ಳುತ್ತಿದ್ದಾರೆ ಎಂಬಿತ್ಯಾದಿ ಅಂಕಿ-ಅಂಶಗಳನ್ನು ಗಮನಿಸು ವಾಗ, ಈ ಬಗೆಯ ನೆಗೆಟಿವ್ ಠರಾವುಗಳನ್ನು ಹೊರಡಿಸುತ್ತಿರುವುದೂ ಲಿಂಗ ರಾಜಕಾರಣದ ಒಂದು ಮುಖವೆ ಎಂಬ ಗುಮಾನಿ ಮೂಡುತ್ತದೆ. ಲೇಖಕರ ಎತ್ತರ-ಬಿತ್ತರಗಳನ್ನಷ್ಟೇ ಗುರುತಿಸಿ ಅನುಭವ ಇರುವ ನಮ್ಮ ಸಾಹಿತ್ಯ ಮತ್ತು ವಿಮರ್ಶಾಲೋಕ, ಲೇಖಕಿಯರನ್ನು ಆ ಸ್ಥಾನದಲ್ಲಿಟ್ಟು ನಿಕಷಕ್ಕೆ ಒಡ್ಡಬೇಕಾದ ಸಾಹಿತ್ಯಕ ಸಂದರ್ಭವನ್ನು ಹೀಗೆ ಹಾರುಮಾತುಗಳ ಮೂಲಕ ನಿವಾರಿಸಿಕೊಳ್ಳಲು ಯತ್ನಿಸುತ್ತಿರುವಂತೆ ಕಂಡುಬರುತ್ತಿದೆ.

ಪುರುಷ ಪ್ರಧಾನ ವಿಮರ್ಶೆಯಲ್ಲಿನ ಪಕ್ಷಪಾತವನ್ನು ನಮ್ಮ ವಿಮರ್ಶಕರೇ ಈಗೀಗ ಒಪ್ಪಿಕೊಳ್ಳುತ್ತಿದ್ದಾರೆ. ಅದನ್ನು ನಿವಾರಿಸಿಕೊಳ್ಳುವ ಕೆಲಸವನ್ನೂ ಅವರು ಮಾಡಬೇಕಿದೆ. ಅತ್ಯಂತ

ಸೂಕ್ಷ್ಮ ಸಂವೇದಿ ಎನಿಸಿಕೊಂಡ ವಿಮರ್ಶಕರೂ ಸಹ, ಕಥಾ ಸಂಕಲವೊಂದನ್ನು ಸಂಪಾದಿಸುವಾಗ, ಕಥೆಗಾರ್ತಿಯೊಬ್ಬರ ಕಥೆಯನ್ನು ಆಯ್ಕೆ ಮಾಡುವ ಜವಾಬ್ದಾರಿಯನ್ನು ಮತ್ತೊಬ್ಬ ಮಹಿಳೆಗೆ ವಹಿಸಿ, ಆ ಮೂಲಕ ಲೇಖಕಿಯೊಬ್ಬರನ್ನು ಓದಲು ಸಿಕ್ಕ ಅವಕಾಶವನ್ನು ನಿರಾಕರಿಸಿದ್ದನ್ನು ಕಂಡಿದ್ದೇನೆ. ಬರಹಗಾರ್ತಿಯರೇ ಮೌಲ್ಯಯುತ ವಾದುದನ್ನು, ಮಹತ್ವಾಕಾಂಕ್ಷೆ ಉಳ್ಳದ್ದನ್ನು ಕೊಡುತ್ತಿರುವ ಇಂದಿನ ದಿನಗಳಲ್ಲಾದರೂ, ನಮ್ಮ ಸಾಹಿತ್ಯ ಮತ್ತು ವಿಮರ್ಶಾ ಪ್ರಪಂಚಗಳು ತಮ್ಮ ಪೂರ್ವಗ್ರಹಗಳನ್ನು ಬಿಡಬೇಕಿದೆ. 'ಅಡುಗೆ ಮನೆ ಸಾಹಿತ್ಯ'ವೆಂಬ ನಿರಾಕರಣೆಯ ಸಿನಿಕತೆಯನ್ನು ಹಿಂದೆ ಬಿಟ್ಟು ಸ್ತ್ರೀ ಬರವಣಿಗೆಯ ಕೇಂದ್ರವನ್ನು ಅವರು ಕಂಡುಕೊಳ್ಳಬೇಕಾಗಿದೆ. ಸ್ತ್ರೀ ಸಾಹಿತ್ಯದೊಂದಿಗೆ ಇಂದಿನ ವಿಮರ್ಶೆ ಅನುಸಂಧಾನ ನಡೆಸಬೇಕಿದೆ. ಸ್ತ್ರೀ ಸಾಹಿತ್ಯದೊಂದಿಗೆ ಅನುಸಂಧಾನ ಎಂದರೆ ಸ್ತ್ರೀ ಸಂವೇದನೆಯೊಂದಿಗಿನ ಅನುಸಂಧಾನವೆಂದೇ ಅರ್ಥ. ನಮ್ಮಲ್ಲಿ ಬಹುತೇಕರಿಗೆ ಅದಿನ್ನೂ ಸಾಧ್ಯವಾಗಿಲ್ಲ. ಶತಮಾನದ ಲೇಖಕಿಯರ ಕಥೆಗಳನ್ನು ಒಳಗೊಂಡ ಸಂಕಲನವೊಂದಕ್ಕೆ ವಿಮರ್ಶೆ ಬರೆಯುತ್ತಾ ವಿಮರ್ಶಕರೊಬ್ಬರು ಮೊದಲ ಹಂತದ ಲೇಖಕಿ ಯರನ್ನು ಸಂಪೂರ್ಣ ಅವಜ್ಞೆ ಮಾಡಿ, ಎರಡನೆಯ ಹಂತದ ಲೇಖಕಿಯನ್ನು ಗುರುತಿಸುತ್ತಾ "ಸಾಮಾಜಿಕ ಕಳಕಳಿಯ ತರಬೇತು ಪಡೆದ ಲೇಖಕಿಯರು" ಎಂದು ಬರೆದದ್ದನ್ನು ಗಮನಿಸಿದ್ದೇನೆ. ಸಂಪೂರ್ಣ ಸ್ತ್ರೀಸಂವೇದನೆ ಎಂಬುದು ಯಾರಲ್ಲಿಯೂ ಕಂಡುಬಂದಿಲ್ಲ ಎಂದೇ ಅವರು ತೀರ್ಮಾನಿಸಿದ್ದರು. ಲೇಖಕರದು ಮಾತ್ರ ಹುಟ್ಟುತ್ತಲೇ ಬರುವ ಸಾಮಾಜಿಕ ಕಳಕಳಿ. ಲೇಖಕಿಯರ ಸಂದರ್ಭದಲ್ಲಿ ಅದು 'ತರಬೇತಿ' ಪಡೆದು ಬಂದದ್ದು! ಅಷ್ಟಾಗಿಯೂ 'ಸ್ತ್ರೀ ಸಂವೇದನೆ' ಎಂದರೆ ಏನನ್ನು ಒಳಗೊಳ್ಳುತ್ತದೆ ಎಂಬುದರ ಅರಿವೂ ಅಗತ್ಯವಾಗಿದೆ.

ಖ್ಯಾತ ಲೇಖಕರೂ ಆಗಿದ್ದು, ಸಂಪಾದಕರಾಗಿದ್ದವರೊಬ್ಬರು ತಮ್ಮ ಪತ್ರಿಕೆಗಾಗಿ ಕೇಳಿದಾಗ 'ತಾಯ್ತನ' ಕುರಿತಂತೆ ಒಂದ ಕಥೆಯನ್ನು ಬರೆದು ಕಳುಹಿಸಿದ್ದೆ. ಅವರು "ಆ ಕಥೆಯಲ್ಲಿ ವೇದಾ ಇಲ್ಲವೆಂದೂ, ಬೇರೊಂದು ಕಥೆಯನ್ನು ಬರೆದುಕೊಡಬೇಕೆಂದೂ" ಪತ್ರಿಸಿದ್ದರು. ನನ್ನ ಹೈಸ್ಕೂಲಿನ ದಿನಗಳಲ್ಲಿ ಕಂಡ ಒಂದು ಘಟನೆ ಮತ್ತು ನನ್ನ ತಾಯ್ತನದ ಅನುಭವಗಳನ್ನು ಬೆಸೆದು ರಚಿಸಿದ್ದ ಕಥೆಯಲ್ಲಿ ನಾನಿರದೆ ಇನ್ನಾರಿರಲು ಸಾಧ್ಯ? ಸ್ವ-ಸಮರ್ಥನೆ ತಪ್ಪು ಎಂದು ಅನ್ನಿಸಿದರೂ "ಕಥೆ ಚೆನ್ನಾಗಿಲ್ಲ ಎನ್ನಿ. ಅಭಿಪ್ರಾಯವನ್ನು ತೆಗೆದುಕೊಳ್ಳುತ್ತೇನೆ. ಆದರೆ ಕಥೆಯಲ್ಲಿ ವೇದಾ ಇಲ್ಲ ಎಂದರೆ ಹೇಗೆ?" ಎಂಬರ್ಥದಲ್ಲಿ ಮರು ಉತ್ತರ ಕೊಟ್ಟಿದ್ದೆ. ಆದರೆ ನಾನು ಇರುವ ಕಥೆಗಳನ್ನು ವಿಮರ್ಶಕರು ಬೌದ್ಧಿಕ ಭಾರ ಎಂಬ ದೃಷ್ಟಿಯಿಂದ ನಿರಾಕರಿಸಿದ್ದೆ ಹೆಚ್ಚು.

ಈ ಬಗೆಯ ಸಂದರ್ಭಗಳನ್ನೆಲ್ಲಾ ಸೃಷ್ಟಿಸಿರುವುದು ಕಳೆದು ಹೋಗಿರುವ ಸ್ತ್ರೀ ಸಂವೇದನೆ ಅಥವಾ ತಪ್ಪಾಗಿ, ಇಲ್ಲವೇ ಪುರುಷ ದೃಷ್ಟಿಕೋನದಿಂದಲೇ ಅರ್ಥೈಸಲ್ಪಡುತ್ತಿರುವ ಸ್ತ್ರೀ ಸಂವೇ ದನೆಯೇ ಎನ್ನಬಹುದು. ಪಂಪನಿಂದ ಇಲ್ಲಿಯತನಕ ಸೃಷ್ಟಿಯಾಗಿರುವ ಸಾಹಿತ್ಯದ ಎಲ್ಲ ಸಾಧನೆಗಳ ನಡುವೆಯೂ ಕಾಣಿಸಿಕೊಳ್ಳುವ ಕೊರತೆ, ಈ ಸ್ತ್ರೀ ಸಂವೇದನೆ ಕುರಿತಾದದ್ದೇ. ಸ್ತ್ರೀಯರ ಇಂಚು ಇಂಚನ್ನು ವರ್ಣಿಸುವ ಒಂದಷ್ಟು ಸಾಹಿತ್ಯ ಓದಿಯೂ ಎದೆಹಾಲು ಬರುವುದು ಒಂದು ರಂಧ್ರದಿಂದಲಾ? ಎಂಬುದನ್ನು ಸ್ಪಷ್ಟಪಡಿಸಿದ್ದು ಸ್ವ-ಅನುಭವ ಮಾತ್ರವೇ. ಅದನ್ನೇ ನಾನು 'ಸ್ತ್ರೀ ಸಂವೇದನೆ' ಎನ್ನುವುದು.

ಯಾರು ಒಪ್ಪಲಿ ಬಿಡಲಿ, ಇಂದು ಸ್ತ್ರೀವಾದ-ಸ್ತ್ರೀವಾದಿ ಚಳುವಳಿ ಸಾಹಿತ್ಯದ ಒಟ್ಟಿಗೆ ಇದೆ. ನಮ್ಮ ಲೇಖಕರು, ವಿಮರ್ಶಕರು ಅದನ್ನು ಒಪ್ಪಿಕೊಳ್ಳಬೇಕಿದೆ. ಆಯಾ ವಾದ ಮತ್ತು ಚಳುವಳಿಗಳಲ್ಲಿ ಎಷ್ಟು ಉತ್ಸಾಹದಿಂದ ತಮ್ಮನ್ನು ತೊಡಗಿಸಿಕೊಂಡರೋ ಅಷ್ಟೇ ಉತ್ಸಾಹ ದಿಂದ ಇಲ್ಲಿಯೂ ತೊಡಗಿಸಿಕೊಂಡು, ಸ್ತ್ರೀವಾದೀ ಸಾಹಿತ್ಯ ಮತ್ತು ಚಳುವಳಿಗಳನ್ನು ವಿಸ್ತೃತ ಗೊಳಿಸಬೇಕಿದೆ. ನೂರಾರು ಸಾಕವ್ವ, ಮಂಜುಳ, ಮಾಗಿ, ಮಂಗಳೆಯರನ್ನು ಕನ್ನಡ ಸಾಹಿತ್ಯಕ್ಕೆ ಕೊಡುಗೆಯಾಗಿ ಕೊಡಬೇಕಿದೆ. ಸ್ತ್ರೀ ಮತ್ತು ಪುರುಷ ಇಬ್ಬರನ್ನೂ ಒಳಗೊಂಡ ಸ್ತ್ರೀವಾದ, ಸಮಾನತೆಯ ತಳಹದಿಯುಳ್ಳ ಅಖಂಡ ಮಾನವತಾವಾದದೆಡೆಗೆ ಕೊಂಡೊಯ್ಯುತ್ತದೆ. ಅಂತಹ ಸಾಹಿತ್ಯವನ್ನು ಮೌಲ್ಯಮಾಪನ ಮಾಡುವ ವಿಮರ್ಶೆ ಸಹ ತನ್ನ ಮಾನದಂಡಗಳನ್ನು ಬದಲಿಸಿ ಕೊಳ್ಳಬೇಕು. ತಾಳ್ಮೆಯ ಓದೂ ಸಹ ಬೇಕು.

ಹಾಗೆಂದು ಇಂದು ಬರೆಯುತ್ತಿರುವವರೆಲ್ಲಾ, ಬರೆದದ್ದೆಲ್ಲಾ ಬಹಳ ಎತ್ತರದ್ದು ಎಂಬ ವಿತಂಡವಾದವನ್ನು ನಾನು ಹೂಡುವುದಿಲ್ಲ. ಬರೆಯುತ್ತಿರುವುದನ್ನು ಕಾದು ನೋಡಬೇಕು. ತೀರ್ಪು ಮತ್ತು ತೀರ್ಮಾನಗಳಿಗಿಂತ ಚರ್ಚೆ ಮತ್ತು ಸಂವಾದಗಳು ಬೇಕು. ತೀರ್ಪಿನ ನಿಲುವು 'ಭೂತ'ವನ್ನು ಓಲೈಸಿಬಿಡುತ್ತದೆ. 'ಭವಿಷ್ಯ'ವನ್ನು ಸೃಷ್ಟಿಸುವುದಿಲ್ಲ. ಆದರೆ ಭವಿಷ್ಯವನ್ನು ರೂಪಿಸುವ ಅವಕಾಶಗಳು ಈಗ ಹೇರಳವಾಗಿವೆ. ಅನನ್ಯವಾಗಿವೆ. ಅದನ್ನು ಗಮನಿಸಬೇಕು. ಅದು ಇಂದಿನ ತುರ್ತಾಗಿದೆ.

●

## ಬದುಕು ಬರಹಗಳ ಮಧ್ಯದ ತಿಕ್ಕಾಟ

**●ಹಮೀದ್ ಮಂಜೇಶ್ವರ**

"ಪ್ರಸ್ತುತ ಕನ್ನಡ ಸಾಹಿತ್ಯ ಸಂದರ್ಭ ಒಂದು ರೀತಿಯ ನಿಲುಗಡೆ ಸ್ಥಿತಿಯನ್ನು ಅನುಭವಿ ಸುತ್ತಿದೆಯೇ" - ಈ ಪ್ರಶ್ನೆ ಬಹಳಷ್ಟು ಬಾರಿ ಇಲ್ಲಿ ಹಾದುಹೋಗಿದೆ. ಬಾಯಿಂದ ಬಾಯಿಗೆ ದಾಟಿ ಹೋಗಿದೆ. ಸಮಕಾಲೀನ ಕನ್ನಡ ಸಾಹಿತ್ಯಸಂದರ್ಭದಲ್ಲಿ ಸತ್ವಯುತ ಕೃತಿಗಳ ಕೊರತೆ ಇದೆ ಎಂದೂ ವಾದಿಸಲಾಗುತ್ತಿದೆ. ಮುಖ್ಯವಾಗಿ ಯುವ ತಲೆಮಾರಿನ ಬರಹಗಾರರಲ್ಲಿ ಈ ರೀತಿಯ ಕೊರತೆಯನ್ನು ಬೊಟ್ಟು ಮಾಡಲಾಗುತ್ತಿದೆ.

ಈ ವಾದವು ಮೇಲ್ನೋಟಕ್ಕೆ ಹೌದೆನಿಸಬಹುದು. ಇತ್ತೀಚೆಗಿನ ವರ್ಷಗಳಲ್ಲಿ ಒಂದು ಸಾಹಿತ್ಯಿಕ ಕಾಲಘಟ್ಟ ನಿರ್ಣಯಿಸಬಲ್ಲಂತಹ ಕೃತಿಯಾಗಲೀ, ಸಾಂಸ್ಕೃತಿಕ ಮೈಲಿಗಲ್ಲಾಗುವಂತಹ ಕೃತಿಯಾಗಲೀ ನಮ್ಮೆದುರು ಇಲ್ಲ. ಒಂದು ಕಾಲದಲ್ಲಿ ಸಮಕಾಲೀನರಾಗಿದ್ದ ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ ಮುಂತಾದ ದೈತ್ಯ ಪ್ರತಿಭೆಗಳ ದಂಡೇ ಇರುತ್ತಿದ್ದರೆ, ಪ್ರಸ್ತುತ ಆ ರೀತಿಯ ವಾತಾವರಣ ಕಾಣುವುದಿಲ್ಲ. ಅಂದ ಮಾತ್ರಕ್ಕೆ ಯುವ ತಲೆಮಾರಿನ ಬರಹಗಾರರಲ್ಲಿ ಪ್ರತಿಭೆ ಇಲ್ಲ, ಸತ್ವ ಇಲ್ಲ ಎಂದೆನ್ನುವುದೂ ಸಾಧ್ಯವಿಲ್ಲ. ಗಟ್ಟಿ ಸಾಹಿತ್ಯ ಅಲ್ಲ ಎಂದು ತೀರ್ಮಾನಿ

ಸುವುದೂ ಕಷ್ಟ. ಮಾತ್ರವಲ್ಲ ಸಾಹಿತ್ಯ ಸಂದರ್ಭವನ್ನು ಆಯಾ ಕಾಲಸಂದರ್ಭದಲ್ಲಿ ನೋಡ ಬೇಕಾದ ಅಗತ್ಯ ಕೂಡಾ ಇದೆ. ಇವತ್ತು ಯಾವ ಪ್ರಕಾರದಲ್ಲಿ ಸಾಹಿತ್ಯವನ್ನು ರಚಿಸಬೇಕು, ಯಾವುದು ಜನರಿಗೆ ಇಷ್ಟವಾಗಬಹುದು ಎನ್ನುವ ಒಂದು ರೀತಿಯ ಸಂಕಷ್ಟವೂ ಬರಹ ಗಾರರಿಗಿದೆ. ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ ಈ ಯಾವ ಭಾಷೆಯೂ ಇವತ್ತು ಓದುಗರನ್ನು ತೃಪ್ತಿಪಡಿಸಲಾರದು ಎನಿಸುತ್ತದೆ. ನವ್ಯೋತ್ತರ ಸಾಹಿತ್ಯ ಪ್ರಕಾರವೂ ಜನರನ್ನು ಹಿಡಿದಿಟ್ಟುಕೊಳ್ಳಲಾಗದ ಸ್ಥಿತಿಯಲ್ಲಿ, ಸಾಹಿತ್ಯಕ್ಕೆ ಹೊಸ ಆಯಾಮ ಒಂದು ಬೇಕಾಗಿದೆಯೇ? ಹೌದಾದರೆ ಆ ಆಯಾಮ ಯಾವುದು? ಇದು ನಮ್ಮೆದುರು ಇರುವ ಪ್ರಶ್ನೆ. ಹಾಗೆಯೇ ಯುವ ತಲೆಮಾರಿನ ಬರಹಗಾರರ ಮುಂದಿರುವ ಬಿಕ್ಕಟ್ಟು ಕೂಡಾ.

ಒಂದು ಕಾಲದ ಸತ್ವ ಸಾಹಿತ್ಯದ ಸಂವೇದನೆಯಾಗದಿದ್ದರೆ, ಸಾಹಿತ್ಯ ಕ್ರಿಯೆ ಮಾತ್ರವಾಗಿ ಬಿಡಬಹುದು. ಆಗ ಅದು ಸಾಹಿತ್ಯಕ್ಕಾಗಿ ಸಾಹಿತ್ಯ ಆಗಬಹುದೇ ಹೊರತು ಸಾಮಾಜಿಕ ಸಂದರ್ಭದಲ್ಲಿ ತನ್ನನ್ನು ಗುರುತಿಸಿಕೊಳ್ಳಲಾರದು. ಈ ನೆಲೆಗಟ್ಟಿನಲ್ಲಿ ಇವತ್ತಿನ ಸಾಹಿತ್ಯವನ್ನು ನೋಡಬೇಕಾಗಿದೆ. ಆಗ ಇವತ್ತಿನ ಯುವ ಸಮೂಹ ಎದುರಿಸುತ್ತಿರುವ ಸವಾಲುಗಳು ಅವರ ಸೃಜನಶೀಲತೆಯ ಮೇಲೆ ಬೀರುವ ಪರಿಣಾಮ ಅರ್ಥಮಾಡಿಕೊಳ್ಳಬಹುದು. ಆದ್ದರಿಂದ ಇವತ್ತಿನ ಸಾಹಿತ್ಯ ಸ್ಥಿತಿಯನ್ನು ಕಾಲ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಎರಡು ವಿಷಯಗಳನ್ನು ಗಮನದಲ್ಲಿರಿಸಿಕೊಂಡು ನೋಡಬಹುದೆನಿಸುತ್ತದೆ. ಸಾಮಾಜಿಕ ಸಂದರ್ಭ ಮೊದಲನೆಯದು. ಎರಡನೆಯದು ಭಾಷಿಕ ಸಂದರ್ಭ.

ನಮ್ಮ ಸಾಮಾಜಿಕ ಪರಿಸರ ಬಹಳಷ್ಟು ಬದಲಾಗಿದೆ. ಇಲ್ಲಿಯ ಆಗುಹೋಗುಗಳು, ಮೌಲ್ಯಗಳು ಬದಲಾಗಿದೆ. ಕಾಲಕ್ಕೆ ಗಡಿಯಾರದ ಮುಳ್ಳನ್ನು ಮೀರಿದ ಓಟ ಬಂದಿದೆ. ಅದಕ್ಕೆ ತಕ್ಕ ಹಾಗೆ ನಮ್ಮ ನಡೆ-ನುಡಿಗಳು ಬದಲಾಗಿದೆ. ಭಾಷೆ ಬದಲಾಗಿದೆ. ವ್ಯವಹಾರ ರೀತಿ ಬದಲಾಗಿದೆ. ಸಂವಹನ ಸ್ಥಿತಿ ಬದಲಾಗಿದೆ. ಕಳೆದ ಒಂದು ದಶಕವನ್ನು ಗಮನದಲ್ಲಿಟ್ಟು ಕೊಂಡರೂ, ನಮ್ಮ ಸಂದರ್ಭ ಜಾಗತೀಕರಣ ಪ್ರಕ್ರಿಯೆಯೊಂದಿಗೆ ಸಮೀಕರಣಗೊಳ್ಳುತ್ತಿ ರುವುದನ್ನು ಕಾಣುತ್ತೇವೆ. ಈ ಜಾಗತೀಕರಣ, ಹೊಸ ಆರ್ಥಿಕ ಸಿದ್ಧಾಂತ, ಮಾರುಕಟ್ಟೆ ಸಂಸ್ಕೃತಿ ತನ್ನದೇ ಆದ ಒಂದು ಪ್ರಭಾವವಲಯವನ್ನು ಸೃಷ್ಟಿಸಿಕೊಂಡು, ಇಡೀ ಸಮೂಹವನ್ನು ಈ ಪ್ರಭಾವವಲಯಕ್ಕೆ ಬೀಳಿಸತೊಡಗಿದೆ. ಈ ರೀತಿಯ ಅಸಂಗತ ಕಾಲಘಟ್ಟ ಇಲ್ಲಿಯ ಸಾಹಿತ್ಯಕ, ಸಾಮಾಜಿಕ, ಸಾಂಸ್ಕೃತಿಕ ಸಂದರ್ಭವನ್ನು ತನ್ನ ಮೂಗಿನ ನೇರಕ್ಕೆ ಆಳತೊಡಗಿದೆ. ಇದು ಇಲ್ಲಿಯ ಒಟ್ಟು ವಾತಾವರಣಕ್ಕೆ ಬೇರೆಯದೇ ಆದ ಮುಖ ತಂದುಕೊಟ್ಟಿದೆ. ಈ ಸ್ಥಿತಿಯಲ್ಲಿ ಕಳೆದು ಹೋಗತೊಡಗಿರುವುದು ಇಲ್ಲಿಯ ಯುವ ಸಮೂಹ.

ಗ್ರಾಹಕ ಸಮಾಜ ವ್ಯವಸ್ಥೆ ಹುಟ್ಟಿಹಾಕುತ್ತಿರುವ ಜಾಗತೀಕರಣವು ಯುವ ಸಮೂಹದ ಬದುಕಿನ ಮೇಲೆ ನೇರ ಪ್ರಭಾವ ಬೀರಿದ್ದು, ಅವರ ಸೃಜನಶೀಲತೆಯನ್ನು ಮಾರುಕಟ್ಟೆ ಸೂತ್ರಕ್ಕೆ ಬಗ್ಗಿಸುವಂತಹ ವಾತಾವರಣವನ್ನು ಸೃಷ್ಟಿಸಿದೆ. ಆದ್ದರಿಂದ ಮಾರುಕಟ್ಟೆ ಸ್ಪರ್ಧೆಯಲ್ಲಿ, ಚಲಾವಣೆ ಯಲ್ಲಿರುವ ಸರಕಾಗಲು ಹೆಣಗಾಡಬೇಕಾಗಿದೆ. ಈ ರೀತಿಯ ಒತ್ತಡ ಇಂದಿನ ಯುವ

ತಲೆಮಾರಿನ ಲೇಖಕರ ಮೇಲೂ ಪರಿಣಾಮ ಬೀರತೊಡಗಿದೆ. ಒಂದು ಕಡೆಯಿಂದ ಅತಂತ್ರ ಉದ್ಯೋಗ ಸ್ಥಿತಿ, ಇನ್ನೊಂದು ಕಡೆಯಿಂದ ವೇಗವಾಗಿ ಸಾಗುವ ಸಾಮಾಜಿಕ ಸ್ಥಿತಿ ಎರಡೂ ತನ್ನದೇ ರೀತಿಯಲ್ಲಿ ಅವರ ಬದುಕಿನ ಚಿತ್ರ ಬಿಡಿಸತೊಡಗಿದೆ. ಈ ಸಂದರ್ಭವೇ ಅವರ ಓದನ್ನು, ಬರವಣಿಗೆಯನ್ನು ಕಾಲ ಪರಿಸ್ಥಿತಿಗೆ ಹಿಡಿದಿಡುವ ಪ್ರಯತ್ನ ಮಾಡುತ್ತಿದೆ.

ನನ್ನ ವ್ಯಕ್ತಿಗತ ಉದಾಹರಣೆ ತೆಗೆದುಕೊಂಡಾಗ, ಕಳೆದ ನಾಲ್ಕು ವರ್ಷದಿಂದೀಚೆಗೆ ಒಂದೇ ಒಂದು ಕಥೆಯನ್ನು ಬರೆಯಲಾಗಿಲ್ಲ. ಕಳೆದ ಎರಡೂವರೆ ವರ್ಷಗಳಿಂದ ಕಥೆಯ ವಸ್ತುವನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆಯುವ ದಿನಾಂಕವನ್ನು ಮುಂದೂಡುತ್ತಾ ಬಂದಿದ್ದೇನೆ. ಯಾಕೆ ಹೀಗೆ ಅಂದರೆ ಇದು ನನ್ನ ಆಲಸ್ಯದ ಸ್ಥಿತಿ ಅಲ್ಲ. ನನ್ನ ಬದುಕಿನ ಸ್ಥಿರತೆಗೆ ಹೆಣಗಾಡುವ ಸಾಂದರ್ಭಿಕ ಪರಿಸ್ಥಿತಿ. ಈ ಮಾರುಕಟ್ಟೆ ಲೋಕದಲ್ಲಿ, ಸೈಬರ್ ಸಂಸ್ಕೃತಿಯಲ್ಲಿ ನನ್ನನ್ನು ಕಂಡುಕೊಳ್ಳಬೇಕಾಗಿದೆ. ಇಲ್ಲಿಯ ಸ್ಪರ್ಧಾತ್ಮಕ ಪರಿಸರದಲ್ಲಿ ನನ್ನನ್ನು ಉಳಿಸಿ ಕೊಳ್ಳಬೇಕಾಗಿದೆ. ನನ್ನನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ನನ್ನ ಸೃಜನಶೀಲತೆಯ ಗತಿಯನ್ನು ಅದಕ್ಕೆ ತಕ್ಕ ಹಾಗೆ ಹೆಣೆಯತೊಡಗುತ್ತೇನೆ. ಆಗ ನನ್ನ ಬರವಣಿಗೆ "ಸೃಜನಶೀಲ', 'ಸೃಜನೇತರ' ಪ್ರಕಾರ ಎಂಬ ಪ್ರಭೇದಕ್ಕಿಂತ, ನನ್ನ ಬದುಕನ್ನು ರೂಪಿಸುವ ಸಾಹಿತ್ಯ ಎನ್ನುವ ನಿರ್ಧಾರಕ್ಕೆ ನನ್ನನ್ನು ತಂದು ನಿಲ್ಲಿಸುತ್ತದೆ. ಆಗ ನನ್ನ ಓದು ಕೂಡಾ ಅದಕ್ಕೆ ಪೂರಕವಾಗಿ ನಿಲ್ಲುತ್ತದೆ. ನನ್ನ ಓದು ಈ ಕ್ಷಣದ ನನ್ನ ಬದುಕಿನ ಸ್ವರೂಪವನ್ನು ಚಿತ್ರಿಸುವ ಚಿತ್ರಣಕ್ಕೆ ಪೂರಕವಾದ ಬಣ್ಣವಾಗು ತ್ತದೆಯೇ ಹೊರತು, ಅದರಿಂದಾಚೆಗೆ ನಾನು ಹೋಗುವುದಿಲ್ಲ. ಅದಕ್ಕೇ ಆರೇಳು ಅಧ್ಯಯನದ ವರದಿಗಳನ್ನು ಸಿದ್ಧಪಡಿಸುವ ಅವಧಿಯಲ್ಲಿ ನನಗೆ ಒಂದೇ ಒಂದು ಕಥೆಯನ್ನು ಪೂರ್ತಿಗೊಳಿಸಲಿಕ್ಕೆ ಆಗುವುದಿಲ್ಲ. ಗರಬೇತಿ ಪೂರಕ ಸಾಮಗ್ರಿ ರಚನೆಯಾಗುವ ಅವಧಿಯಲ್ಲಿ ಒಂದು ಕವಿತೆ ರೂಪುಗೊಳ್ಳುವುದಿಲ್ಲ. ಅಂದರೆ ನನ್ನ ಸೃಜನಶೀಲತೆ ಬತ್ತಿ ಹೋಗಿದೆ ಎಂದೇ? ಸಂವೇದನೆ ಇಲ್ಲ ಎಂದೇ ಅಥವಾ ನನ್ನ ಆಯ್ಕೆಯ ಆದ್ಯತೆಯೇ?

ಈ ಪರಿಸ್ಥಿಯಲ್ಲಿರುವ ಇಲ್ಲಿಯ ಯುವ ಸಮೂಹದ ಮೇಲಿನ ಒತ್ತಡ, ಅವರ ಕ್ರಿಯಾತ್ಮಕತೆಯನ್ನು ನಿರ್ಬಂಧಿಸಿ ಬಿಡುತ್ತಿದೆ. ಅವರ ಮಾನಸಿಕ ಒತ್ತಡ ಕಾಲದೊಂದಿಗೆ ಓಟದ ಅನಿವಾರ್ಯತೆ ಅವರ ಬರಹಗಳನ್ನು ನಿಯಂತ್ರಿಸಲು ಸಾಧ್ಯ. ಬದುಕು ಮತ್ತು ಬರಹದ ಮಧ್ಯೆಗಿನ ಒಂದು ರೀತಿಯ ತಿಕ್ಕಾಟ ಇದು.

ಅಲ್ಲದೆ ಬರಹಗಾರನನ್ನು ಉತ್ತೇಜಿಸುವ ವಾತಾವರಣವೂ ನಮ್ಮಲ್ಲಿ ಇದೆಯೇ ಎಂಬುದನ್ನು ನಮ್ಮೊಳಗೇ ಒಮ್ಮೆ ಕೇಳಿಕೊಳ್ಳಬೇಕು. ಸಾಹಿತ್ಯ ಬರೆದು ಮುಖ್ಯವಾಗಿ ಕಥೆ, ಕಾವ್ಯ ಬರೆದು ಬದುಕುವ ಸ್ಥಿತಿ ಇದೆಯೇ? ಇತ್ತೀಚೆಗಿನ ವರ್ಷಗಳಲ್ಲಿ ಕಾವ್ಯ ಕಥೆಗಳಿಗೆ ಮಾರುಕಟ್ಟೆ ಇಲ್ಲದಿರುವುದನ್ನು ನೋಡುತ್ತೇವೆ. ಕಾವ್ಯ ಕಥೆಗಳನ್ನು ಪುಸ್ತಕ ಮಾರಾಟಗಾರರು ಕೊಂಡುಕೊಳ್ಳುವುದೇ ಕಡಿಮೆ. ಈಚೆಗೆ ಕಾದಂಬರಿಗಳಿಗೂ ಮಾರುಕಟ್ಟೆ ಇಲ್ಲವಾಗುತ್ತಿದೆ. ಕಾದಂಬರಿಗಳು ಬರುವುದೇ ಕಡಿಮೆ. ಆದರೂ ಕೊಳ್ಳುವವರಿಲ್ಲ ಎನ್ನುತ್ತಾರೆ ಪುಸ್ತಕ ವ್ಯಾಪಾರಿಗಳು. ಅಷ್ಟೇ ಇಲ್ಲ ಎಂದರೂ ದೃಶ್ಯ ಮಾಧ್ಯಮಗಳು ಮುದ್ರಣ ಸಾಹಿತ್ಯದ ಮೇಲೆ ಪ್ರಭಾವ ಬೀರಿ

ದ್ವನ್ನು ಅಲ್ಲಗಳೆಯಲಾಗದು. ಕಾದಂಬರಿಯ ಜಾಗದಲ್ಲಿ ಧಾರಾವಾಹಿಗಳು ನುಸುಳಿ ಕೊಂಡಿವೆ. ಅವು ನಮ್ಮಿಂದ ಹೆಚ್ಚಿನ ಸಮಯವನ್ನು ಕೇಳುವುದಿಲ್ಲ. ನಮ್ಮ ಕೆಲಸ ಕಾರ್ಯಗಳ ಮಧ್ಯೆಯೇ ನಮ್ಮೊಡನೆ ಸಂವಹನ ನಡೆಸುತ್ತವೆ. ನಮಗೆ ಆಪ್ತವಾಗಿ ಬಿಡುತ್ತವೆ. ಬರಹಗಾರರೂ ದೃಶ್ಯ ಮಾಧ್ಯಮದತ್ತ ತಮ್ಮ ಒಲವು ಹರಿಸುತ್ತಾರೆ. ಇಲ್ಲವೇ ಮಾರುಕಟ್ಟೆಯಲ್ಲಿ ಬಿಕರಿಯಾಗುವ ಸಾಮಗ್ರಿಗಳಿಗೆ ಒತ್ತು ನೀಡುತ್ತಾರೆ. ಇದರಿಂದ ಖ್ಯಾತ ಕಾದಂಬರಿಕಾರರೂ ಭಾಷಾ ಲೇಖನ, ವಾಸ್ತು, ಜ್ಞಾನ ಹೆಚ್ಚಿಸುವ ಲೇಖನಗಳನ್ನು ಬರೆಯಲು ಮುಂದಾಗುತ್ತಾರೆ. ಮಾರುಕಟ್ಟೆ ಸರಕು ಯಾವುದು ಎಂಬುದೇ ನಮಗೆ ಯೋಜನೆಯಾಗಿ ಬಿಡುತ್ತದೆ. ನಮ್ಮ ಕೊಡೆ ಆ ಕಡೆ ಸರಿಯುತ್ತದೆ. ಇದು ಇವತ್ತಿನ ದ್ವಂದ್ವ.

ಜತೆಗೆ ಇಂದಿನ ಶಿಕ್ಷಣ ವ್ಯವಸ್ಥೆಯೂ ಕೂಡಾ ಸಾಹಿತ್ಯದ ಮೇಲೆ ಪರಿಣಾಮ ಬೀರುತ್ತದೆ. ಶಿಕ್ಷಣ ಇಂಗ್ಲಿಷ್‌ಮಯವಾಗುವುದರೊಂದಿಗೆ ಕನ್ನಡ ಸಾಹಿತ್ಯದ ಸಂದರ್ಭವೂ ಬಡವಾಗುತ್ತದೆ. ಇಂಗ್ಲಿಷ್ ಭಾಷೆ ಬದುಕನ್ನು ರೂಪಿಸುತ್ತದೆ, ಮಾರುಕಟ್ಟೆ ತಂದು ಕೊಡುತ್ತದೆ ಎನ್ನುವ ಭ್ರಮೆ ಯೊಂದಿಗೆ ಕನ್ನಡವನ್ನು ಮರೆಯಲಾಗುತ್ತಿದೆ. ಕನ್ನಡದ ಓದುಗ ವರ್ಗವೂ ಕ್ಷೀಣಿಸ ತೊಡಗುತ್ತಿದೆ. ಕನ್ನಡಕ್ಕೆ ಮಾರುಕಟ್ಟೆ ಇಲ್ಲ ಎಂಬ ಧೋರಣೆ, ಇವತ್ತಿನ ವಿದ್ಯಾರ್ಥಿ ಸಮೂಹವನ್ನು ಕನ್ನಡದ ಸಂದರ್ಭದಿಂದ ದೂರ ಕೊಂಡೊಯ್ಯುತ್ತಿದೆ. ಇದು ಓದುಗ ವರ್ಗ, ಬರೆಯುವ ವರ್ಗ ಎರಡನ್ನೂ ಕಡಿಮೆಗೊಳಿಸುತ್ತದೆ. ಈ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡಾಗ ಮಾತ್ರ ಇವತ್ತಿನ ಯುವ ಬರಹಗಾರರ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಹುದು. ಕನ್ನಡಕ್ಕೆ ಮಾರುಕಟ್ಟೆ ಇಲ್ಲ ಎಂಬ ಪರಿಸ್ಥಿತಿಯಿಂದ ಹೊರಗೆ ಬರಬೇಕಾಗಿದೆ. ಕನ್ನಡಕ್ಕೂ ಮಾರುಕಟ್ಟೆ ಲಭಿಸಬೇಕಾಗಿದೆ. ಯುವ ಸಮೂಹದ ಗೊಂದಲಗಳನ್ನು ಕಡಿಮೆ ಮಾಡಲು ಸಾಧ್ಯವಾದರೆ ಸಾಹಿತ್ಯ ಸಂದರ್ಭ ಬೇರೆಯೇ ಮಜಲನ್ನು ತೆಗೆದುಕೊಳ್ಳಲು ಸಾಧ್ಯವಾಗಬಹುದು. ಜಾಗತೀಕರಣದ ಜಾಗತಿಕ ಹಳ್ಳಿಯ ಕಲ್ಪನೆಯಿಂದ, ನಮ್ಮ ಸ್ಥಳೀಯತೆಯ ವಾಸ್ತವ ಹೆಚ್ಚು ಆಪ್ತವಾಗಬೇಕು. ಈ ವಾತಾವರಣ ನಿರ್ಮಾಣ ಸಾಧ್ಯವೇ?



## ಸೃಜನಶೀಲತೆಯ ಕೊರತೆಯೇ?

• ಟೀನಾ ಶಶಿಕಾಂತ್

ಐದಾರು ವರುಷಗಳ ಕೆಳಗೆ ಚಿಕ್ಕಮಗಳೂರಿನ ಕಲಾಸಾಹಿತ್ಯ ವೇದಿಕೆಯೊಂದು ನಡೆಸಿದ ಕವನ ಸ್ಪರ್ಧೆಯೊಂದರಲ್ಲಿ ಭಾಗವಹಿಸಿದ್ದನ್ನು ಜ್ಞಾಪಿಸಿಕೊಳ್ಳುತ್ತಿದ್ದೇನೆ. ಭಾಗವಹಿಸಿದ್ದಾಯಿತು. ಬಹುಮಾನವೂ ಬಂತು. ವೇದಿಕೆಯ ಅಧ್ಯಕ್ಷೆ ಬಹುಮಾನ ಸ್ವೀಕರಿಸಲೆಂದು ಆಹ್ವಾನಿಸಿದರು. ಹೋಗಿದ್ದಾಯಿತು. ನಗರದ 'ಗಣ್ಯ' ಸಾಹಿತಿಗಳೆನಿಸಿಕೊಂಡಿದ್ದ ಈರ್ವರು ಬಹುಮಾನ ವಿತರಣೆಗೆಂದು ಬಂದಿದ್ದರು. ಮೊದಲನೇ ಅತಿಥಿಗಳು ಬೇರೇನೂ ಹೇಳುವ ಮೊದಲು ತಮ್ಮ ಅಧ್ಯಯನ ವಿಷಯವಾದ ವಚನಸಾಹಿತ್ಯದ ಬಗ್ಗೆ ಮಾತನಾಡಲು ಶುರುವಿಟ್ಟರು. ಅವರ ನಂತರ ಮಾತನಾಡಲೆಂದು ಎದ್ದು ನಿಂತ ಎರಡನೇ ಮಹಾನುಭಾವರು, ಮೊದಲನೆಯವರ ಭಾಷಣವನ್ನು ಮಧ್ಯದಲ್ಲೇ ತಡೆದು ನಿಲ್ಲಿಸಿ ತಮ್ಮ ಮಾತುಗಳನ್ನು ಸಮರ್ಥಿಸಿಕೊಳ್ಳಲಾರಂಭಿಸಿದರು. ಇವರೀರ್ವರ ಜೊತೆಗೆ ಆಗಮಿಸಿದ್ದ ಎರಡೂ ಬಳಗಗಳ ಶಿಷ್ಯಂದಿರಲ್ಲಿ ಮಾತಿನ ಚಕಮಕಿ ಆರಂಭವಾಯಿತು. ಇನ್ನೇನು? ಯುವಸಾಹಿತಿಗಳನ್ನು ಉತ್ತೇಜಿಸಲು ಕವನಸ್ಪರ್ಧೆಯನ್ನು ಆಯೋಜಿಸಿದ್ದ ವೇದಿಕೆಯ ಅಧ್ಯಕ್ಷೆಯ ಮುಖದ ಮೇಲೆ ಮುಜುಗರ, ಇರಿಸುಮುರಿಸು ಮುಂತಾದ ಭಾವನೆಗಳು ಸುಳಿದು ಹೋಗುತ್ತಿದ್ದವು. ಉಸಿರುಕಟ್ಟುವ ವಾತಾವರಣ ತಡೆಯಲಾಗದೆ ನಾನೂ, ನನ್ನೊಡನೆ ಬಂದಿದ್ದ ನನ್ನ ತಾಯಿಯವರೂ ಅರ್ಧದಲ್ಲೇಟ್ಟೆ ಕಾರ್ಯಕ್ರಮ ಬಿಟ್ಟೆದ್ದು ನಡೆದೆವು.

ತಿಂಗಳಾದ ಮೇಲೆ ಅದೇ ಕಲಾಸಾಹಿತ್ಯ ವೇದಿಕೆಯಿಂದ ಬಹುಮಾನಿತ ಹಾಗೂ ಮೆಚ್ಚಿಗೆಗೆ ಪಾತ್ರವಾದ ಕವನಗಳ ಸುಂದರ ಸಂಕಲನವೊಂದು ನನ್ನ ಕೈಸೇರಿತು. ಸಂತಸದಿಂದ ಪುಸ್ತಕ ಬಿಡಿಸಿದರೆ...ಆಘಾತ ಕಾದಿತ್ತು! ಬಹುಮಾನ ವಿತರಣಾ ಕಾರ್ಯಕ್ರಮದಲ್ಲಿ ಕಿತ್ತಾಡಿದ 'ಸಾಹಿತಿ' ಗಳಲ್ಲೊರ್ವರು ವಿಮರ್ಶಕನ ಪಾತ್ರ ವಹಿಸಿಕೊಂಡು ಕವನಗಳನ್ನು ಚೆನ್ನಾಗಿ ಹುರಿದಿಕ್ಕುವ ಕೆಲಸ ಮಾಡಿದ್ದರು. ಅವರ ಪ್ರಕಾರ ಸಂಕಲನದ ಕವನಗಳು ಈ ಕವನಗಳೇ ಆಗಿರಲಿಲ್ಲ. ಬದಲಾಗಿ ಸುಮ್ಮನೆ ಕಾಗದದ ಮೇಲೆ ಬೇಕಾಬಿಟ್ಟಿ ಗೀಚಿದ ಯಾವುದಕ್ಕೂ ಲಾಯಕ್ಕೇ ಆಗಿರದ ಸಾಹಿತ್ಯವಾಗಿದ್ದವು! ಯುವಸಾಹಿತಿಗಳಿಗೆ ಈ 'ವಿಮರ್ಶಕ' ನೀಡಿದ ಸಲಹೆ ಸರಿಸುಮಾರಾಗಿ ಹೀಗಿತ್ತು: " ಕುವೆಂಪು, ಅಡಿಗರಂತೆ ಬರೆಯುವುದಿದ್ದರೆ ಮಾತ್ರ ಬರೆಯಿರಿ. ಇಲ್ಲದಿದ್ದರೆ ಬರೆಯುವ ತೊಂದರೆಯನ್ನೇ ತೆಗೆದುಕೊಳ್ಳುವುದು ಬೇಡ. ಸಾಹಿತ್ಯಕೃಷಿ ಎಲ್ಲರಿಂದ ಸಾಧ್ಯವಿಲ್ಲ." ವಿಮರ್ಶೆಯ ಪರಿಭಾಷೆಯನ್ನೇ ಮರೆತು ಕೆಲವು ಯುವಕವಿಗಳ ಕವನಗಳನ್ನು ಆತ ಟೀಕಿಸಿದ್ದ ರೀತಿಯಂತೂ, ಆ ಕವಿಗಳು ಇನ್ನುಮುಂದೆ ಬರೆಯುವ ಆಸೆಯೇನಾದರೂ ಹೊಂದಿದ್ದರೆ ಖಂಡಿತವಾಗಿ ಮರೆಯಲು ಪ್ರೇರೇಪಿಸುವಂತಿತ್ತು! ಈಗಲೂ ನಾನು ಕವನ ಸ್ಪರ್ಧೆಗಳಲ್ಲಿ ಭಾಗವಹಿಸುವುದು, ಕವನ ಸಂಕಲನಗಳಿಗೆ ಕವಿತೆಗಳನ್ನು ಕಳುಹಿಸುವುದಾದರೆ ಸ್ವಲ್ಪ ಹಿಂದೆಮುಂದೆ ನೋಡುತ್ತೇನೆ.

ಈವತ್ತು ಹೊಸದಾಗಿ ಬರೆಯುತ್ತಿರುವ ಯವಲೇಖಕ, ಲೇಖಕಿಯರಿಗೆ ದಿಕ್ಕು ತೋಚದ ಸ್ಥಿತಿ ಇದೆ, ಒಪ್ಪಿಕೊಳ್ಳುತ್ತೇನೆ. ಚಳುವಳಿಗಳೇ ಇಲ್ಲದ ಇಂದಿನ ನ್ಯೂಟ್ರಲ್ ರೆಸ್ಪಾನ್ಸ್‌ಲೆಸ್ ಪರಿಸ್ಥಿತಿಯ ಬಗ್ಗೆ ವಿಶ್ವವಿದ್ಯಾನಿಲಯ ದಿನಗಳಿಂದ ನಾನೂ, ನನ್ನ ಮಿತ್ರ ಬಳಗವೂ, ಸ್ವತಃ ಲೇಖಕಿಯಾಗಿ ಬರೆಯುತ್ತಿರುವ ನನ್ನ ತಾಯಿಯೂ ತೀವ್ರವಾಗಿ ಚರ್ಚಿಸುತ್ತಲೇ ಬಂದಿದ್ದೇವೆ. ಈವತ್ತಿಗೂ ನನ್ನ ಹಲವು ಮಿತ್ರರು ಹೊಸ ಚಳುವಳಿಯೊಂದನ್ನು ಪ್ರಾರಂಭಿಸುವ ನಿಟ್ಟಿನಲ್ಲಿ ಹೆಣಗಾಡುತ್ತಲೇ, ವಾದ ಮಾಡುತ್ತಲೇ ಇದ್ದಾರೆ. ಯಾರಲ್ಲೂ ಸರಿಯಾದ ಉತ್ತರಗಳಿಲ್ಲ, ಸಮರ್ಥನೆಗಳಿಲ್ಲ. ಆದರೆ ಕನ್ನಡ ಸಾಹಿತ್ಯದ ಸೃಜನಶೀಲತೆ ಈಗ ಕುಗ್ಗಿದೆ ಎನ್ನಲಾಗುವುದಿಲ್ಲ. ಪ್ರಪಂಚದ ಬೇರೆ ಬೇರೆ ಭಾಷಾಸಾಹಿತ್ಯಗಳ ಇತಿಹಾಸವನ್ನು ಗಮನಿಸುತ್ತಾ ಬಂದರೆ ಎಲ್ಲಾ ಕಡೆಗಳಲ್ಲೂ ಕೆಲವು ಬ್ಲಾಂಕ್ ಪಿರಿಯಡ್ಸ್ ಕಂಡುಬರುತ್ತವೆ. ಆದರೆ ನಾವು 'ಬ್ಲಾಂಕ್', 'ಡಾರ್ಕ್' ಅಂದುಕೊಂಡ ಈ ಕಾಲಗಳು ಎಂದೂ ಪೂರ್ತಿಯಾಗಿ ರೆಸ್ಪಾನ್ಸ್‌ಲೆಸ್ ಆಗಿರಲಿಲ್ಲ. ಬದಲಾಗಿ ಒಂದು ಚಳುವಳಿಗೂ ಇನ್ನೊಂದು ಚಳುವಳಿಗೂ ಮಧ್ಯೆ ಸೇತುವೆಯ ಕೆಲಸವನ್ನ ಮಾಡಿದ ಕಾಲಕೋಶಗಳು ಇವಾಗಿದ್ದುವು. ಸೃಜನಶೀಲತೆಯೂ ಇತ್ತು. ಸಾಹಿತ್ಯಕೃಷಿಯೂ ನಡೆಯುತ್ತಲೇ ಇತ್ತು-ಬೃಹದ್ರೂಪದಲ್ಲಿಲ್ಲದಿದ್ದರೂನೂ. ಈಗ ನಾವು ಎದುರಿಸುತ್ತಿರುವುದೂ ಇದೇ ಪರಿಸ್ಥಿತಿಯನ್ನ. ಒಂದು ಥರದ ಹ್ಯಾಚಿಂಗ್ ಪಿರಿಯಡ್ ಇದು. ಮೊಟ್ಟೆಯೊಡೆದು ಹೊಸಜೀವ ಹೊರಬರಲು ಕಾವು ಕೊಡಬೇಕಷ್ಟೇ! ಈ ಕೆಲಸ ಮಾಡಬೇಕಾಗಿರುವುದು ಕೇವಲ ಹಳೆಯ ತಲೆಮಾರಿನ ಲೇಖಕ ಲೇಖಕಿಯರು ಮಾತ್ರವಷ್ಟೇ ಅಲ್ಲ, ಹೊಸಬರೂ ಕೂಡ. ಹಿರಿಯ ಲೇಖಕರು 'ಹೊಸಬರಲ್ಲಿ ಸೃಜನಶೀಲತೆಯೇ ಇಲ್ಲ' ಎಂದು ಮೂಗು ಮುರಿಯುವುದೂ, ಹೊಸಬರು 'ಅವರು ಬರೆದಿರುವುದರಲ್ಲಿ ಓದಲಿಕ್ಕೇನಿದೆ?' ಎಂದು ಹೀಯಾಳಿಸುವುದು ನಡೆಯುತ್ತಲೇ ಇದ್ದರೆ, ನಮ್ಮ ಸಾಹಿತ್ಯ ನಿಂತ ನೀರಾಗಿಬಿಡುವ ಸಾಧ್ಯತೆಗಳೇ ಜಾಸ್ತಿ. ಈ ನಿಟ್ಟಿನಲ್ಲಿ ಅಂದರೆ ಇಂದಿನ ಸಾಹಿತ್ಯವನ್ನು ಒರೆಗೆ ಹಚ್ಚಿ ಹೊಳಪು ಕೊಡುವುದರಲ್ಲಿ ಎರಡು ವಿಷಯಗಳು ಬಹಳ ಪ್ರಮುಖ ಪಾತ್ರವಹಿಸುತ್ತವೆ.

ಮೊದಲನೆಯದು ಯುವಲೇಖಕರಿಗೆ ವಿಮರ್ಶಕರು ಸೃಷ್ಟಿಸುವ ಪರಿಸರ. ಮಹಾಕವಿ ಕೀಟ್ಸ್ ತನ್ನ ಕೊನೆಗಾಲದಲ್ಲಿ ಬಹಳವಾಗಿ ಕುಗ್ಗಲು ಕೊರಗಲು, ಆತನ ವಿಮರ್ಶಕರ ಉಗ್ರ ಟೀಕೆಗಳೂ ಪ್ರಮುಖ ಕಾರಣವಾದವು. ವಿಮರ್ಶಾಲೋಕದ ಮೌಲ್ಯಗಳು ಥಿಯರಿಗಳು ಆಲೋಚನೆಗಳು ದಿನದಿಂದ ದಿನಕ್ಕೆ ಬದಲಾಗುತ್ತಿರುವ ಕಾಲವಿದೆ. ಇಂದು ಸಾಹಿತ್ಯ ಅಧ್ಯಯನ ವಿಮರ್ಶೆಯ ಚರ್ಚೆಯಿಲ್ಲದೆ ಅಪೂರ್ಣ. ರಚನಾ, ವಿರಚನಾ, ಪೋಸ್ಟ್‌ಮಾಡರ್ನ್, ಫೆಮಿನಿಸ್ಟ್, ಪೋಸ್ಟ್ ಕಲೋನಿಯಲ್ ಥಿಯರಿಗಳನ್ನು ಅಭ್ಯಸಿಸುತ್ತ ಹೋಗುತ್ತಿರುವಾಗ-ಈ ವಿಮರ್ಶಾ ವಾದಗಳ ನೆಲೆಯಲ್ಲೆ ಬರೆಯಬೇಕೆ? ಇವೆಲ್ಲದರಿಂದ ದೂರವಿರುವುದೇ ಒಳ್ಳೆಯದೆ? ನನ್ನ ಬರಹ ಯಾವ ರೀತಿಯ ವಿಮರ್ಶೆಗೊಳಗಾಬಹುದು? ಓದುಗನ ಪ್ರತಿಕ್ರಿಯೆಗೆ ಸ್ಪಂದಿಸುವಂತೆ ಮಾತ್ರ ಬರೆಯಲೆ? ಬರೆಯಬೇಕೆನಿಸಿದ್ದನ್ನು ಬರೆಯಲೆ? ಯಾವ ರೀತಿ ಬರೆದರೆ ನಾನು ಚರ್ಚೆಗೆ ಒಳಗಾಗಬಹುದು? ಒಳ್ಳೆಯ ಪ್ರಕಾಶನ ಸಂಸ್ಥೆ ನನ್ನ ಬರಹವನ್ನು ಪ್ರಕಟಿಸುವುದೇ? ...ಇವೇ

ಮುಂತಾದ ಗೊಂದಲಗಳು ಉಂಟಾಗುವುದು ಸಹಜ. ನಾನು ಕವನಗಳನ್ನು ಬರೆಯುತ್ತೇನೆಂದು ತಿಳಿದಾಗ ನನ್ನ ವಿಮರ್ಶಕ ಅಧ್ಯಾಪಕರೊಬ್ಬರು ಬಳಿಬಂದು- "ಎಲ್ಲಾ ಸರಿ, ನೀನು ಬರೀತಿರೋದೇನೋ ಒಳ್ಳೇದೇ. ಆದ್ರೆ ಇವತ್ತು ಕವನಗಳನ್ನ ಮನಸ್ಸುಕೊಟ್ಟು ಓದುವವರು ಎಷ್ಟು ಜನ ಇದ್ದಾರೆ ಟೀನಾ? ಎಷ್ಟು ಕವನ ಸಂಕಲನಗಳು ಧೂಳು ಹಿಡಿಯುತ್ತ ಬಿದ್ದಿವೆ! ನೀನು ಸ್ವಲ್ಪ ಗದ್ಯದ ಕಡೆಗೆ ಗಮನಕೊಟ್ಟರೆ ಒಳ್ಳೆದು ಅಂತ ನಂಗನಿಸುತ್ತೆ. ಇಟ್ ಈಸ್ ದಿ 'ಇನ್ ಥಿಂಗ್' ನೌ" ಎಂದು ನೇರವಾಗಿ ಹೇಳಿಬಿಟ್ಟರು. ನನಗೆ ಕಕ್ಕಾಬಿಕ್ಕಿಯಾಗುವಂತಾಯಿತು. ಅವರ ಮಾತಿನಲ್ಲಿದ್ದ ಕಟುಸತ್ಯ ನನ್ನನ್ನು ಚುಚ್ಚಿದ್ದಂತೂ ನಿಜ. ಏನನ್ನು ಆಯ್ದುಕೊಳ್ಳಬೇಕೆಂದೇ ತಿಳಿಯದ ಈ ಪರಿಸ್ಥಿತಿಯಲ್ಲಿ ಧೈರ್ಯವಹಿಸಿ ಪ್ರಯತ್ನಿಸುವವರೂ ಕಟುವಿಮರ್ಶೆಗೆ ಗುರಿಯಾದರೆ! ವಿಮರ್ಶಕರು ಬಯಾಸಡ್ ಆಗಿಬಿಡುವ ಸಾಧ್ಯತೆಗಳೂ ಇಲ್ಲದಿಲ್ಲ. ವಿಮರ್ಶಕರು ಕೇವಲ ಪ್ರೊಫೆಸರ್ ಅಷ್ಟೇ ಅಲ್ಲ, ಮಾರ್ಗದರ್ಶಿಯ ಪಾತ್ರವನ್ನೂ ವಹಿಸಿದರೆ ಒಳ್ಳೆಯದಾದೀತು. ಯಾವ ಕಾಲಕ್ಕೂ ಕನ್‌ಸಟ್ರಕ್ಟೀವ್ ಕ್ರಿಟಿಸಿಸಂ ಯುವ ಬರಹಗಾರರನ್ನು ಉತ್ತೇಜಿಸುತ್ತ ಬಂದಿರುವ ನಿದರ್ಶನಗಳು ಬೇಕಾದಷ್ಟಿವೆ.

ಎರಡನೆಯದು ಬದಲಾಗುತ್ತಿರುವ ಮೌಲ್ಯ, ಪರಿಸ್ಥಿತಿಗಳ ಜತೆಗೆ ಸಾಹಿತ್ಯ ಹೊಂದಾಣಿಕೆ ಮಾಡಿಕೊಳ್ಳಬೇಕೆ ಬೇಡವೆ ಎನ್ನುವ ಪ್ರಶ್ನೆ. ಈಗಿನ ಹೈ-ಟೆಕ್ ವಿದ್ಯಾಭ್ಯಾಸ, ಕೆರಿಯರ್‌ಗಳ ಮೋಡಿಯಲ್ಲಿ ಕಳೆದುಹೋಗುತ್ತಿರುವ ಯುವಜನಾಂಗ, ಸಾಹಿತ್ಯಿಕವಾಗಿ ಯೋಚನೆ ಮಾಡುತ್ತಲೇ ಇಲ್ಲ, ನಮ್ಮ ಸಾಂಸ್ಕೃತಿಕ ಪ್ರಜ್ಞೆ-ದಿಕ್ಕಾಪಾಲಾಗುತ್ತ ಇದೆ ಎನ್ನುವುದು ನನ್ನ ಮಿತ್ರನೊಬ್ಬನ ಕಟು ಟೀಕೆ. ಆದರೆ ಬದಲಾಗುತ್ತಿರುವ ಮೌಲ್ಯಗಳ ಬಗ್ಗೆ ಎಗ್ಗಿಲ್ಲದೆ ಬರೆಯಬೇಕು ಎನ್ನುವ, ಪೀತಪತ್ರಿಕೋದ್ಯಮಕ್ಕೆ ಎಲ್ಲಿಲ್ಲದ ಉತ್ಸಾಹದಿಂದ ಸ್ಪಂದಿಸುತ್ತ ಬಂದಿರುವ ನಾವು, ಡಿಜಿಟಲ್ ಯುಗವನ್ನು ಟೀಕಿಸುವಲ್ಲಿ ಜಾಗತೀಕರಣ, ಮಾರಲ್ ವ್ಯಾಲ್ಯೂಸ್, ಎತಿಕ್ಸ್, ಸಂಸ್ಕೃತಿ ಎಂದೆಲ್ಲ ಮಾತನಾಡುತ್ತೇವಲ್ಲ! ಇಲ್ಲಿ ಬಹಳಷ್ಟು ಪೂರ್ವಗ್ರಹಗಳೂ ಕೂಡ ಕೆಲಸಮಾಡುತ್ತವೆ. ಸಾಹಿತ್ಯಕ್ಕೂ ಕಂಪ್ಯೂಟರ್‌ಗೂ ಸಂಬಂಧವಿಲ್ಲ ಎಂದು ಭಾವಿಸಿಕೊಂಡು ಕೂತಿರುವ ಕಾವಲ್ಲ ಇದು. ಕಂಪ್ಯೂಟರ್ ಬಂದಾಕ್ಷಣ ನಮ್ಮ ಭಾರತೀಯ ಆಂಗ್ಲಸಾಹಿತ್ಯ ಬಡವಾಗಲಿಲ್ಲ. ಬದಲಿಗೆ ಅದನ್ನೇ ಆಧರಿಸಿ ಚಿಗಿತುಕೊಂಡು ಹೊಸ ಹೊಸ ರೂಪಗಳಲ್ಲಿ ಹೊರಹೊಮ್ಮಿತು. ನಮ್ಮ ಕನ್ನಡ ಸಾಹಿತ್ಯದ ವಿಷಯವಾಗಿ ಮಾತನಾಡುವುದಾದರೆ, ನಾವೂ ಕೂಡ ಕರೆಂಟ್ ಟ್ರೆಂಡ್ ಏನಿದೆಯೋ ಅದರೊಡನೆಯೆ ಕೈಜೋಡಿಸಿ ನಡೆಯುವುದು ಒಳಿತು. ಖಿನ್ನರಾಗಿ 'ನಮ್ಮಗಳಿಗೆ ಹೈ-ಟೆಕ್ ಸೌಲಭ್ಯಗಳ ಅರಿವಿಲ್ಲ, ಆಧುನಿಕ ವಿದ್ಯಾಭ್ಯಾಸದಿಂದ ಎಲ್ಲರಲ್ಲೂ ಕೀಳರಿಮೆ ಬೆಳೆಯುತ್ತಿದೆ' ಎಂದು ದೂರುವ ಬದಲು ನಾವೆಲ್ಲ ಬಹಳಷ್ಟು ಕೆಲಸ ಮಾಡಬೇಕಿದೆ. ಅರಿತವರು ಸಾಹಿತ್ಯದ ಮಾಧ್ಯಮದಿಂದಲೇ ಅರಿಯದೆ ಇರುವವರಿಗೆ ತಿಳಿಸಬಹುದಲ್ಲವೆ? ವಿಶ್ವವಿದ್ಯಾನಿಲಯಗಳಿಂದ ಹೊರಬರುವಾಗ ತಾವು ಕಲಿತದ್ದನ್ನು ಕ್ಯಾಂಪಸ್ಸಿನಲ್ಲಿಯೇ ಕಟ್ಟಿಟ್ಟು ಬರುವ ಬದಲು ಚರ್ಚೆಗಳು, ಬರವಣಿಗೆ, ಕಿರಿಯರಿಗೆ ತಿಳುವಳಿಕೆ ನೀಡುವುದು-ಇವೇ ಮುಂತಾದ ಕೆಲಸಗಳ ಮೂಲಕ ನಮ್ಮತನವನ್ನು ಜೀವಂತವಾಗಿಟ್ಟು

ಕೊಳ್ಳಬಹುದಲ್ಲವೆ? 'ಚಳುವಳಿಗಳಿದ್ದರೆ ಮಾತ್ರ ಸಾಹಿತ್ಯ' ಎನ್ನುವಂತಹ ಪರಿಸ್ಥಿತಿಯನ್ನು ಈವತ್ತು ನಿರ್ಮಾಣ ಮಾಡಿಕೊಂಡಿರುವುದು ನಾವುಗಳೇನೆ. ಕಾನ್‌ಶಿಯಸ್ ಆಗಿ ಒಂದು ಚಳುವಳಿಯನ್ನು ರೂಪುಗೊಳಿಸಲು ಹೊರಡುವುದು ಯಾವುದೋ ಸಮಾರಂಭಕ್ಕೆಂದೇ ವಿಶೇಷವಾಗಿ ಮೇಕಪ್ ಮಾಡಿಕೊಂಡಂತೆ. ನಮ್ಮನ್ನು ನಾವು ಸೀಮಿತಗೊಳಿಸಿಕೊಡಂತೆ. ಮೊದಲು ನಮ್ಮ ಜವಾಬ್ದಾರಿಗಳನ್ನು ಸರಿಯಾಗಿ ನಿಭಾಯಿಸುವತ್ತ ಹೆಜ್ಜೆ ಹಾಕೋಣ. ನಂತರ ಮುಂದಿನ ಮಾತು.



## ಬುದ್ಧಿವಂತರೇ ಮೂಲಭೂತವಾದಿಗಳು

• ಹರಿಯಪ್ಪ ಪೇಜಾವರ

ಹೌದು. ಕೆಲವು ದಿನ ಪತ್ರಿಕೆ, ವಾರ ಪತ್ರಿಕೆಗಳಲ್ಲಿ ಪ್ರಕಟವಾಗುವ ಕಾವ್ಯ, ಕತೆಗಳನ್ನು ನೋಡಿದರೆ ಕನ್ನಡದಲ್ಲಿ ಹೊಸತಾಗಿ ಸಾಹಿತ್ಯ ಸೃಷ್ಟಿಸುವವರಿಗೆ ನಿರಾಶಾದಾಯಕವಾದ ಗೊಂದಲಮಯ ವಾತಾವರಣವಿದೆಯೆನ್ನಿಸುವುದು ನಿಜ. ನಮ್ಮ ತರುಣ ಲೇಖಕರಲ್ಲಿ ಜೀವಂತವಾದ್ದು ಯಾವುದು? ಸತ್ತದ್ದು ಯಾವುದು ಎಂದು ಗುರ್ತಿಸುವ ಇರಾದೆಯೇ, ಆ ಪತ್ರಿಕೆಗಳ ಸಂಪಾದಕರಿಗೆ ಇದ್ದಂತೆ ಅನ್ನಿಸುವುದಿಲ್ಲ. ಈಗಾಗಲೇ ಪ್ರಖ್ಯಾತರಾಗಿರುವವರ ಬರಹಗಳನ್ನು ಅವರು ಪ್ರಖ್ಯಾತರು ಅನ್ನುವ ಒಂದೇ ಕಾರಣಕ್ಕೆ-ಅವರ ಸಂತೆಗೊಂದು ಮೊಳನೆಯ್ದ ಬರಹಗಳನ್ನು ಕೂಡಾ-ತಮ್ಮ ವಿಶೇಷ ಸಂಚಿಕೆ-ಪುರವಣಿಗಳಲ್ಲಿ ಪ್ರಕಟಿಸುತ್ತಾರೆ. ಹೊಸ ಬರಹಗಾರನ ಅದು ಎಷ್ಟೇ ಜೀವಂತವಿರಲಿ ಬರಹವನ್ನು ಪ್ರಕಟಿಸಲಾರರು. ಯಾಕೆಂದರೆ ಆತ ಅನಾಮಧೇಯ! ಆತನಿಗೆ ಗಾಡ್‌ಫಾದರ್ ಇಲ್ಲ! ಆತ 'ಭರವಸೆ ಹುಟ್ಟಿಸುವ ಬರಹಗಾರ' ಎಂದು ಯಾವ ಪತ್ರಿಕೆಯೂ ಈ ಹಿಂದೆ ಘೋಷಿಸಿಲ್ಲ! ನನ್ನದೇ ಅನುಭವವನ್ನು ಹೇಳುವುದಿದ್ದರೆ, ನಾನು ಕಾರ್ಯನಿಮಿತ್ತ ಬೆಂಗಳೂರಿಗೆ ಹೋಗಿದ್ದಾಗ ಪ್ರಖ್ಯಾತ ಲೇಖಕರೊಬ್ಬರ ಪುತ್ರಿ ನಡೆಸುತ್ತಿರುವ ಕಛೇರಿಗೆ ಹೋಗಿ ನನ್ನದೊಂದು ಕವಿತೆಯನ್ನು ಪ್ರಕಟಣೆಯ ಅವಗಾಹನೆಗಾಗಿ ನೀಡಿದೆ. ಆಗ ಬಂದ ಪ್ರಶ್ನೆ: 'ಈ ಹಿಂದೆ ನಮ್ಮ ಪತ್ರಿಕೆಯಲ್ಲಿ ನಿಮ್ಮ ಬರಹ ಪ್ರಕಟವಾಗಿದೆಯೇ?' ಅದಕ್ಕೆ ನನ್ನ ಉತ್ತರ: 'ಇಲ್ಲ' ಎಂದಾಗಿತ್ತು. ಸಹಜವಾಗಿಯೇ ಮುಂದೆ ಆ ಕವಿತೆಯ ಗತಿ ಏನಾಯ್ತು ಎಂದು ಯಾರಾದರೂ ಸುಲಭವಾಗಿ ಊಹಿಸಬಹುದು. ಅಂದರೆ ಇದೊಂದು ರೀತಿಯ ಹುಚ್ಚು ಬಿಡದೆ ಮದುವೆಯಾಗದು, ಮದುವೆಯಾಗದೆ ಹುಚ್ಚು ಬಿಡದು ಎನ್ನುವ ಹಾಗಿನ ಸ್ಥಿತಿ. ಪತ್ರಿಕೆಗಳು ಪ್ರತಿಭಾವಂತ ಬರಹಗಾರನ ಬರಹದಿಂದ ಸಂಪನ್ನವಾಗಬೇಕು; ಅಂಥವನನ್ನು ಗುರುತಿಸಿ ಅವನ ಬರಹಗಳನ್ನು ಪ್ರಕಟಿಸಿ ಅವನನ್ನು

ಬೆಳೆಸಬೇಕು. ಆದರೆ ಈ ನಿಟ್ಟಿನಲ್ಲಿ ಯಾರೂ ಮೊದಲು ಹೆಜ್ಜೆ ಇಡಬೇಕು? ಇದು ಪ್ರಶ್ನೆ. ಈ ಗೊಂದಲ ನಿವಾರಣೆ ಆಗುವವರೆಗೂ ಹೊಸ ಬರಹಗಾರನ ಈ ಬಿಕ್ಕಟ್ಟು ನಿವಾರಣೆ ಆಗದು ಅನ್ನಿಸುತ್ತದೆ.

ನಿಜವಾದ ಬರಹಗಾರರಿಗೆ ಸಲ್ಲಬೇಕಾದ ಎಲ್ಲ ಗೌರವ ಕೊಟ್ಟೂ, ಹೇಳಬಹುದಾದ ಮಾತೆಂದರೆ, ಕೆಲವು ಲೇಖಕರ ಕಳಪೆ ಬರಹಗಳು ಕೂಡಾ ಅತಿ 'ಪ್ರತಿಷ್ಠಿತ' ಅನ್ನಿಸುವ ದಿನಪತ್ರಿಕೆ, ಮಾಸ ಪತ್ರಿಕೆಗಳಲ್ಲಿ ಪ್ರಕಟವಾದಾಗ, ಅವು ಯಾವ ಕಾರಣಕ್ಕೆ ಅಲ್ಲಿ ಪ್ರಕಟವಾಗುತ್ತವೆ ಎಂದು ನಾನು ಆಶ್ಚರ್ಯ ಪಟ್ಟಿದ್ದೇನೆ. ಎಂದೋ ಒಮ್ಮೆ 'ಜೀವಂತ'ವಾಗಿದ್ದು ಈಗ ಸತ್ತು ನಾರುತ್ತಿರುವ ಎಷ್ಟೋ ಹಿರಿಯ ಲೇಖಕರು, ಪ್ರತಿ ವರ್ಷ ಈ ಪತ್ರಿಕೆಗಳ, ವಿಶೇಷ ಸಂಚಿಕೆಗಳಲ್ಲಿ ಹೆಣವಾಗಿ ತೇಲಿ ಬರುವ ಕರುಣಾಜನಕ ದೃಶ್ಯ ಕಂಡಾಗ, ನನಗೆ ಎಷ್ಟೋ ಬಾರಿ 'ಥೆ!' ಅನ್ನಿಸಿದ್ದಿದೆ. ಇಂಥ ಲೇಖಕರು ಈ ಸಂಪಾದಕರ ಒಳ ವೃತ್ತದಲ್ಲಿರುವುದಕ್ಕೇ ಹೀಗಾಗುತ್ತಿದೆಯೇ? ಅಥವಾ ಇವರು ರಾಜಧಾನಿ ಕೇಂದ್ರಿತ ಅಥವಾ ಪ್ರತಿಷ್ಠಿತ ವಿಶ್ವವಿದ್ಯಾಲಯ ಕೇಂದ್ರಿತ ಸ್ಥಳಗಳಲ್ಲಿ ಇರುವುದರಿಂದಲೇ ಇವರಿಗೆ ಒಮ್ಮಿಂದೊಮ್ಮೆಗೆ ಒಮ್ಮೆ ಯಾವುದಾದರೊಂದು ಸಾಹಿತ್ಯಿಕ ಚಳವಳಿ, ಪಥ, ಪಂಥಗಳ ಮುಂಚೂಣಿಯಲ್ಲಿಯೋ ಸೈಡ್‌ವಿಂಗ್‌ಗಳಲ್ಲೋ ನಿಂತಿದ್ದು, ಈಗ ಚಲಾವಣೆಯಲ್ಲಿಲ್ಲದ ಈ ಸದರಿ ಹೀರೋಗಳ ಬಗೆಗಿನ ಭ್ರಮೆ, ಭಯಗಳು ಇವಕ್ಕೆ ಕಾರಣವೇ? ಅಥವಾ ಪ್ರತಿಷ್ಠಿತ ಪತ್ರಿಕೆಯ ಸಂಪಾದಕನೋರ್ವ ಜಾತಿ, ಲಿಂಗ, ಕೋಮುಗಳ ಆಧಾರದಲ್ಲಿ ತನ್ನ ಖಯಾಲಿಗೆ ತಕ್ಕಂತೆ ಬರೆಯುವ ಲೇಖಕ ಲೇಖಕಿಯರ 'ಹೊಸ ಶೋಧ' ನಡೆಸಿದಾಗ 'ಶಂಖದಿಂದ ಬಂದದ್ದು ತೀರ್ಥ' ಎಂಬಂತೆ ಉಳಿದ ಪತ್ರಿಕೆಗಳೂ ಇಂಥ ಲೇಖಕ ಲೇಖಕಿಯರನ್ನು ಅವಿಮರ್ಶಾತ್ಮಕವಾಗಿ ವೈಭವೀಕರಿಸುವದರಿಂದ ಹೀಗಾಗುತ್ತಿದೆಯೆ?

ಇನ್ನು ಹೊಸ ಬರಹಗಾರನ ಬಗೆಗೆ ಹಾಲಿ ವಿಮರ್ಶಕರ ಧೋರಣೆ ಇದಕ್ಕಿಂತ ಭಿನ್ನವೇನಿಲ್ಲ. ಈಗಾಗಲೇ ಚಾಲ್ತಿಯಲ್ಲಿರುವ ಲೇಖಕರ ಬಗೆಗೆ ಪತ್ರಿಕೆಗಳಲ್ಲಿ ಪುಟಗಟ್ಟಲೆ ವಿಮರ್ಶೆ, ಮರುವಿಮರ್ಶೆ ಮಾಡಬಲ್ಲ ಇವರು, ಹೊಸ ಬರಹಗಾರರನ್ನು ಅಷ್ಟೇ 'ಮುಕ್ತ'ವಾಗಿ ಓದಿ ವಿಮರ್ಶೆ ಮಾಡುವುದಕ್ಕೆ ಹಿಂಜರಿಯುತ್ತಾರೆ. ನನ್ನದೇ ಉದಾಹರಣೆ ಕೊಡುವುದಿದ್ದರೆ, ಇಲ್ಲಿಯವರೆಗೆ ಪ್ರಕಟವಾದ ನನ್ನ ಮೂರು ಕೃತಿಗಳ ಬಗೆಗೆ ಈ 'ಪ್ರತಿಷ್ಠಿತ' ಅನ್ನಿಸುವ ಪತ್ರಿಕೆಗಳಲ್ಲಿ ವಿಮರ್ಶೆ-ಬಿಡಿ, ಸಣ್ಣ ಮಟ್ಟಿನ ಒಂದು ಸಮೀಕ್ಷೆ ಕೂಡಾ ಬಂದಿಲ್ಲ. (ಇವುಗಳಲ್ಲಿ ನನ್ನ ಒಂದು ಕೃತಿ ರಾಜ್ಯಮಟ್ಟದ ಪುರಸ್ಕಾರ ಪಡೆದಿದೆ!) ಒಂದು ಪತ್ರಿಕೆಯಂತೂ ಹಠ ತೊಟ್ಟಂತೆ ನನ್ನ ಮೂರು ಕೃತಿಗಳಲ್ಲಿ ಒಂದೇ ಒಂದು ಕೃತಿಯನ್ನು ಕೂಡಾ 'ಸಾದರ ಸ್ವೀಕಾರ' ಮಾಡಿಲ್ಲ! ಇನ್ನು ಪಥ/ಪಂಥಗಳಲ್ಲಿ ಒಡೆದು ಹೋಗಿರುವ ವಿಮರ್ಶಕರು ಹೊಸ ಲೇಖಕರಲ್ಲಿ ಮೂಡಿಸಿರುವ ಗೊಂದಲ ಊಹಾತೀತ. ನನ್ನ ಕೃತಿಗಳ ಬಗ್ಗೆ ಪ್ರಾದೇಶಿಕವಾಗಿ ಬಂದ ಅಷ್ಟಿಷ್ಟು ವಿಮರ್ಶೆಗಳನ್ನು ಗಮನಿಸಿದರೇ ಇದು ಸ್ಪಷ್ಟವಾದೀತು. ೧೯೯೭ರಲ್ಲಿ ನನ್ನದೊಂದು ಕಥಾ ಸಂಕಲನ ಪ್ರಕಟವಾದಾಗ ಅದರಲ್ಲಿನ ಸಮಾಜ ಮುಖಿಯಾದೊಂದು ಕಥೆ, ಅದರೆಲ್ಲ ಕಲಾತ್ಮಕ ವೈಫಲ್ಯದ ಮಧ್ಯೆಯೂ ಕರಾವಳಿಯ ಪತ್ರಿಕಾ ವಿಮರ್ಶಕರೊಬ್ಬರಿಗೆ ಉತ್ತಮ ಕಥೆಯಾಗಿ

ಕಂಡು ಬಂದರೆ, ಆ ಸಂಕಲನದ ಮುನ್ನುಡಿ ಬೆನ್ನುಡಿಕಾರರ ಪ್ರಕಾರ ಅದು ಕಳಪೆ ಕಥೆಯಾಗಿತ್ತು! ಅದೇ ಇವರಿಂದ 'ಬಹುಕಾಲ ಕಾಡಬಲ್ಲ ಕಥೆಗಳು' ಎಂದು ಹೊಗಳಿಸಿಕೊಂಡ ಇತರ ಕಥೆಗಳು, ಮೇಲಿನ ವಿಮರ್ಶಕರಿಗೆ 'ಹಿರಿಯ ಕಥೆಗಾರರ ಸಾಮಾನ್ಯ 'ಅನುಕರಣೆ'ಯಾಗಿ ಕಂಡವು! ಹಿರಿಯ ಬರಹಗಾರರಾದ ತೇಜಸ್ವಿ, ಅನಂತಮೂರ್ತಿ ಮುಂತಾದವರು ಇತರ ಸಾಹಿತಿಗಳಿಂದ ಪ್ರೇರಿತರಾಗಿ ಬರೆದರೆ ಅದು 'ಮರುಸೃಷ್ಟಿ'! ಅದೇ ಹೊಸಬರಹಗಾರರದ್ದು ಅನುಕರಣೆ'! ಇಲ್ಲಿ ಪತ್ರಿಕೆಗಳ ಸಂಪಾದಕ ವರ್ಗಕ್ಕೆ ಹತ್ತಿರವಾಗಿರುವ ಲೇಖಕರ ಹೊಸ ಪುಸ್ತಕಗಳಿಗೆ ವಿಮರ್ಶೆ ಸಮೀಕ್ಷೆಗಳು ಕೂಡಲೇ ಪ್ರಕಟವಾಗುವುದನ್ನು ನಾನು ಗಮನಿಸಿದ್ದೇನೆ. ಉಳಿದವರಿಗೆ ಆ ಭಾಗ್ಯವೂ ಇಲ್ಲ.

ಹೊಸ ಬರಹಗಾರನ ಬಗೆಗೆ ಸಹ ಲೇಖಕರ ಓದುಗರು ಪ್ರತಿಕ್ರಿಯೆಯು ತೀರ ಸಂಕೀರ್ಣ ವಾಗಿರುತ್ತೆ ಎನ್ನುವುದು ನನ್ನೆಣಿಕೆ. ನಮ್ಮ ಸಹ ಲೇಖಕರು ಕೂಡಾ ಹೊಸ ಬರಹಗಾರರು ಅವರ 'ತಾಳ'ಕ್ಕೆ ತಕ್ಕಂತೆ ಬರೆದಾಗ ಅವರನ್ನು ಪ್ರೀತಿ ಮಿಶ್ರಿತ ಅಸೂಯೆಯಿಂದ ಸ್ವಾಗತಿಸುತ್ತಾರೆ. ಆದರೆ ತುಸು ಭಿನ್ನ, (ಅಪರಿಚಿತ) 'ಲಯ'ದಲ್ಲಿ ಬರೆದ ಕೂಡಲೇ, ಅವರಲ್ಲಿರುವ ಸಾಹಿತ್ಯಿಕ 'ಮೂಲಭೂತವಾದ' ಮೈ ಕೊಡವಿಕೊಂಡು ಎದ್ದು ನಿಲ್ಲುತ್ತದೆ. ನೀತಿ-ಅನೀತಿಗಳನ್ನು ಮೀರಿ ಬರೆಯಬೇಕಾದ ಲೇಖಕನನ್ನು 'ನೀತಿ'ಯ ಚೌಕಟ್ಟಿನಲ್ಲಿ ಇಟ್ಟು ಬೆಲೆ ಕಟ್ಟಿ, ಆತನ ಬರಹವನ್ನು 'ಕಳಪೆ' ಅಥವಾ 'ಉತ್ತಮ' ಎಂದು ಲೋಕಕ್ಕೆ ಸಾರಿ ಬಿಡುತ್ತಾರೆ. ಕರಾವಳಿಯ ಕವಿ ಗೋಷ್ಠಿ ಯೊಂದರಲ್ಲಿ ನನ್ನದೊಂದು ಭಿನ್ನ 'ಲಯ'ದ (ದೇವರು ಭಕ್ತನ ನಡುವಿನ ಲೈಂಗಿಕ ವಾಸನೆಯುಳ್ಳ) ಕವಿತೆಯನ್ನು ಓದಿದೆ. ಆಗ ವೇದಿಕೆಯಲ್ಲಿನ ಸಹ ಲೇಖಕರು ಎಬ್ಬಿಸಿದ ಆಟಾಟೋಪ ನನ್ನ ಮನಸ್ಸಿನಲ್ಲಿ ಇನ್ನೂ ನೆಲೆ ನಿಂತಿದೆ! ಅದೇ ರೀತಿ ಅದೇ ಕವಿತೆ ಬೆಂಗಳೂರಿನ 'ಮಾಸಿಕ' ವೊಂದರಲ್ಲಿ ಪ್ರಕಟವಾದಾಗ, ಸ್ತ್ರೀವಾದದ 'ಅತಿಸಾರ'ದಿಂದ ಬಳಲುತ್ತಿರುವ ವಿಮರ್ಶಕಿಯೊಬ್ಬ ಳಿಂದ ಬಂದ ಪ್ರತಿಕ್ರಿಯೆ ಕೂಡಾ ಇದಕ್ಕೆ ಉದಾಹರಣೆ ಎನ್ನಬಹುದು. ಇಂಥ ಸಂದರ್ಭಗಳಲ್ಲೆಲ್ಲ ಧರ್ಮ ಕೋಮಿನ ಹೆಸರಿನಲ್ಲಿ ಗಲಭೆಯೆಬ್ಬಿಸುವ ಪುರೋಹಿತ ರಾಜಕಾರಣಿಗಳಿಗಿಂತ, ಅವರ ಪ್ರಚೋದನೆಯಿಂದ ಹುಚ್ಚೇಳುವ ಜನ ಸಾಮಾನ್ಯ ಮುಗ್ಧರಿಗಿಂತ, ಈ ಸಾಹಿತಿ ವಿಮರ್ಶಕ ಅನ್ನಿಸಿಕೊಂಡ ಬುದ್ಧಿವಂತ ಜನರೇ, ಹೆಚ್ಚು ಮೂಲಭೂತವಾದಿಗಳು, ಹೆಚ್ಚು ಅಪಾಯಕಾರಿಗಳು ಅನ್ನಿಸಿದೆ.

●

## ಸೃಜನಶೀಲತೆಯೇ ಚಳುವಳಿಯ ಸೆಲೆ

● ಶ್ರೀಕಾಂತ ಪಾಟೀಲ

ಮನುಷ್ಯನ ಜ್ಞಾನ ಬೆಳೆದು ಅಕ್ಷರ ಬರವಣಿಗೆಗಳ ಮೂಲಕ ತನ್ನ ವಿಚಾರ ಮಂಡಿಸುತ್ತ, ಎಷ್ಟೋ ಕ್ರಾಂತಿ, ಕಾಲಗಳು ದಾಟುತ್ತ ವೇದ ಉಪನಿಷತ್ತು, ರಾಮಾಯಣ, ಮಹಾಭಾರತ, ಭಗವದ್ಗೀತೆ, ಬೈಬಲ್, ಕುರಾನ್, ವಚನಗಳು, ದಾಸ-ಭಕ್ತಿ, ಅನುಭವ ಪದ್ಯ, ಪುರಾಣಗಳು

ಒಂದರ ನಂತರ ಒಂದು ಆಯಾ ಕಾಲದ ಆಯಾ ಸೃಜನಶೀಲ ವ್ಯಕ್ತಿಗಳ ಮನಸ್ಸಿನ ಭಾವನೆ, ವಿಚಾರ, ಏನೆಲ್ಲ ಸೆಲೆಗಳಲ್ಲಿ ತನ್ನ ಅಳಲು ತಿಳಿಸುತ್ತ, ಮನುಕುಲದ ಬೆಳವಣಿಗೆಗೆ ಮಾರಕವಾದ ಕೆಟ್ಟದ್ದರಿಂದ ಬಿಡಿಸಿಕೊಂಡು ಒಳ್ಳೆಯ ಪ್ರಗತಿಯ ಮಾರ್ಗ ತಿಳಿಸುತ್ತ, ನಿರಂತರ ಕ್ರಮವಾಗಿ ನಡೆದು ಬಂದದ್ದು ಎಲ್ಲರಿಗೂ ಗೊತ್ತು. ಆಯಾ ಕಾಲಕ್ಕೆ ಆಯಾ ವ್ಯಕ್ತಿಗಳ ಮನಸ್ಸು, ಚಿಂತನೆಯ, ಭಾವನೆಗಳ ಕುಲುಮೆಯಲ್ಲಿ ಆಯಾ ಪ್ರಕಾರದ ಭಾಷೆ ನಿರೂಪಣೆ ಬರೆದ ಪ್ರಕಾರಗಳು ಬೇರೆ ಬೇರೆಯಾಗಿ ಇವೆ. ಇಷ್ಟೆಲ್ಲ ಇದ್ದರೂ ಮೂಲಭೂತ ಸಮಸ್ಯೆಗಳಾದ ಧರ್ಮಾಂಧತೆ, ಜಾತಿ ಜಗಳ, ಸ್ತ್ರೀ ಶೋಷಣೆ, ಬಡವ ಶ್ರೀಮಂತ, ಶಿಕ್ಷಣ, ನಿರುದ್ಯೋಗ, ಸಮಸ್ಯೆಗಳು ಯಥಾಸ್ಥಿತಿ ಇದ್ದೇ ಇವೆ. ಆದರೆ, ಸೃಜನಶೀಲ ಮನಸ್ಸು ತಾನುಂಡ ತಳಮಳ ಸಮಾಜದ ಮುಂದೆ ಇಡುತ್ತ, ತನ್ನಷ್ಟಕ್ಕೆ ತಾನೇ ಮುಂದುವರೆಯುವದು ಬಿಟ್ಟಿಲ್ಲ. ಇದು ಚಳವಳಿಯ ಹಣೆಪಟ್ಟಿ ಯಾವ ಸೃಜನಶೀಲ ಮನಸ್ಸು ಬಯಸುವುದಿಲ್ಲ.

ಸಾಹಿತ್ಯದ ಪ್ರಕಾರಗಳು, ಭಾಷೆಯ ಬೆಳವಣಿಗೆ, ಕಾಲ ಸಂದರ್ಭ ಗಮನಿಸಿ ಅಧ್ಯಯನ ದೃಷ್ಟಿಗಾಗಿ ಮಾಡಿದ ಹಳಗನ್ನಡ, ಹೊಸಗನ್ನಡ, ನವೋದಯ, ಪ್ರಗತಿಪರ, ನವ್ಯ, ದಲಿತ ಬಂಡಾಯ ಎಂಬ ವಿಂಗಡಣೆ ಮಾಡಿ, ಇವುಗಳಿಗೆ ಚಳುವಳಿಯ ಹಣೆಪಟ್ಟಿ ಕಟ್ಟುತ್ತ, ಸದ್ಯ ನಮಗೆ ಯಾವ ಚಳವಳಿಬೇಕೆಂಬ ಗೊಂದಲದಲ್ಲಿ ನಿಲ್ಲುವದು ಒಂದು ವಿಪರ್ಯಾಸ.

ಚದುರಂಗದ-'ವೈಶಾಖ', ವಿ ಸ ಖಾಂಡೇಕರ್ ಅವರ-'ಯಯಾತಿ', ಬೇಂದ್ರೆಯವರ ಕಾವ್ಯ (ಜೀವನ ಗಾಥೆಯ ಹಾಡುಗಳಾಗಿ) ಮುಂತಾದವನ್ನು ನೋಡಿದಾಗ, ಇವರು ಯಾವ ಚಳವಳಿ ಇಟ್ಟುಕೊಂಡಿದ್ದರು? ಚಳವಳಿ ಹಣೆಪಟ್ಟಿ ಹಚ್ಚುವಾಗ ಕೆಲ ಲೇಖಕರು ಚಳುವಳಿಯ ಬ್ಯಾನರ್ ಒಳಗೆ ಬರದೆ, ಇಡೀ ಮನುಷ್ಯ ತತ್ವದ ಪ್ರೀತಿಯ ಬಗ್ಗೆ ಚಿಂತಿಸಿ ಬರೆದದ್ದು ಆಗಿರುತ್ತದೆ ಎಂದು ಅನಿಸದೇ ಇರದು.

ನವ್ಯ ಒಂದು ಬರವಣಿಗೆಯ ಶಿಸ್ತು. ಇಂಗ್ಲೀಷ್ ಪ್ರಭಾವ ಅಥವಾ ಪಾಶ್ಚಾತ್ಯ ಪ್ರಭಾವದಿಂದ ಬಂದ ರೀತಿ. ಅದು ಶಿಕ್ಷಣ ಬೆಳೆದ ಮೇಲೆ ಬಂದದ್ದು. ಅದೂ ಒಂದು ಚಳುವಳಿ ಎಂದರೆ ಹೇಗೆ? ಕನ್ನಡ ಸಾಹಿತ್ಯ ಕಂಡಿದ್ದು ಕೆಲವೇ ಕೆಲವು ಚಳುವಳಿಗಳು. ವಚನಾಶಾಸ್ತ್ರ ಹುಟ್ಟುವಾಗಿನ ಚಳುವಳಿ, ಪ್ರಗತಿಪರ ಹಾಗೂ ಬಂಡಾಯ ಚಳುವಳಿ. ಅಧ್ಯಯನ ಶಿಸ್ತಿನ ಹಳಗನ್ನಡ, ಹೊಸಗನ್ನಡ, ನವೋದಯ, ಪ್ರಗತಿಪರ, ನವ್ಯ, ದಲಿತ ಬಂಡಾಯ ಇತ್ಯಾದಿ ಚಳುವಳಿಗಳಲ್ಲಿ ದೊಡ್ಡ ಪ್ರತಿಭೆಗಳು ಬೆಳೆದವೆಂದು ಸಹಜ ಪಟ್ಟಿನೇ ಇದೆ. ಇದೆಲ್ಲ ಉದ್ದೇಶಿತ ವಿಚಾರಗಳನ್ನು ಜನರಿಗೆ ಮುಟ್ಟಿಸುವ ಕ್ರಮದಲ್ಲಿ, ಬರವಣಿಗೆಗೆ ಇನ್ನಷ್ಟು ಪುಷ್ಟಿ ಕೊಡಲು ವಿಚಾರ ಮಂಥನದ ವೇದಿಕೆ ನಿರ್ಮಾಣ, ವಿಮರ್ಶೆ ಮೂಲಕ ಲೇಖಕರಲ್ಲಿ ಇನ್ನಷ್ಟು ಅದೇ ತರದ ಭಾವ-ಮನಸ್ಸು-ವಿಚಾರಗಳು ಏಕಾಗ್ರ ಚಿಂತನ ಮಂಥನದಲ್ಲಿ ಬೆಳೆದು ಬರೆವ ಹೆಜ್ಜೆ ಇಡುತ್ತಲೇ ಇರುತ್ತಾರೆ. ಹೀಗಾಗಿ ದೈತ್ಯ ಪ್ರತಿಭೆ ಎಂದು ಎನಿಸುತ್ತದೆ. ಇಲ್ಲಿ ದೊಡ್ಡ ಪ್ರತಿಭೆಗಳು ಪ್ರಾಮಾಣಿಕವಾಗಿ ಸಾಮಾಜಿಕ ನೋವು ಉಂಡು ಬೆಳೆದಿವೆ.

ಇನ್ನೊಂದು ಅರ್ಥದಲ್ಲಿ ದೊಡ್ಡ ಪ್ರತಿಭೆಗಳೆಂದರೆ ಸಾಹಿತ್ಯದ ಪ್ರಕಾರಗಳಾದ ಕಾದಂಬರಿ,

ಕಥೆ, ಕಾವ್ಯ, ನಾಟಕ, ವಿಮರ್ಶೆ, ವಿಚಾರ ಸಾಹಿತ್ಯ-ಎಲ್ಲದರಲ್ಲಿಯೂ ತಮ್ಮ ಪ್ರತಿಭೆ ಮೆರೆದವರೆಂದು ಇನ್ನೊಂದು ವಿಚಾರ ಇದೆ. ಈಗ ಬರೀ ನಾಟಕ ಪ್ರಕಾರದಿಂದ ಮಾತ್ರ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರಾದ ಗಿರೀಶ ಕಾರ್ನಾಡರು? ದೊಡ್ಡ ಪ್ರತಿಭೆ ಹೌದೋ ಅಲ್ಲವೋ? ಇಂದು ಕಾಡುತ್ತದೆ. ಮಾಸ್ತಿಯವರು ಹೆಚ್ಚಾಗಿ ಕಥೆಗಳಿಂದ ಗುರುತಿಸಿಕೊಂಡರು. ಇನ್ನೊಂದು ಮಾತು. ದೊಡ್ಡ ಪ್ರತಿಭೆಗಳು ಸೃಜನಶೀಲತೆಯ ಸೋಗಿನಲ್ಲಿ ತಮ್ಮ ಧರ್ಮಾಂಧತೆ ಹೇರುತ್ತಾ, ಅಗ್ದೀ ಸಹಜವಾಗಿ ಮಾಡಿಯೂ ಮಾಡಿದಂತೆ ಬೆಣ್ಣೆತಿಂದ ಬೆಕ್ಕಿನಂತೆ ಇರುವ ಪ್ರತಿಭೆಗಳ ಬಗ್ಗೆ ಏನೆನ್ನಬೇಕು?

ಪ್ರತಿಭೆ ಎಂಥದೇ ಇರಲಿ, ಅದು ಸಾಮಾಜಿಕ ಪರವಾಗಿ, ಮನುಷ್ಯತ್ವ ಸಾರುತ್ತಿದ್ದರೆ, ಅದು ಸೃಜನಶೀಲ ಕೃತಿಯಾಗಿ ಬರೆದಾತ ಸೃಜನಶೀಲ ವ್ಯಕ್ತಿ ತನ್ನ ತುಡಿತದ ಮೂಲಕ ಸೃಜನ ಶೀಲತೆಯ ದೊಡ್ಡ ಪ್ರತಿಭೆಯ ಬುನಾದಿ ಆಗುವ ಸಾಧ್ಯತೆ ಹೆಚ್ಚು.

ಇಂದಿನ ಪೀಳಿಗೆಯ ಲೇಖಕರು-ಶ್ರೀರಂಗ, ಬಿ ಎಂ ಶ್ರೀ ಕುವೆಂಪುರಿಂದ ಶಾಂತರಸ, ನೀರಮಾನ್ವಿ, ಕುಂ ವೀ-ವರೆಗೆ, ಎಂ ಕೆ ಇಂದಿರಾ, ತ್ರಿವೇಣಿಯಿಂದ ವೈದೇಹಿ, ಸಾರಾ ಅಬೂಬಕರ್ ವರೆಗೆ ಅವರುಗಳು ಕೊಟ್ಟ ಸಾಹಿತ್ಯ ಸೃಜನಶೀಲ ಸಾಹಿತ್ಯದ ಜೊತೆಗೆ, ಜಿ ಎಚ್ ನಾಯಕ, ಆಮೂರರಿಂದ ಡಿ ಆರ್ ನಾಗರಾಜವರೆಗೆ ಸಂಶೋಧನೆ, ವಿಮರ್ಶೆಗಳ ವಿಚಾರಗಳನ್ನೂ-ಎಲ್ಲವೂ ತಮ್ಮ ಮಾದರಿಯಾಗಿಟ್ಟುಕೊಂಡು, ತಮ್ಮ ಇಂದಿನ ಹೊಸ ಹುಡುಕಾಟದಲ್ಲಿ ಹೆಜ್ಜೆ ಇಡುತ್ತಿದ್ದಾರೆ. ಇವರೆದುರು ನವೋದಯದ ಆದರ್ಶ, ಪ್ರಗತಿಪರರ-ಪ್ರಗತಿಪರ ದೃಷ್ಟಿ, ನವ್ಯರ ಮನುಷ್ಯ ದ್ವಂದ್ವ, ಸಾಂಕೇತಿಕತೆ ಮತ್ತು ಭಾಷಾ ಬಳಕೆ, ಬಂಡಾಯದ ಧ್ವನಿ, ದಲಿತ ಸಾಹಿತ್ಯದ ನಿವೇದನೆ, ಎಲ್ಲವೂ ಇವೆ. ಇವು ಆತ್ಮಸಂಹನದದಲ್ಲಿ ಭಾಷೆ ಬೆಳೆಸುತ್ತ ದಿಟ್ಟ ಹೆಜ್ಜೆ ಇಡುವಂತೆ ಮಾಡಿವೆ.

ಹೀಗಾಗಿ ಕನ್ನಡದಲ್ಲಿ ಹೊಸ ಸಾಹಿತ್ಯ ಸೃಷ್ಟಿಸುವವರಿಗೆ ನಿರಾಶಾದಾಯಕವಾದ, ಗೊಂದಲ ಮಯವಾದ ವಾತಾವರಣ ಇಲ್ಲವೇ ಇಲ್ಲ. ಇವರೆದುರು ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಇರುವದಕಿಂತಲೂ ಹೆಚ್ಚಿನ ಸಾಮಾಜಿಕ ಬಿಕ್ಕಟ್ಟಿನ ಸ್ಥಿತಿ ಇದೆ. ಇವರೆದುರು ಧರ್ಮಾಂಧತೆ ತಾಳ ತಟ್ಟಿ ಕುಣಿಯುತ್ತಿದೆ. ಜಾಗತೀಕರಣದ ಸೋಗಿನಲ್ಲಿ ಮರು ವಸಾಹತೀಕರಣ ತನ್ನ ಜಾಲ ಬೀಸಿದೆ. ದೇಶಿಯತೆಗೆ ದೊಡ್ಡ ಮರು ಸವಾಲಾಗಿ ಇಂದಿನ ಬದುಕು ಅಸ್ಥಿರಗೊಂಡಿದೆ. ಇಂದು ಮನುಷ್ಯ ಏಕಾಂಗಿಯಾಗಿದ್ದಾನೆ. ಸಂಘ ಜೀವನ ವಿಧಾನವೇ ಮರೆಯಾಗಿದೆ. ಸಹೃದಯತೆ ಕಂಡು ಬರುತಿಲ್ಲ. ಈ ಎಲ್ಲವೂ ಸೃಜನಶೀಲ ಹೃದಯ ತನ್ನ ತಂತಿ ಮಿಡಿತದಿಂದ ಸ್ವರ ಎತ್ತಿ ಹಾಡುತ್ತಲೇ ಇದೆ.

ಆದರೆ ಈ ಸ್ವರ ಕೇಳುವ ಕಿವಿಗಳಿಲ್ಲ. ಸ್ವಾತಂತ್ರ್ಯದ ಸಮಯದ ನಂತರ ಮೊದಲೆರಡು ತಲೆಮಾರಿಗೆ ಜೀವನ ತಿಳಿದುಕೊಳ್ಳುವ ಹಂಬಲ, ಮಾನಸಿಕ ಕೀಳರಿಮೆಯಿಂದ ಬಿಡಿಸಿಕೊಳ್ಳುವ ಹುಡುಕಾಟಕ್ಕಾಗಿ ಸಾಹಿತ್ಯ ಒಂದು ಒಳ್ಳೆ ಮಾಧ್ಯಮವಾಗಿತ್ತು. ಈಗ ಸಂಪರ್ಕ ಮಾಧ್ಯಮಗಳ ಹಾವಳಿ, ಶಿಕ್ಷಣದ ಪ್ರಭಾವದ ಜೊತೆಗೆ ಕೆಲವೇ ಜನರಲ್ಲಿ ಅಂದರೆ ಭ್ರಷ್ಟ ರಾಜಕಾರಣಿ,

ಅಧಿಕಾರಿಗಳಲ್ಲಿ, ಉದ್ಯಮಿಗಳಲ್ಲಿ ಕೂಡಿಟ್ಟ ಹಣ ಸುಖದ ಲೋಲುಪತೆಯ ಜೀವನ ಪರಿ, ಎಲ್ಲರಲ್ಲೂ ಅದರಂತೆ ಸುಖದ ದಾರಿ ಕಾಣುವತ್ತ ತುಡಿಯುತ್ತಾ ಜೀವನ ಪರಿವೆಯೇ ಜನ ಕಳೆದುಕೊಂಡಿದ್ದಾರೆ. ಇಂದು ಮನುಷ್ಯರು ಕೀಳರಿಮೆಯಿಂದ ಬಿಡಿಸಿಕೊಂಡರೂ ಸುಖದ ಕನಸುಗಳು ಹೊತ್ತು, ಜೀವನ ನೆಮ್ಮದಿ ಕೆಡಿಸಿಕೊಂಡು ಬಳಲುತಿದ್ದಾರೆ. ಅವರಿಗೆ ಸಾಹಿತ್ಯ ಕೊಡುವ ಜೀವನ ಪ್ರಜ್ಞೆಯ ಪರಿವೆ ಇಲ್ಲ. ಹೀಗಾಗಿ ಸಾಹಿತ್ಯ ಓದುವದಕ್ಕಿಂತ ಪಠ್ಯದ ಓದು, ಸ್ಪರ್ಧಾ ಪರೀಕ್ಷೆಗಳ ಓದೇ ದೊಡ್ಡದಾಗಿ ಬಿಟ್ಟಿದೆ. ಸ್ಪರ್ಧೆ ಜೊತೆಗೆ ನೆಮ್ಮದಿಯ ಹುಡುಕಾಟದ ದಾರಿ ಕಳೆದುಕೊಂಡದ್ದು ಗೊತ್ತಾಗುತ್ತಿಲ್ಲ.

ಸಹೃದಯರ ಓದುಗರ ಕೊರತೆ ಜೊತೆಗೆ ಪುಸ್ತಕ ಪ್ರಕಾಶನದ ಭಾರ ಸಹ ಇಂದಿನ ಸಾಹಿತಿಗಳ ಎದುರಿಗಿದೆ. ಓದುಗರನ್ನು ಬೆಳೆಸಬೇಕಾದರೆ, ಗಂಭೀರ ಸಾಹಿತ್ಯವನ್ನು ಸಹಜ ಸರಳವಾಗಿ ಸಾಮಾನ್ಯರಿಗೂ ಮುಟ್ಟುವಂತೆ, ಓದಿನಲ್ಲಿ ಓದುಗ ಇನ್ನಷ್ಟು ಬೆರೆಯುವಂತೆ, ಬರವಣಿಗೆಯ ಅವಶ್ಯಕತೆ ಇಂದು ಬೇಕಾಗಿದೆ. ನವ್ಯರ ಕಾಲದಿಂದ ಇಲ್ಲಿವರೆಗೆ ಹೆಚ್ಚು ಹೆಚ್ಚು ಗಂಭೀರ, ಸಂಕೀರ್ಣ ಸಾಂಕೇತಿಕ ಎನ್ನುತ ಬರೀ ಉಚ್ಚಮಟ್ಟದ ಓದುಗರಿಗೆ ಖುಷಿಗೊಳಿಸಿದರೆ ಸಾಲದು. ಸಾಹಿತ್ಯ ಇಂದು ಸಾಮಾನ್ಯನಿಗೆ ಮುಟ್ಟಿಸಬೇಕಾಗಿದೆ. ಆದರೆ ಇಂದಿನ ಪೀಳಿಗೆಯ ಬರವಣಿಗೆ ಬಗ್ಗೆ ಅದರಲ್ಲೂ ಕಥೆ ಕಾವ್ಯ ಲಲಿತ ಪ್ರಬಂಧಗಳ ಬಗ್ಗೆ ಪುಸ್ತಕಗಳ ಪರಿಚಯಕ್ಕೆ ಸೀಮಿತವಾಗಿ ಅಥವಾ ಮುನ್ನುಡಿಯಲ್ಲಿ ಅವುಗಳ ಗುಣ ಸ್ವಭಾವ ಹೇಳಿ ಮುಗಿಸುವ ಮನೋಭಾವ ಹೆಚ್ಚಾಗಿದೆ. ಇಂದಿನ ಹೊಸ ಪೀಳಿಗೆಯ ಸಾಮರ್ಥ್ಯದ ಬಗ್ಗೇನೆ ಅವರ ಉತ್ತಮ ಕವಿತೆ ಕಥೆಗಳನ್ನೆ ಒಂದು ಕಡೆ ಚರ್ಚಿಸಿದರೆ, ಅದರ ಪರಿಣಾಮ ಹೇಗೆ ಬರಬಹುದೆಂದು ನೋಡುವ ಮನಸ್ಸು ಇಂದಿನ ವಿಮರ್ಶಕರು ಮಾಡಲೆಂದು ಆಸೆ. ಎಚ್ ನಾಗವೇಣಿಯವರ 'ಗಾಂಧಿ ಬಂದ' ಕಾದಂಬರಿ ಬಗ್ಗೆ ಸಹ ಚರ್ಚೆ ಆಗಲಿ. ಇಂದು ಲಲಿತ ಪ್ರಬಂಧ ಸಾಹಿತ್ಯದ ಅತಿ ಸಾಮಾನ್ಯ ಪ್ರಕಾರವಾಗಿ ದೂರಿಡುತ್ತಿದ್ದಾರೆಂದೂ ಸಹ ಭಾಸವಾಗುತ್ತಿದೆ. ಕಾರಣ ಹೊಸ ಪೀಳಿಗೆಯ ಸಾಮರ್ಥ್ಯ ಒಮ್ಮೆ ಅವರೆದುರು ಇಟ್ಟು ಅವರು ಹೇಗೆ ಮುಂದುವರೆಯಬೇಕೆಂಬ ಅನಿಸಿಕೆ ತಿಳಿಸುವಂತಾದರೂ ಸಾಕು.

ಇಂದಿನ ಹೊಸ ಪೀಳಿಗೆ ಕಥೆಯಿಂದ ಬೆಳೆದಂತೆ-ಇತರ ಪ್ರಕಾರಗಳಲ್ಲಿ ಸಹ ತಮ್ಮ ಪ್ರತಿಭೆ ಬೆಳೆಸುವ ಪ್ರಯತ್ನ ಸಹ ಮಾಡಬೇಕಾಗಿದೆ. ಹೊಸ ಪೀಳಿಗೆ ತನ್ನ ಸಾಮರ್ಥ್ಯ ಅನ್ನುವದಕ್ಕಿಂತ ಅವರ ಸೃಜನಶೀಲ ಹೃದಯ ಹೆಚ್ಚು ಹೆಚ್ಚು ಸಾಮಾಜಿಕ ಕಾಳಜಿಯ, ಮಾನವತತ್ವ ಸಾರುವ ಮನುಷ್ಯ ಮೂಲಭೂತ ಸಮಸ್ಯೆಗಳಿಗೆ ಉತ್ತರ ಹುಡುಕುತ್ತ ತನ್ನ ತಳಮಳ ಸಮಾಜದ ಮುಂದೆ ಇಡುತ್ತ ಇರಲೆಂದು ಆಶಿಸುತ್ತೇನೆ. ಯಾವದೇ ಬ್ಯಾನರ್, ಚಳವಳಿ ಎಂಬ ಗೋಜಿಗೆ ಹೋಗದೆ ನನ್ನ ಸೃಜನಶೀಲ ಕ್ರಿಯೆಯೇ ಚಳವಳಿ-ಬ್ಯಾನರ್‌ಗಳೆಂದು ಮುಂದೆ ದಿಟ್ಟ ಹೆಜ್ಜೆ ಇಡಲೆಂದು ಆಶಿಸುತ್ತೇನೆ.

# ಯಾವ ವಾತಾವರಣವೂ ಸ್ಥಗಿತವಲ್ಲ

• ದು ಸರಸ್ವತಿ

ನಾನು ಬರೆಯಲಿರುವ ಅಭಿಪ್ರಾಯಗಳು ಎಷ್ಟರ ಮಟ್ಟಿಗೆ ನೀವು ಕೇಳಿರುವ ಪ್ರಶ್ನೆಗಳಿಗೆ ಉತ್ತರವಾಗಬಲ್ಲವೊ ತಿಳಿಯೆ. ನನ್ನ ಅಭಿಪ್ರಾಯಗಳು ನನ್ನ ಅನುವಭದ ಚೌಕಟ್ಟಿಗಷ್ಟೇ ಸೀಮಿತವಾದುವು. ನಾನು ಕನ್ನಡ ಸಾಹಿತ್ಯವನ್ನು ಕ್ರಮಬದ್ಧವಾಗಿ ಅಭ್ಯಸಿಸಿದವಳಲ್ಲ. ಇಷ್ಟವಾಗುವಂಥವುದನ್ನು ಓದಿದವಳು. ಕಥೆ ಕಾದಂಬರಿಗಳು ಕವನ ನನಗೆ ಹೆಚ್ಚು ಪ್ರಿಯ. ಕುವೆಂಪು, ಕಾರಂತರಿಂದಲೇ ನನ್ನ ಓದು ಪ್ರಾರಂಭವಾದದ್ದು. ಬರವಣಿಗೆ ನನಗೆ ಅನಿವಾರ್ಯ ನೀಗಿಕೊಳ್ಳೊಕೆ. ನಾನು ಬರೆಯಲೇಬೇಕು. ಬರೆಯೋವಾಗ್ಲೂ ನಾನು ಫಾರಂ ಮತ್ತು ಸ್ಟ್ರಕ್ಚರ್ ಬಗ್ಗೆ ಯೋಚಿಸದೆ ಹೇಳಲೇಬೇಕೆನ್ನಿಸಿದ್ದನ್ನು ಬರೆಯುತ್ತೇನೆ. ಅದು "ಅಡ್ಡವಾದರೆ ಗದ್ಯ, ಉದ್ದವಾದರೆ ಪದ್ಯ". ಬರವಣಿಗೆ ನನಗೊಂದು ಕಾರಿಕೊಂಡು ನಿರಾಳವಾಗುವ ಪ್ರಕ್ರಿಯೆ. ನಿರಾಳವಾಗುವುದರಿಂದ ಹೊಸ ಚೈತನ್ಯ ಪಡೀತೀನಿ. ಮೂಲಭೂತವಾಗಿ ನಾನೊಬ್ಬಳು ಆಕ್ಟಿವಿಸ್ಟ್. ಮಹಿಳಾ ಚಳುವಳಿಯೊಂದಿಗಿನ ಅನುಭವ, ದಲಿತ ಚಳುವಳಿಯೊಂದಿಗಿನ ನನ್ನ ಸಂಪರ್ಕ ಹಾಗೂ ಪ್ರಭಾವ ಮತ್ತು ನಾನೇ ದಲಿತಳಾಗಿರುವುದು, ನನಗೆ ಬದುಕಿನ ಬಗ್ಗೆ ಬೇರೆ ಬೇರೆ ಇನ್‌ಸೈಟ್ ಕೊಟ್ಟಿದೆ.

ಸಾಹಿತ್ಯ ಸೃಷ್ಟಿಸುವವರಿಗೆ ನಿರಾಶಾದಾಯಕ ವಾತಾವರಣವಿದೆಯೆಂದು ನನಗನಿಸುವುದಿಲ್ಲ. ಸದ್ಯದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ವಾತಾವರಣವು ಸಾಹಿತ್ಯ ಸೃಷ್ಟಿಗೆ ತುಂಬಾ ಪೊಟೆನ್‌ಶಿಯಲ್ ಆಗಿದೆ. ಆದರೆ ಸೃಷ್ಟಿಯಾದ ಸಾಹಿತ್ಯವನ್ನು ಓದುವ ಚರ್ಚಿಸುವ ಕೊರತೆಯಿದೆ ಎನಿಸುತ್ತದೆ.

ಚಳುವಳಿಗಳೆಲ್ಲ ಸ್ಥಗಿತಗೊಂಡಿವೆ ಎನ್ನುವುದು ಸರಿಯಲ್ಲವೇನೊ. ಬೇರೆ ಬೇರೆ ರೀತಿಯಲ್ಲಿ ಹಲವಾರು ಚಳುವಳಿಗಳು ಸಕ್ರಿಯವಾಗಿವೆ. ಉದಾಹರಣೆಗೆ, ಅತ್ಯಂತ ಹೀನ ನಗಣ್ಯ ಎಂದು ಎನಿಸಿಕೊಂಡ ವೇಶ್ಯಾವೃತ್ತಿಯಲ್ಲಿನ ಹೆಂಗಸರು, ಹಿಜಡಾಗಳು, ಕಕ್ಕಸು ಬಳಿಯುವ ಜಾಡಮಾಲಿಗಳು ಸಂಘಟಿತರಾಗಿ ತಮ್ಮ ಹಕ್ಕುಗಳಿಗಾಗಿ, ಆತ್ಮಗೌರವಕ್ಕಾಗಿ ಹೋರಾಡುತ್ತಿದ್ದಾರೆ. ಈ ಚಳುವಳಿಗಳು ನಮ್ಮ ಮುಂದೆ ತೆರೆದಿಡುವ ಸತ್ಯಗಳು ನಮ್ಮ ಮೌಲ್ಯಗಳ ಬುಡವನ್ನೆ ಅಲ್ಲಾಡಿಸುವಂಥವು. ಇದು ಯಾವ ಸಾಹಿತಿಗಾದರೂ ಸಾಹಿತ್ಯ ರಚನೆಗೆ ಸವಾಲಾಗಲೂಬಹುದು, ಸ್ಫೂರ್ತಿಯಾಗಲೂಬಹುದು. ಯಾವುದೇ ಚಳುವಳಿಯಾಗಲೀ ಆಯಾ ಕಾಲದ ತುರ್ತಿಗೆ, ಅಗತ್ಯಕ್ಕೆ ನಿರಂತರವಾಗಿ ಸ್ಪಂದಿಸುತ್ತಿದ್ದಾಗ ಮಾತ್ರ ಜೀವಂತವಾಗಬಲ್ಲದು.

ಒಂದು ಹಂತ ದಾಟಿದ ಮೇಲೆ ತನ್ನ ಐಡೆಂಟಿಟಿಯನ್ನು ಮೀರಿ ಹರಡಿಕೊಳ್ಳುತ್ತಾ ಹೋಗಬೇಕು. ದಲಿತ ಚಳುವಳಿಗೆ ವರ್ಗ ಹೋರಾಟ, ದಲಿತರೊಳಗೆ ಇರುವ ಸಾಮಾಜಿಕ ಅಸಮಾನತೆ, ವರ್ಗಹೋರಾಟಕ್ಕೆ ಜಾತಿ ಪ್ರಶ್ನೆ ಮತ್ತು ಇವರೆಡಕ್ಕೂ ಲಿಂಗ ಪ್ರಶ್ನೆಯೂ ಮುಖ್ಯವಾಗಬೇಕು.

ಇವೆಲ್ಲದರ ಆಚೆಯೂ ಸೂಕ್ಷ್ಮವಾಗಿರುವ ಹೊಳಹುಗಳತ್ತ ಗಮನಿಸುವ ಸೂಕ್ಷ್ಮತೆಯೂ ಇರಬೇಕೆಂದೆನಿಸುತ್ತದೆ. ಉದಾಹರಣೆಗೆ ಲಿಂಗದ ಪ್ರಶ್ನೆಯನ್ನು ಹಿಜಡಾಗಳ ಕಾಂಟೆಸ್ಟ್‌ನಲ್ಲಿ ಹೇಗೆ ಅರ್ಥೈಸಿಕೊಳ್ಳಬೇಕೆನ್ನುವುದು. ಸಾಹಿತ್ಯದಲ್ಲೂ ಅಷ್ಟೆ ಜಾತಿ, ವರ್ಗ, ಲಿಂಗ, ಲೈಂಗಿಕತೆ ಯಂತಹವುಗಳು ರಿಫ್ಲೆಕ್ಟ್ ಆಗಬೇಕೆಂದೆನಿಸುತ್ತದೆ. ಇದಕ್ಕೆ ಎಲ್ಲ ಬರಹಗಾರರು ಚಳುವಳಿಯಲ್ಲಿ ಭಾಗಿಯಾಗಲೇಬೇಕೆಂದೇನು ಇಲ್ಲ. ಗ್ರಹಿಸುವ ಸೂಕ್ಷ್ಮತೆ ಮುಖ್ಯವಾಗಬೇಕು. ಈ ಸೂಕ್ಷ್ಮತೆ ನಮ್ಮನ್ನೆ ನಾವು ಸಂಘರ್ಷಕ್ಕೆ ಒಡ್ಡಿಕೊಳ್ಳುವ ಪ್ರಕ್ರಿಯೆಗೂ ಕಾರಣವಾಗಬಲ್ಲದು.

ಇನ್ನು ಸಾಹಿತ್ಯ ಪ್ರಕಾರಗಳ ಕುರಿತು ಹೇಳಬೇಕೆಂದರೆ, ಆ ಬಗ್ಗೆ ನನಗೆ ತಿಳುವಳಿಕೆ ಕಡಿಮೆ ಎನ್ನುವುದು ಸೂಕ್ತವೇನೊ, ತಾತ್ವಿಕ ನಿಲುವಿನ ಬಗ್ಗೆ ಹೇಳಬೇಕೆಂದರೆ, ಯಾವದೊ ಒಂದು ನಿಲವು ಬದುಕಿನ ಎಲ್ಲ ಸತ್ಯಗಳನ್ನು ಹಿಡಿದಿಡಲಾರದೆಂದೆನಿಸುತ್ತದೆ. ಬದುಕು ಬಿಯಾಂಡ್ ದಿ ಲಾಜಿಕ್ ಆ್ಯಂಡ್ ರ್‍ಯಾಶನಾಲಿಟಿ. ಆದ್ದರಿಂದ ತಾತ್ವಿಕ ನಿಲುವುಗಳು ಅಷ್ಟೆ ವಿಶಾಲವಾಗಿರ ಬೇಕೆನಿಸುತ್ತದೆ. ಅಂತಹ ನಿಲುವೊಂದು ಸಾಧ್ಯವಾಗುವುದಾದರೆ ಬರವಣಿಗೆಯೇ ನಿರರ್ಥಕವೆನಿಸಿ ಬಿಡಬಹುದೇನೊ?

ಮಹಾಕಾವ್ಯಗಳಂತಹ ಬದುಕುಗಳನ್ನು ಕಂಡಾಗ, ಕಾಗದ ಪೆನ್ನು ಕೆಳಗಿಟ್ಟು, ಶರಣೆಂದು ಬಿಡಬೇಕೆಂದು ಎಷ್ಟೋ ಸಾರಿ ಅನ್ನಿಸಿದೆ. ಬರವಣಿಗೆ ನಮ್ಮನ್ನೇ ಸಂಘರ್ಷಕ್ಕೊಡ್ಡಿ ಯಾವುದೋ ಒಂದು ಇನ್‌ಸೈಟ್ ಕೊಡಬಲ್ಲವಾದರೆ, ಯಾವ ವಾತಾವರಣವಾದರೂ ಬರಹಗಾರರಿಗೆ ಸ್ಥಗಿತ ವೆನಿಸಲಾರದೇನೊ?



## ಕವಿತೆ ಕಲಾಕೃತಿಯಾಗಬೇಕು

•ರಾಧಾಕೃಷ್ಣ ಬೆಳ್ಳೂರು

ಭಾಷೆಯ ಮೂಲಕ ಸಂವಹನವಾಗುವ ಪ್ರತಿಯೊಂದು ವಿವರಗಳಿಗೂ ಒಂದು ವಾಚ್ಯಾರ್ಥ ಇದ್ದೇ ಇರುತ್ತದೆ. ಕಾವ್ಯವು ಇದರಿಂದ ಹೊರತಾದುದಲ್ಲ. ನವ್ಯದ ಆಗಮನದೊಂದಿಗೆ ಕಾವ್ಯ ಪಠ್ಯದ ವಾಚ್ಯಾರ್ಥಗ್ರಹಿಕೆಯಲ್ಲಿ ಹಲವು ತೊಡಕುಗಳು ಎದುರಾದವು. ಕ್ಲಿಷ್ಟವಾದ ಪ್ರತಿಮೆ, ರೂಪಕ ಹಾಗೂ ಇವುಗಳ ಆಳದಲ್ಲೆಲ್ಲೋ ಅಡಗಿದೆಯೆಂದು ಭಾವಿಸಲಾದ ಅಪರಿಚಿತ ಚಿಂತನೆ. ಇವೆಲ್ಲ ಜನರಿಗೆ ಕಾವ್ಯದ ಬಗ್ಗೆ ಭಯ ಹುಟ್ಟಿಸಿದವು. ಎಷ್ಟು ಓದಿದರೂ ಮೊದಲನೆಯ ಅರ್ಥವೇ ಕೈಗೆ ಸಿಗದೆ ಬಿಳನೆಲೆಗಳನ್ನು ಪ್ರವೇಶಿಸುವುದು ಅಸಾಧ್ಯವಾಯಿತು. ಕಾವ್ಯ ಏನನ್ನು ಹೇಳಿದರೂ ಅದು ಸಾರ್ಥಕವಾಗುವುದು. ಸಂವಹನದ ಮೂಲಕ ಸಂವಹನವೇ ಆಗದಿದ್ದಾಗ ಅದು ಏನು ಹೇಳಿದರೂ ನಿರರ್ಥಕ. ವಿಮರ್ಶೆಯಲ್ಲೇ ಕಾವ್ಯವನ್ನು ಕಂಡುಕೊಳ್ಳುವ ಸ್ಥಿತಿ, ಜನರಿಂದ ಅದನ್ನು ದೂರಸರಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಎಂ ಎ ವಿದ್ಯಾರ್ಥಿಗಳೂ ಕೂಡ ಕಾವ್ಯ ಪಠ್ಯವನ್ನು ಓದದೆ, ಕೇವಲ ವಿಮರ್ಶೆಗಳ ಮೂಲಕವೇ ಪರೀಕ್ಷೆಗೆ ಸಿದ್ಧರಾಗುವ ದುರಂತ,

ಮತ್ತೆ ಕಾವ್ಯ ಸರಳತೆಯತ್ತ ಹೊರಳಬೇಕಾದ ಅನಿವಾರ್ಯತೆಯನ್ನು ಒತ್ತಿಹೇಳುತ್ತದೆ.

ಕಾವ್ಯ ಸರಳವಾಗಿರಬೇಕು. ಮೊದಲ ಓದಿಗೆ ಅದರ ವಾಚ್ಯಾರ್ಥ ಅನಾವರಣಗೊಳ್ಳಬೇಕು. ಈವತ್ತಿನ ಸಾಮಾಜಿಕ ಸ್ಥಿತಿ ಒಬ್ಬ ಓದುಗನನ್ನು ಹಲವು ಓದುಗಳಿಗೆ ಅಥವಾ ಅರ್ಥೈಸುವಿಕೆಯ ಶ್ರಮಕ್ಕೆ ಒಡ್ಡಲು ಅನುಕೂಲಕರವಾಗಿಲ್ಲ. ಮೊದಲ ಓದು ಅಪ್ಯಾಯಮಾನವೂ ಆಕರ್ಷಣೀಯವೂ ಸಾರ್ಥಕವೂ ಆಗಿದ್ದರೆ ಮಾತ್ರ, ಒಬ್ಬ ಆಸಕ್ತ ಓದುಗ ಮುಂದಿನ ಓದಿಗೆ ಅಥವಾ ಅರ್ಥೈಸುವಿಕೆಗೆ ಸಿದ್ಧನಾಗಬಲ್ಲ. ಪ್ರತಿಯೊಂದನ್ನೂ ಪ್ರಯೋಜನದ ದೃಷ್ಟಿಯಿಂದಲೇ ನೋಡುವುದು ಮನುಷ್ಯನ ಸಹಜ ಸ್ವಭಾವ. ಕಾವ್ಯದ ಓದು ಏನನ್ನೂ ಕೊಡದೆ ಇದ್ದಾಗ ಅದನ್ನು ನಿರಾಕರಿಸುವುದು ಅಸಹಜವೆಂದೋ ಅಭಿರುಚಿಯ ಕೊರತೆಯೆಂದೋ ಹೇಳುವಂತಿಲ್ಲ.

ಒಮ್ಮೆ ಧನಂಜಯ ಕುಂಬ್ಳೆ ದೂರವಾಣಿ ಸಂದರ್ಶನದಲ್ಲಿ ಹೇಳಿದ್ದು ಹೀಗೆ: 'ಈವತ್ತು ಮಾಹಿತಿಯನ್ನು ವೈಚಾರಿಕತೆಯನ್ನೂ ನೀಡುವುದಕ್ಕೆ ಬೇಕಾದಷ್ಟು ಮಾಧ್ಯಮಗಳಿವೆ. ಆದರೆ ಮಾನಸಿಕ ಉಲ್ಲಾಸವನ್ನೂ ಚಿಂತನೆಯನ್ನೂ ಜತೆಯಾಗಿ ಕೊಡುವ ಮಾಧ್ಯಮಗಳು ವಿರಳ. ಕಾವ್ಯ ಈ ಕೆಲಸಕ್ಕೆ ಅಗತ್ಯವಾದ ಮಾಧ್ಯಮ': ಅಗತ್ಯ ಮಾತ್ರವಲ್ಲ, ಮುಂದಿನ ಕಾವ್ಯ ಬುದ್ಧಿಯ ಜತೆಗೆ ಮನಸ್ಸನ್ನೂ ಪ್ರಚೋದಿಸದೆ ಹೋದರೆ ಅದಕ್ಕೆ ಅಸ್ತಿತ್ವವೇ ಇಲ್ಲದ ಸ್ಥಿತಿ ಎದುರಾಗುವುದು ನಿಸ್ಸಂಶಯ.

ನಮ್ಮ ಆಧುನಿಕ ಕಾವ್ಯವು ಭಾಷಿಕ ಸಾಧ್ಯತೆಗಳನ್ನು ಕಡೆಗಣಿಸುತ್ತ ಬಂದಿದೆ. ಅಡಿಗರಲ್ಲಿಲ್ಲದ ಈ ಕೊರತೆ ಅವರ ದಾರಿ ಹಿಡಿದ ಹಲವರಲ್ಲಿ ನಿಚ್ಚಳವಾಗಿದೆ. ಭಾಷಾ ಪರಿಕರಗಳಾದ ಛಂದಸ್ಸು, ಲಯ, ಗತಿ, ಮಾಧುರ್ಯ, ಶಬ್ದ ಸಂಯೋಜನೆಗಳು ಅರ್ಥ ಮತ್ತು ಭಾವಕ್ಕೆ ಪೂರಕವಾಗಿ ದುಡಿಯಬಲ್ಲವೆನ್ನುವ ಸತ್ಯವನ್ನು ನಾವು 'ಹೊಸತನ'ದ ಹೆಸರಿನಲ್ಲಿ ಬಲಿಕೊಟ್ಟಿದ್ದೇವೆ. ಛಂದೋಬದ್ಧ ರಚನೆಗಳು ಕವಿತೆಗಳಲ್ಲ ಎನ್ನುವ ಭ್ರಮೆ ನಮ್ಮ ವಿಮರ್ಶಕರಿಂದ ಹಿಡಿದು ಪತ್ರಿಕಾ ಸಂಪಾದಕರ ತನಕ ವ್ಯಾಪಿಸಿಬಿಟ್ಟಿದೆ. ಭಾಷೆಯನ್ನು ಇನ್ನಷ್ಟು ಶಕ್ತಿಶಾಲಿಯಾಗಿ ದುಡಿಸುವ, ಎಲ್ಲ ಭಾಷಿಕ ಪರಿಕರಗಳನ್ನೂ ಅಭಿವ್ಯಕ್ತಿಗಾಗಿ ಬಳಸುವ ಪ್ರಯತ್ನಗಳು ಕನ್ನಡ ಕಾವ್ಯದಲ್ಲಿ ನಡೆಯಬೇಕಾಗಿವೆ.

ಇನ್ನೊಂದು ಎಕ್ಲೆಕ್ಟಿಸಂ. ಎಲ್ಲೆಲ್ಲ ಕಾವ್ಯಾಭಿವ್ಯಕ್ತಿಗೆ ಪೂರಕವಾಗಬಲ್ಲ ಅಂಶಗಳಿವೆಯೋ ಅವನ್ನೆಲ್ಲ ಸ್ವೀಕರಿಸಿ ಕವಿತೆಯನ್ನು ಒಂದು ಕಲಾಕೃತಿಯಾಗಿ ನಿರ್ಮಿಸಬಲ್ಲ ಅಂಶ ಇದು. ಇದನ್ನು ಕೇವಲ ಒಬ್ಬ ಕವಿಯ ಮೇಲೆ ಇನ್ನೊಬ್ಬ ಕವಿ ಬೀರಿದ ಪ್ರಭಾವ ಎಂದೋ, ಸ್ವಂತಿಕೆ ಇಲ್ಲದ ಸ್ಥಿತಿ ಎಂದೋ ತಿಳಿಯಬೇಕಾಗಿಲ್ಲ. 'ರನ್ನನಿಗೆ ಸ್ವಂತಿಕೆ ಇಲ್ಲದ ಕಾರಣ ಆತ ಪಂಪನಂತೆ ಚಂಪು ಕೃತಿ ಬರೆದ' ಎಂದರೆ, ಅಂತಹ ಹೇಳಿಕೆ ಅಪಹಾಸ್ಯಕ್ಕೆ ಕಾರಣವಾಗುತ್ತದೆ. ಅನ್ಯರೊರೆದುದನ್ನೂ ಬರೆದುದನ್ನೂ ಬರೆಯಬಾರದು. ಆದರೆ ಅನ್ಯರೊರೆದಂತೆ ಬರೆದಂತೆ ಬರೆಯುವುದು ತಪ್ಪಲ್ಲ. ಅಭಿವ್ಯಕ್ತಿ ರೂಪಗಳನ್ನು ಹಳೆಯ ಕವಿಗಳಿಂದ ಸ್ವೀಕರಿಸಿ, ಅಗತ್ಯ ಕಂಡರೆ ಪರಿಷ್ಕರಿಸಿ ಬಳಸುವುದು ಉಪಯುಕ್ತ. ಕಾವ್ಯಕ್ಕೆ ವ್ಯಕ್ತಿ ಮುದ್ರೆ ಒದಗುವುದು ಅದರ ವೈಚಾರಿಕ ನಿಲುವು ಹಾಗೂ ಅಭಿವ್ಯಕ್ತಿಯ ಸಾಮರ್ಥ್ಯದಿಂದಲೇ ಹೊರತು ಬಾಹ್ಯ ರೂಪದಿಂದಲ್ಲ. ಛಂದೋ

ಬಂಧಗಳು ಕಾವ್ಯಕ್ಕೆ ಮಾರಕವೆಂಬ ಯಾರದೋ ನಿಲುವಿಗೆ ನೇಣು ಹಾಕುವುದರಲ್ಲಿ ಅರ್ಥವಿಲ್ಲ. ಬದಲಾಗಿ ಈಗಾಗಲೇ ಬಳಕೆಯಾದ ಛಂದ: ಪ್ರಭೇದಗಳಲ್ಲಿ ಹೊಸ ಕುಸುರಿ ಕೆತ್ತಿ, ಅದನ್ನು ಹೊಸ ಕಾವ್ಯಕ್ಕೆ ಪೂರಕವಾಗಿ ದುಡಿಸುವುದು ಇಂದಿನ ಹಲವು ಅಗತ್ಯಗಳಲ್ಲಿ ಒಂದು. ಅಂಥ ನಿರಾಕರಣೆ ಅನುಕರಣೆಗಿಂತ ಹೆಚ್ಚು ಅಪಾಯಕಾರಿ.

ಕಾಲ ಹಾಗೂ ಸಾಮಾಜಿಕ ಅಗತ್ಯಗಳಿಗೆ ಅನುಸಾರವಾಗಿ ಮಹಾಪುರುಷರು ಹುಟ್ಟುತ್ತಾರೆ. ಅವರಿಂದಾಗಿ ಹೊಸ ಚಿಂತನೆಗಳೂ ಆಂದೋಲನಗಳೂ ರೂಪುಗೊಳ್ಳುತ್ತವೆ. ಪ್ರತಿ ಎರಡು ಆಂದೋಲನಗಳ ಮಧ್ಯೆ ಒಂದು ಸ್ಥಗಿತ ಕಾಲಾವಧಿ ಇರುತ್ತದೆ. ಈಗ ನಾವು ಅಂತಹ ಸ್ಥಗಿತ ಸ್ಥಿತಿಯಲ್ಲಿದ್ದೇವೆ. ಈಗ ನಡೆಯಬೇಕಾಗಿರುವುದು ಹೊಸದರ ಹುಡುಕಾಟವಲ್ಲ, ಹಳೆಯದರ ಸಂಶ್ಲೇಷಣೆ.

ಇಂದಿನ ಓದುಗನಿಗೆ ವಿಮರ್ಶೆಯ ಬಗ್ಗೆ ಭರವಸೆಯಿಲ್ಲ. ಆದ್ದರಿಂದ ಒಬ್ಬ ಕವಿಯಾಗಿ ನಾನು ವಿಮರ್ಶೆಯನ್ನು ಸದ್ಯದ ಅಗತ್ಯವೆಂದು ಭಾವಿಸುವುದಿಲ್ಲ. ಬರಹ ಹೇಗಿದೆ ಎನ್ನುವ ವಿಮರ್ಶೆಗಿಂತ, ಹೇಗೆ ಬರೆಯಬೇಕಾಗಿದೆ ಎಂಬ ಮಾರ್ಗಸೂಚಿ ಮೀಮಾಂಸೆ ನಮಗೆ ಬೇಕಾಗಿದೆ. ಅರ್ನಾಲ್ಡ್ ಹೇಳುವಂತೆ ಕವಿಯ ಸೃಜನಕ್ರಿಯೆಗೆ ಬೇಕಾದ ಪರಿಕರಗಳನ್ನು ಒದಗಿಸಿ ದಾರಿಗೆ ದೀಪ ಬೆಳಗುವ ಕಡೆಗೆ ವಿಮರ್ಶಕರು ವರ್ಣಗಳ ಆಧಾರದಲ್ಲಿ ಅಥವಾ ತಾತ್ವಿಕ ನೆಲೆಯಲ್ಲಿ ಗುಂಪುಗೂಡುವ ಬದಲು, ಎಲ್ಲ ಗೋಡೆಗಳನ್ನೂ ಮುರಿದು ಬಯಲಿಗೆ ಬರಬೇಕು. ಎಲ್ಲ ಹೂವುಗಳಿಂದಲೂ ಮಕರಂದ ಹೀರಿ ತನ್ನದೇ ಜೇನು ತಯಾರಿಸುವ ದುಂಬಿಯ ಚಟುವಟಿಕೆಯಲ್ಲಿ ಸ್ವಂತಿಕೆ ಇದೆಯೇ? ಅಥವಾ ಇಲ್ಲವೇ?

## ಗೇಯಗೀತೆಗಳ ತಾತ್ಸಾರ ಒಳ್ಳೆಯದಲ್ಲ

• ಎಲ್ ಜಿ ಮೀರಾ

ಯುವಲೇಖಕರ ಅನಿಸಿಕೆ, ಅನುಭವಗಳನ್ನು ಗಮನಿಸುವ 'ಕನ್ನಡ ಅಧ್ಯಯನ'ದ ಈ ಪ್ರಯತ್ನ ಸ್ವಾಗತಾರ್ಹವಾದುದು. ನಿಮ್ಮ ಪತ್ರ ಓದಿದಾಗಿನಿಂದ, ಸಾಕಷ್ಟು ದಿನಗಳಿಂದ ನನ್ನನ್ನು ಕಾಡುತ್ತಿದ್ದ ವಿಷಯವೊಂದಕ್ಕೆ ಮತ್ತಷ್ಟು ಗಮನ ಕೊಟ್ಟೆ. 'ನಾನೇಕೆ ಬರೆಯುತ್ತೇನೆ? ನಾನು ಬರೆದದ್ದನ್ನು ಓದುವವರು ಯಾರು? ಹೀಗೆ ನಾನು ಬರೆದದ್ದರಿಂದ ಸಮಾಜಕ್ಕೆ ಏನೂ ಉಪಯೋಗ? .....' ಈ ಸಂಬಂಧದ ವಿಚಾರಗಳು ಬರೆಯುವವರೆಲ್ಲವನ್ನೂ ಕಾಡುವಂತೆ ನನ್ನನ್ನೂ ಕಾಡುತ್ತವೆ.

ಏಳನೇ ತರಗತಿಯಲ್ಲಿದ್ದಾಗಲೇ ಕನ್ನಡದಲ್ಲಿ 'ಜಾಣೆ' ಅನ್ನಿಸಿಕೊಂಡಿದ್ದ ನಾನು ಒಂದಿಷ್ಟು ಪ್ರಾಸಬದ್ಧ ಕವನಗಳನ್ನು ಬರೆಯುತ್ತಿದ್ದೆ. ನನ್ನ ಕನ್ನಡ ಟೀಚರುಗಳು ನೀನು ಹೀಗೆ

ಬರೆಯುತ್ತಿರು, ಚೆನ್ನಾಗಿ ಬರೆಯುತ್ತೀಯ ಎಂದು ಪ್ರೋತ್ಸಾಹಿಸುತ್ತಿದ್ದರು. ಚಿಕ್ಕವಳಿದ್ದಾಗ ಪ್ರಕೃತಿಯ ಬಗ್ಗೆ ಬರೆಯುತ್ತಿದ್ದವಳು, ಹದಿವಯಸ್ಸಿನವಳಾಗುತ್ತಿದ್ದಂತೆ ಸ್ತ್ರೀ ಸಮಸ್ಯೆಗಳನ್ನು ಕುರಿತು ಬರೆಯುತ್ತಿದ್ದೆ. ಗಂಡಸರು ಹೆಂಗಸರ ನಡುವೆ ಸಮಾಜ ಮಾಡುವ ಭೇದ, ನನ್ನನ್ನು ಆಗಲೂ ತುಂಬ ಕಾಡುವ ವಿಷಯವಾಗಿತ್ತು. ಈಗಲೂ ಕಾಡುತ್ತದೆ. 'ಲೌಕಿಕ' ಕಾರಣಗಳಿಗಾಗಿ ಸೈನ್ಸ್ ವಿಷಯಗಳನ್ನು ಓದಲು ಬಲವಂತಿಸಲ್ಪಟ್ಟು, ಅಂತೂ ಬಿ ಎಸ್ಸಿ ಮಾಡಿದೆ. ಈ ಹಂತದಲ್ಲಿ ಯಾರೋ ಪುಣ್ಯಾತ್ಮರು ನೀನು ಕನ್ನಡ ಎಂ ಎ ಮಾಡಲು ಲಾಯಕ್ಕಾದವಳು ಎಂದು ಹೇಳಿದ್ದರಿಂದ, ಕನ್ನಡ ಎಂ ಎ ಓದಿದೆ. ಹಾಗೇ ಮುಂದೆ, ಡಿ ಆರ್ ನಾಗರಾಜರ ಚಿಂತನೆಗಳಿಂದ ಗಾಢವಾಗಿ ಪ್ರಭಾವಿತಗಳಾಗಿ ಪಿ.ಎಚ್‌ಡಿ. ಓದಿಗೆ ಸ್ತ್ರೀ ದೃಷ್ಟಿಯ ವಿಮರ್ಶೆಯನ್ನು ಆರಿಸಿಕೊಂಡೆ. ಸ್ತ್ರೀವಾದದ ಬಗ್ಗೆ ಒಂದಿಷ್ಟು ತಿಳಿದುಕೊಂಡೆ.....ಇರಲಿ ಬಿಡಿ. ಈ ಲೌಕಿಕ ಗಾಣಸುತ್ತುವ ಕಥೆ ಬೇಗ ಮುಗಿಯುವುದಿಲ್ಲ.

ಅಸಲು ವಿಷಯಕ್ಕೆ ಬರುತ್ತೇನೆ. ಪ್ರಾಸದ ಮೇಲೆ, ಅರ್ಥದ ಮೇಲೆ, ಹಾಡು-ಕುಣಿತಗಳ ಮೇಲೆ ಮೋಹಗೊಂಡ ಆ ೧೨-೧೩ ವಯಸ್ಸಿನ ನಾನು ನಿಜಕ್ಕೂ ಬಯಸುತ್ತಿ ದ್ದುದೇನು? ಸಾಂಪ್ರದಾಯಿಕ ಓದಿನ ಜತೆಜತೆಗೇ ಕರ್ನಾಟಕ ಸಂಗೀತ ಮತ್ತು ಭರತ ನಾಟ್ಯಗಳಲ್ಲೂ ಪರಿಶ್ರಮ ಮಾಡಿರುವ ಒಂದು ರೀತಿಯಲ್ಲಿ 'ಪರ' ವಶಳಾಗಿರುವ ಈ ಜೀವಕ್ಕೆ ಬರಹದಿಂದ ನಿಜವಾಗಿಯೂ ಸಿಕ್ಕಿದ್ದೇನು? ಇದು ನಾನು ಕೇಳಿಕೊಳ್ಳಬೇಕಾದ ಪ್ರಶ್ನೆ. ಎದೆಯೊಳಗಿನ ಮಾತು ಹೇಳಬೇಕೆಂದರೆ, ನನಗೆ ಈಗಲೂ ಆಗಲೂ ನನ್ನಾಳದ ಅನುಭವ-ಅನಿಸಿಕೆಗಳನ್ನು ಕಥೆ ಅಥವಾ ಕವನಗಳ ಸೃಜನರೂಪದಲ್ಲಿ ಹೇಳಿಕೊಳ್ಳುವುದೇ ಇಷ್ಟ. ಆದರೂ ನಾನು ನನ್ನ ಬರಹ ಜೀವನದ ಕಳೆದ ೧೦-೧೨ ವರ್ಷಗಳಲ್ಲಿ ಅನುವಾದ, ವಿಮರ್ಶೆ ಬರೆದಿರುವುದೆ ಹೆಚ್ಚು. ಇದೇಕೆ ಹೀಗೆ? ಹೀಗೆ ಬರೆಯುವಂತೆ ನನ್ನನ್ನು ಪ್ರೇರೇಪಿಸಿದ ಶಕ್ತಿಗಳು ಯಾವುವು?

ನನ್ನ ವೈಯಕ್ತಿಕ ಆಯ್ಕೆ-ಆದ್ಯತೆಗಳನ್ನು ಬಿಟ್ಟು ಮಾತಾಡುವುದಾದರೆ ಬರಹ ಕ್ಷೇತ್ರದ ಗಟ್ಟಿ ಚಿಲಕದ ಬಾಗಿಲು ನನಗೆ ತೆರೆದದ್ದು ಅನುವಾದದಿಂದಾಗಿ. ಡಿ ಆರ್ ನಾಗರಾಜ್ ಪ್ರಾರಂಭಿಸಿದ ಅಕ್ಷರ ಚಿಂತನೆ ಮಾಲೆಯ 'ತಮಿಳು ಕಾವ್ಯ ಮೀಮಾಂಸೆ' ಪುಸ್ತಕವನ್ನು ನಾನು ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದಿಸುವುದರೊಂದಿಗೆ ನನ್ನ 'ಅಧಿಕೃತ' ಬರಹ ಜೀವನ ಪ್ರಾರಂಭ ಆಯಿತು ಅನ್ನಬಹುದು. ಆ ಕೃತಿಯನ್ನು ಓದಿ ಎಷ್ಟು ಜನ ಪ್ರಯೋಜನ ಪಡೆದಿದ್ದಾರೆ ಎಂಬ ಲೆಕ್ಕ ನನ್ನಲ್ಲಿಲ್ಲ. ಅದು ತುಂಬಾ 'ಅಕೆಡಮಿಕ್' ಹಿನ್ನೆಲೆಯ ಪುಸ್ತಕವಾದದ್ದರಿಂದ ಅವರ ಓದುಗರ ಸಂಖ್ಯೆ ಸೀಮಿತವಾದದ್ದು ಎಂದು ನನ್ನ ಅನಿಸಿಕೆ, ಇರಲಿ. ಮುಂದೆ ಇದೇ ಚಿಂತನಮಾಲೆಯಲ್ಲಿ 'ಮಾನುಷಿಯ ಮಾತು' ಬಂತು. ಇದರಲ್ಲಿ ಲೇಖಕಿ ಮಧುಕೇಶ್ವರ್ ಅವರ ಖಚಿತ ನಿಲವುಗಳು, ಮಾನವಪರತೆ, ದಿಟ್ಟತನ, ಪತ್ರಿಕೆ ನಡೆಸಿಕೊಂಡು ಹೋಗುವ ಛಾತಿ, ಶಕ್ತಿ ನನಗೆ ತುಂಬ ಹಿಡಿಸಿತು. ಜತೆಗೆ ಅನುವಾದ ಸರಳವಾಗಿರಬೇಕು, ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿರಬೇಕು ಎಂಬ ನನ್ನ ಗುರು ಡಿ ಆರ್ ನಾಗರಾಜರ ಮಾತು ನನ್ನನ್ನು ಆಳವಾಗಿ ತಟ್ಟಿತು. ಅನುವಾದವಾಗಲಿ ಇತರ ಬರಹವಾಗಲಿ ಓದುವವರಿಗೆ ತಲುಪಬೇಕು.

ಅರ್ಥವಾಗದಂತೆ ಬರೆಯುವುದು ದೊಡ್ಡಸ್ತಿಕೆ ಅಲ್ಲ ಎಂಬ ನಿಲುವು ನನ್ನದು. ನನ್ನ ಬರಹದಲ್ಲೆಲ್ಲಾ ಈ ಅಂಶವನ್ನು ನೆನಪಿಟ್ಟುಕೊಂಡೇ ಬರೆದಿದ್ದೇನೆ. ಎಷ್ಟು ಯಶಸ್ವಿಯಾಗಿದ್ದೇನೋ ಕಾಣೆ.

ಈ ಹಂತದಲ್ಲಿ ಹೀಗೇ ಕೇವಲ ಅನುವಾದ ಮಾಡುತ್ತಿದ್ದರೆ ನನ್ನ ಸಂಶೋಧನೆಯ ಗತಿ ಏನು ಎಂಬ ಚಿಂತೆ ನನಗೆ ಶುರುವಾಯಿತು. ಡಿ ಆರ್ ಎನ್ ಹತ್ತಿರ ಇದರ ಬಗ್ಗೆ ಸೂಚ್ಯವಾಗಿ ಮಾತೂ ಆಡಿದ್ದೆ. ಆದರೂ ಮುಂದಿನ ಪುಸ್ತಕ 'ಬಹುಮುಖಿ'ವನ್ನು ಅನುವಾದಿಸುವ ಅನಿವಾರ್ಯತೆ ಬಂತು. ಅದನ್ನು ಶುರುಮಾಡಿದಾಗ ಇದ್ದ ಡಿ ಆರ್ ನಾಗರಾಜ್, ಪೂರ್ಣಗೊಳಿಸುವಷ್ಟರಲ್ಲಿ ಈ ಲೋಕವನ್ನೇ ಬಿಟ್ಟು ಹೋಗಿದ್ದರು. ದುಃಖದ ಗಳಿಗೆ ಅದು! ಇದೇ ಸಮಯದಲ್ಲಿ 'ಬಹುಮುಖಿ'ಕ್ಕೆ ಸಾಹಿತ್ಯ ಅಕಾಡೆಮಿ ಬಹುಮಾನ ಬಂತು.

ಹೀಗೆ ಮೂಲತಃ ಕಾವ್ಯ ಕಥೆಗಳ ಪ್ರಿಯೆಯಾಗಿದ್ದ ನಾನು ಮೀರಾ, ಸಾರ್ವಜನಿಕವಾಗಿ ಅನುವಾದಕಿ ಸಂಶೋಧಕಿ ಅನ್ನಿಸಿಕೊಂಡು ಬಿಟ್ಟೆ. ಹಾಗೇ ಆಗಾಗ ಬರೆಯುತ್ತಿದ್ದ ಕವನ ಕಥೆಗಳು, ಅಲ್ಲಿ ಇಲ್ಲಿ ಪ್ರಕಟವಾಗಿದ್ದುಂಟು. ಜತೆಗೆ ನನ್ನ ಸ್ವಂತ ಹಾಡುಗಾರಿಕೆಗಾಗಿ ಬರೆದುಕೊಂಡು ಭಾವಗೀತೆಗಳು, ನೃತ್ಯಕ್ಕಾಗಿ ರಚಿಸಿಕೊಂಡ ನೃತ್ಯ ನಾಟಕಗಳು ಸೀಮಿತ ಗುಂಪಿಗೆ ಪರಿಚಿತವಾದವು. ಮತ್ತೆ ಈಗೀಗ ಪತ್ರಿಕೆಗೆ ಭಾನುವಾರದ ವಿಮರ್ಶೆ ಬರೆಯುತ್ತಿದ್ದೇನೆ. ವಿಮರ್ಶೆ ಓದಿ ಯಾರಾದರೂ ಪುಸ್ತಕ ಕೊಳ್ಳುತ್ತಾರಾ ಎಂಬ ಅನುಮಾನ ಇದೆ. ಆದರೂ ಈ ನೆಪದಲ್ಲಾದರೂ ಕೆಲವು ಹೊಸ ಪುಸ್ತಕ ಓದುತ್ತೇನಲ್ಲ ಅಂತ ಈ ಕೆಲಸವನ್ನು ಮುಂದುವರಿಸುತ್ತಿದ್ದೇನೆ. ಒಟ್ಟಿನಲ್ಲಿ ಅನುವಾದ, ವಿಮರ್ಶೆ-ಈ ಎರಡು ಕ್ಷೇತ್ರಗಳು ನನಗೆ ಕೈತುಂಬ ಕೆಲಸ ಕೊಟ್ಟಿವು. ಇಂಥ ಹಿನ್ನೆಲೆಯುಳ್ಳ ನನಗೆ ಕೊನೆಗೆ ಅನ್ನಿಸುವುದಿಷ್ಟು.

೧. ಕಥೆ, ಕಾವ್ಯದ ಸೃಜನ ಕ್ಷೇತ್ರಕ್ಕಿಂತ ಅನುವಾದ, ವಿಮರ್ಶೆಯ ಕ್ಷೇತ್ರಗಳು ಸಾಹಿತ್ಯದ ಅರಮನೆಯನ್ನು ಪ್ರವೇಶಿಸಲು ಸಹಾಯ ಮಾಡುತ್ತವೆ. ಇವು ಒಂದು ತರಹ ಅಪ್ಲೈಡ್ ಲಿಟರೇಚರ್ ಇದ್ದಂತೆ.

೨. ಯಾವ ಲೇಖಕರ ಬಗ್ಗೆ ಹಿರಿಯ ಲೇಖಕರಲ್ಲಿ ತೀರಾ ನಿರುತ್ಸಾಹವಿಲ್ಲವಾದರೂ ಅತಿ ಉತ್ಸಾಹವೂ ಇಲ್ಲ. ಇವತ್ತಿನ ಲೇಖಕರಲ್ಲಿ ಭಾಷೆಯನ್ನು ಕುರಿತು ಶ್ರದ್ಧೆ ಇಲ್ಲ. ಕೀರ್ತಿಯ ಆಕಾಂಕ್ಷೆ ಹೆಚ್ಚು ಎಂದು ಹಿರಿಯರು ದೂರುವುದನ್ನು ತುಂಬ ಕೇಳಿದ್ದೇನೆ. ಹಿರಿಯರು ಕಿರಿಯರ ಬಗ್ಗೆ ಇನ್ನಷ್ಟು ಉತ್ಸಾಹ ತೋರಿಸಬೇಕು ಅಂತ ನನ್ನ ಅಭಿಪ್ರಾಯ.

೩. ಭಾವಗೀತೆ, ಗೀತನಾಟಕ, ಲಯಕ್ಕೊಗ್ಗುವ ಗೇಯಗೀತಗಳ ಬಗ್ಗೆ ಕನ್ನಡ ವಿಮರ್ಶಾ ಲೋಕದಲ್ಲಿರುವ ತಾತ್ಸಾರ ಒಳ್ಳೆಯದಲ್ಲ ಎಂದು ನನ್ನ ಭಾವನೆ. ಶ್ರೀ ಸಾಮಾನ್ಯರು ಮತ್ತು ವಿಮರ್ಶಕರು ಇದರಲ್ಲಿ ತದ್ವಿರುದ್ಧ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಇದು ಬದಲಾಗುವುದು ಯಾವಾಗ?

೪. ನಾಲ್ಕಾರು ಕವನಗಳನ್ನು ಹೇಗೋ ಗೀಚಿ 'ನನ್ನದೂ ಒಂದು ಕವನ ಸಂಕಲನ ಬಂತು' ಎಂದು ಬೀಗುವ ನನ್ನ ಕೆಲವು ಸಮಕಾಲೀನರನ್ನು ಕಂಡರೆ, ಬೇಸರವಾಗುತ್ತದೆ. ಕಾವ್ಯವು ಕಾಲದ ಪರೀಕ್ಷೆಯಲ್ಲಿ ಗೆಲ್ಲಬೇಕು ಎಂದು ನಾನು ನಂಬುತ್ತೇನೆ.

೫. ಲಕ್ಷ್ಮೀಪತಿ ಕೋಲಾರ, ಹೆಚ್ ಎಲ್ ಪುಷ್ಪ, ಎಂ ಆರ್ ಭಗವತಿ, ಸರಜೂ ಕಾಟ್ಕರ್ ಮುಂತಾದವರು ಬರೆಯುತ್ತಿರುವುದು ನನಗೆ ಇಷ್ಟವಾಗುತ್ತದೆ. 'ಕಾವ್ಯವು ಆದಷ್ಟೂ ಕಡಿಮೆ ಶಬ್ದಗಳಲ್ಲಿ ಹೆಚ್ಚಿನದನ್ನು ಹೇಳಬೇಕು. ಭಾಷೆಯು ಈವರೆಗೂ ಯಾವುದನ್ನು ಮುಟ್ಟಿಲ್ಲವೋ ಅದನ್ನು ಮುಟ್ಟಬೇಕು' ಎಂದು ನನ್ನ ಭಾವನೆ. ಇವರುಗಳು ಅದಕ್ಕಾಗಿ ಮಾಡುವ ಪ್ರಯತ್ನ ನನಗೆ ಖುಷಿ ಕೊಡುತ್ತದೆ. ಆದರೂ ಕಾವ್ಯದ ಅಡಿಗೆ ಮನೆಯಲ್ಲಿ ಎಲ್ಲ ಎಷ್ಟು ಬೇಗ ಹಳಸುತ್ತದೆ!



# ಒಬ್ಬರನ್ನೊಬ್ಬರು ಓದದೆ ದ್ವೀಪಗಳಾಗಿದ್ದಾರೆ

●ಪಿ ಬಿ ಪ್ರಸನ್ನ

ನಾನೇನೂ ದೊಡ್ಡ ಸಾಹಿತಿ-ಚಿಂತಕ ಅಲ್ಲ. ಕನ್ನಡಸಾಹಿತ್ಯದ ವಿದ್ಯಾರ್ಥಿ. "ನಿಮ್ಮ ಪ್ರಾಮಾಣಿಕ ಹಾಗೂ ನೇರವಾದ ಅಭಿಪ್ರಾಯಗಳು, ಕನ್ನಡ ಸಾಹಿತ್ಯದ ಈ ಹೊತ್ತಿನ ಪರಿಸ್ಥಿತಿಯನ್ನು ತಿಳಿಯುವ ಹೊಸ ನೋಟವಾಗಿರಬಲ್ಲವು" ಎಂಬ ನಿಮ್ಮ ಪತ್ರದಲ್ಲಿರುವ ವಾಕ್ಯವನ್ನು ಕಂಡು ಧೈರ್ಯ ತಂದುಕೊಂಡು ಒಂದಿಷ್ಟು ಅನಿಸಿಕೆಗಳನ್ನು ಹಂಚಿಕೊಳ್ಳುತ್ತಿದ್ದೇನೆ.

'ದೊಡ್ಡ ಪ್ರತಿಭೆ' 'ದೈತ್ಯ ಪ್ರತಿಭೆ' 'ಸೃಜನಶೀಲತೆ' ಈ ಮುಂತಾದ ಶಬ್ದಗಳನ್ನು ಹುಟ್ಟು ಹಾಕಿದ್ದು ನವೋದಯ ಮತ್ತು ನವ್ಯದವರು. ಒಂದು ಕಾಲದಲ್ಲಿ ನಾನು ಬರೆದದ್ದನ್ನು (ಗೀಚಿದ್ದನ್ನು) ತೋರಿಸಲು ದೊಡ್ಡ ದೊಡ್ಡ ಸಾಹಿತಿಗಳ ಕದ ತಟ್ಟುತ್ತಿದ್ದೆ. ಅವರೇನಾದರೂ ಚೆನ್ನಾಗಿದೆ ಅಂದರೆ ಸಾಕು ಪತ್ರಿಕೆಗಳಿಗೆ ಕಳುಹಿಸುತ್ತಿದ್ದೆ. ಪ್ರಕಟವಾದರೆ ಸಾಕು ಸಾಹಿತಿ ಎಂಬ ಭ್ರಮೆಯಲ್ಲಿ ಓಲಾಡುತ್ತಿದ್ದೆ. ನಾಲ್ಕು ಸಾಲಿನ ಪುಟಗೋಸಿ ಕವನ ಪ್ರಕಟವಾದರೂ ಸಾಕು, ಸಾಹಿತಿ ಎಂಬ ಭ್ರಮೆಯಲ್ಲಿ ಓಲಾಡುವಂತೆ ಮಾಡುತ್ತಿದ್ದವರು,ನವ್ಯದ ಗುಂಪಿನ ನನ್ನ ಹಿರಿಯ ಸಾಹಿತಿ ಮಿತ್ರರು. ನನ್ನ ದೃಷ್ಟಿಯಲ್ಲಿ ಭ್ರಮೆಗಳನ್ನು ಹುಟ್ಟಿಸಿದವರು, ನೆಲದ ಬದಲು ಆಕಾಶ ನೋಡಲು ಯುವ ಸಾಹಿತಿಗಳಿಗೆ ಕಲಿಸಿದವರೇ ನವ್ಯದವರು.

ಬಂಡಾಯ-ದಲಿತ ಚಳುವಳಿಯ ರೂಪ ತಳೆದಾಗ ಅದೇ ಒಂದು ರೀತಿ ಖುಷಿ ಕೊಟ್ಟಿತು. ವಾಚಾಳಿಯಾದ ಕವನಗಳಾದರೂ ಪರವಾಗಿಲ್ಲ ಅವೇ ಉತ್ತಮ. ಜನ ಸಾಮಾನ್ಯರನ್ನು ತಲುಪುತ್ತವೆ ಎಂದೆಲ್ಲ ಯೋಚಿಸುತ್ತಿದ್ದೆ. ಚಳುವಳಿಯ ನೇತಾರರೆನಿಸಿಕೊಂಡವರು ವಿಚಾರ ವಾದಿಗಳು ಬುದ್ಧಿಜೀವಿಗಳು ಎಂದು ಕರೆಸಿಕೊಂಡವರು. ಆಗ ನನ್ನ ಕಾಲೇಜಿನ ದಿನಗಳು. ಆ ಚಳುವಳಿಯ ನೇತಾರರ ಭಾಷಣ-ಲೇಖನಗಳನ್ನು ಬಿಡದೆ ಓದುತ್ತಿದ್ದೆ. ಯಾವಾಗ ನೇತಾರರು

ವಿವಿಧ ಸರ್ಕಾರಿ ಕೃಪಾಪೋಷಿತ ಹುದ್ದೆಗಳನ್ನು ಅಲಂಕರಿಸತೊಡಗಿದರೋ ಅಲ್ಲಿಗೆ ಎಲ್ಲರ ಬಣ್ಣ ಬಯಲಾಗತೊಡಗಿತು. ಎಲ್ಲರೂ ತಮ್ಮ ಚಳುವಳಿಯ ಮೂಲ ಆಶಯವನ್ನೆ ಮರೆತರು. ಹೆಚ್ಚಿನ ಬಂಡಾಯ-ದಲಿತದವರು ಬ್ರಾಹ್ಮಣ್ಯದ ಆರಾಧನೆಯಲ್ಲಿ ಬಹಿರಂಗವಾಗಿ-ಗುಟ್ಟಾಗಿ ಮುಳುಗಿದ್ದಾರೆ. ಸರ್ಕಾರಿ ಕೃಪಾಪೋಷಿತ ಪ್ರಶಸ್ತಿಗಳನ್ನು ಪಡೆಯುವುದರಲ್ಲಿ ಆಸಕ್ತಿ ತೋರಿಸು ತ್ತಿದ್ದಾರೆ. ನನ್ನ ಊರಾದ ಉಡುಪಿಯ ಸುತ್ತ ಮುತ್ತ ಇಂಥ ಹಲವರನ್ನು ಕಂಡು ಭ್ರಮ ನಿರಸನವಾಯಿತು. ಅತ್ತ ವಿಚಾರವಾದಿಗಳೆಂಬ ಬಿರುದು. ಖ್ಯಾತ ವೈಚಾರಿಕ ಪತ್ರಿಕೆಗಳಲ್ಲಿ ಲೇಖನಗಳು. ಇತ್ತ ಪೇಜಾವರರ ಪದತಲದಲ್ಲಿ ಸಂಘಪರಿವಾರದ ಭಜನೆ, ಶಾಲು ಹೊದೆಸಿ ಕೊಳ್ಳುವುದು ಸನ್ಮಾನ ಮಾಡಿಸಿಕೊಳ್ಳುವುದು. ಇಂಥವರನ್ನು ಕಂಡಾಗ ತಡವಾಗಿಯಾದರೂ ನನಗೆ ಸಿದ್ಧಾಂತ-ಚಳುವಳಿಗಳು ಕೇವಲ ಪತ್ರಿಕೆಗಳಲ್ಲಿ ಮಾತ್ರ ಎಂದು ತಿಳಿಯತೊಡಗಿತು. ನನ್ನಂತೆ ಎಷ್ಟೋ ಯುವ ಬರಹಗಾರರು ಭ್ರಮೆ ನಿರಸನಗೊಂಡಿರುವುದನ್ನು ಕಂಡಿದ್ದೇನೆ-ಕೇಳಿದ್ದೇನೆ. ಕಮ್ಮಟಗಳಿಗೆ ಹೋದಾಗ ಅವರು ತಮ್ಮ ಅನುಭವಗಳನ್ನು ಹಂಚಿಕೊಂಡದ್ದಿದೆ.

ಯುವ ಲೇಖಕರು ಮಾತ್ರವಲ್ಲ ಒಟ್ಟಾಗಿ ನೋಡಿದರೆ ಇಂದು ಕನ್ನಡ ಸಾಹಿತಿಗಳು ದ್ವೀಪಗಳಾಗುತ್ತಿದ್ದಾರೆ. ಇದಕ್ಕೆ ಕಾರಣಗಳು ಹಲವಾರು. ಸಾಂಸ್ಕೃತಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಸಮಾಜ ವಿಚಿತ್ರ ರೀತಿಯ ತಲ್ಲಣಗಳನ್ನು ಎದುರಿಸುತ್ತಿದೆ. ಈ ತಲ್ಲಣಗಳಿಗೆ ತಮ್ಮ ಪಾಡಿಗೆ ತಾವಿದ್ದು ಬಿಡುವ ಸ್ವಭಾವಕ್ಕೆ ಅಂಟಿಕೊಳ್ಳುತ್ತಿದ್ದಾರೆ.

ಬರಹಗಾರರ ಸಂಖ್ಯೆ, ಪ್ರಕಟವಾಗುವ ಕನ್ನಡ ಪುಸ್ತಕಗಳ ಸಂಖ್ಯೆ ಏನೂ ಕಡಿಮೆಯಾಗಿಲ್ಲ. ಭಾನುವಾರದ ದಿನಪತ್ರಿಕೆಗಳ ಪುರವಣಿಗಳನ್ನು ಗಮನಿಸಿದರೆ ಅಬ್ಬ ಅದೆಷ್ಟು ಸಂಖ್ಯೆಯ ಕವಿಗಳು! ವಿಮರ್ಶಕರು! ಸಂಶೋಧಕರು! ರೋಮಾಂಚನವಾಗುತ್ತದೆ. ದುರದೃಷ್ಟವಶಾತ್ ಒಂದು ಒಳ್ಳೆಯ ಪುಸ್ತಕ ಬಂದರೆ ಆ ಬಗ್ಗೆ ವಿಮರ್ಶೆ ಸರಿಯಾಗಿ ಮುಖ್ಯ ಪತ್ರಿಕೆಗಳಲ್ಲಿ ಪ್ರಕಟವಾಗುವುದಿಲ್ಲ. ಒಂದೋ ಬಡಿದು ತೆಗೆಯುವ, ಜಾತ್ಯಾಧಾರಿತ ಬೈಗುಳದ ವಿಮರ್ಶೆ ಗಳಾದರೆ, ಕೇವಲ ಮುಖಪುಟ ಹಿಂಬದಿಯ ಪುಟಗಳನ್ನು ಗಮನಿಸಿ ನಾಲ್ಕು ಸಾಲು ಬರೆಯುವ ವಿಮರ್ಶೆ ಇನ್ನೊಂದು ಕಡೆ. ಇದರಿಂದ ಯಾವ ಪ್ರಯೋಜನವೂ ಆಗುತ್ತಿಲ್ಲ. ಪತ್ರಿಕೆಗಳ ಸಂಪಾದಕರಿಗೆ ಪುಸ್ತಕ ವಿಮರ್ಶೆಯ ಪುಟ 'ಲಾಭದಾಯಕ' ಅಲ್ಲ. ಲೇಖಕರು ತಮ್ಮ ಕೃತಿ ಪ್ರಕಟವಾದ ತಕ್ಷಣ ಮಾಡುವ ಕೆಲಸವೆಂದರೆ ವಿಮರ್ಶಕರನ್ನು ಓಲೈಸಲು, ಪ್ರಶಸ್ತಿಗಳನ್ನು ಪಡೆಯುಲು ಲಾಬಿ ಮಾಡುವುದು. ಇದರಿಂದಾಗಿ ಸಾಹಿತ್ಯದ ಆಸಕ್ತಿ ಅವರಲ್ಲಿ ಕಡಿಮೆಯಾಗಿ ಪಕ್ಕಾ ರಾಜಕಾರಣಿಯಂತೆ ಕಾಣತೊಡಗುತ್ತಾರೆ.

ಜಾತಿಯ ಸಂಘಟನೆಗಳು ತಮ್ಮ ಹಿಡಿತದಲ್ಲಿ ಎಷ್ಟೋ ಲೇಖಕರನ್ನು ಇಟ್ಟುಕೊಂಡಿವೆ. ತಮ್ಮ ಉದ್ಯೋಗದ ದೃಷ್ಟಿಯಿಂದ, ಮನೆಯ ನೆಮ್ಮದಿಯ ದೃಷ್ಟಿಯಿಂದ ಇಂದು ಎಷ್ಟೋ ಲೇಖಕರು ಇನ್ನೊಂದು ಪತ್ರಿಕೆ, ಲೇಖಕನನ್ನು ಓದುವುದಿಲ್ಲ. ಆ ಮಟ್ಟಿನ ಭಯ ಅವರಲ್ಲಿದೆ. ನಾನು ಕೆಲಸ ಮಾಡುತ್ತಿದ್ದ ಉಡುಪಿಯ ಒಂದು ಕಾಲೇಜಿನಲ್ಲಿ 'ಲಂಕೇಶ್' ಪತ್ರಿಕೆಯನ್ನು ತರಿಸುತ್ತಿರಲಿಲ್ಲ. ಕಾರಣವೇನೆಂದರೆ ಅದು ಬ್ರಾಹ್ಮಣರನ್ನು ಬೈಯ್ಯುತ್ತದೆ! ಇತ್ತೀಚೆಗೆ ನನ್ನ

ಗುರುಗಳಾದ ರಾಮದಾಸರ 'ಎಳನಿಂಬೆ' ಭಾಗ ಎರಡು ಪ್ರಕಟವಾದಾಗ, ಅದನ್ನು ತಮ್ಮ ಗ್ರಂಥಾಲಯಕ್ಕೆ ಹಾಕಿಸಲು ಪ್ರಾಂಶುಪಾಲರೊಬ್ಬರು ನಿರಾಕರಿಸಿದರು. ಅವರ ಕಾಲೇಜಿನ ಆಡಳಿತ ಮುಖ್ಯಸ್ಥರಾದ ಸ್ವಾಮೀಜಿಯೊಬ್ಬರ ಬಗ್ಗೆ ಇರುಸು ಮುರಿಸಾಗುವ ವಿಚಾರಗಳಿವೆ ಎಂದು ಅವರ ವಾದ. ಯಾರೋ ಹೇಳಿದ್ದನ್ನು ಕೇಳಿ ಅವರು ಓದದೇ ಹೆದರಿದ್ದರು! ಹೀಗೆ ಒಬ್ಬೊಬ್ಬ ಲೇಖಕ ಇಂದು ಇನ್ನೊಬ್ಬನನ್ನು ಓದದೆ ಒಟ್ಟಿಗೆ ಚರ್ಚಿಸದೆ ದ್ವೀಪವಾಗುತ್ತಿದ್ದಾನೆ.

ಕನ್ನಡದಲ್ಲಿ ಓದಿನ ಹಸಿವು ಇಂದು ಕಡಿಮೆಯಾಗಿಲ್ಲ. ಓದುಗರು ಇದ್ದೇ ಇದ್ದಾರೆ. ವಿಮರ್ಶೆ ಗಮನಿಸಿ ಪುಸ್ತಕ ಕೊಳ್ಳುವುದನ್ನು ನಾನು ಗಮನಿಸಿದ್ದೇನೆ. ವಿಮರ್ಶಾ ಸಂಕಲನಗಳು ಗಣನೀಯ ಪ್ರಮಾಣದಲ್ಲಿ ಮಾರಾಟವಾಗುವುದನ್ನು ಕಂಡಿದ್ದೇನೆ. ಇಂದು ಕನ್ನಡದಲ್ಲಿ ಸಮೂಹ ವಾಗಿ ಚಿಂತಿಸದೆ ಒಂಟಿಯಾಗಿ ಚಿಂತಿಸಿ ಬರೆಯುವವರ ಸಂಖ್ಯೆ ಹೆಚ್ಚಾಗಿದೆ. ಪ್ರತಿಭೆ ಎಲ್ಲ ಕಾಲಕ್ಕೂ ಇದೆ. ಹಿಂದೆಯೂ ಇತ್ತು ಈಗಲೂ ಇದೆ. ಮುಂದೆಯೂ ಬರಲಿದೆ. ಅದನ್ನು ದೊಡ್ಡ, ದೈತ್ಯ ಎಂದೆಲ್ಲ ವಿಶೇಷಗಳೊಂದಿಗೆ ಗುರುತಿಸುವುದು ತಪ್ಪು. ಕತೆ, ಕವನ, ನಾಟಕ, ಹಾಸ್ಯ ಲೇಖನ ಇತ್ಯಾದಿಗಳು ಸೃಜನಶೀಲ, ಸಂಶೋಧನೆ ಇತ್ಯಾದಿಗಳು ಸೃಜನೇತರ ಎಂದೆಲ್ಲ ವಿಂಗಡಿಸುವುದು ಕೂಡ ಅಷ್ಟೇ ಹಾಸ್ಯಾಸ್ಪದ. ಸಂಶೋಧಕರು ದೊಡ್ಡ ಪ್ರತಿಭಾವಂತರು, ಅವರು ಮಾತ್ರ ಕನ್ನಡಕ್ಕಾಗಿ ಅಹರ್ನಿಶಿ ದುಡಿಯುವವರು ಎಂದೆಲ್ಲ ಒಂದು ವರ್ಗ ಘೋಷಿಸಿಕೊಳ್ಳುತ್ತ ಸಾಗುತ್ತಿದೆ. ಇದರಿಂದಾಗಿ ಸಂಬಂಧಪಟ್ಟ ಸಂಶೋಧಕ, ಸಾಹಿತಿ, ಮಠಾಧಿಪತಿಯಂತೆ ಕಾಣಿಸಿ ಕೊಳ್ಳುತ್ತಾನೆ. ಈ ಎಲ್ಲ ಭ್ರಮೆಗಳನ್ನು, ಹಣೆಪಟ್ಟಿಗಳನ್ನು ಇಲ್ಲವಾಗಿಸಿದರೆ ಸಾಹಿತಿಗಳು ಒಬ್ಬರನ್ನೊಬ್ಬರು ಓದಿಯಾರು. ದ್ವೀಪಗಳಿಂದ ಹೊರ ಬಂದಾರು.

●

ಕನ್ನಡಿ

# ಜ್ಞಾನೇಶ್ವರ ಪೂರ್ವಕಾಲೀನ ಕನ್ನಡ ವಾಙ್ಮಯ

ಮೂಲ : ದ ರಾ ಬೇಂದ್ರೆ
ಅನು : ವಿಠಲರಾವ್ ಗಾಯಕ್ವಾಡ್

(ಬೇಂದ್ರೆಯವರು ಈ ಲೇಖನದಲ್ಲಿ ಜ್ಞಾನೇಶ್ವರನಗೆ ಪೂರ್ವದಲ್ಲಿ ಕನ್ನಡದಲ್ಲಿ ಇದ್ದ ಸಾಂಸ್ಕೃತಿಕ ಸನ್ನಿವೇಶದ ಒಂದು ಚಿತ್ರವನ್ನು ಕಟ್ಟಿಕೊಡಲು ಯತ್ನಿಸಿದ್ದಾರೆ. ಬೇಂದ್ರೆಯವರ ವ್ಯಾಪಕವಾದ ಓದನ್ನೂ ವಿಚಿತ್ರವಾದ ಆಸಕ್ತಿಗಳನ್ನೂ ಈ ಲೇಖನವು ಸೂಚಿಸುತ್ತದೆ. ಈ ಲೇಖನದ ಮುಖ್ಯ ಉದ್ದೇಶವೆಂದರೆ, "ಮರಾಠಿ ವಾಙ್ಮಯದ ಐತಿಹಾಸಿಕ ಅಧ್ಯಯನಕ್ಕೆ ಕನ್ನಡ ಭಾಷೆ ಮತ್ತು ಇತಿಹಾಸದ ಜ್ಞಾನ ಅವಶ್ಯಕ" ಎಂದು ಸಾಧಿಸುವುದು; ಇದಕ್ಕೆ "ಮಹಾರಾಷ್ಟ್ರೀಯರ ಲಕ್ಷ್ಯ ಸೆಳೆಯುವುದು"; ಮರಾಠಿ ಮನೆಮಾತಿನ ಬೇಂದ್ರೆ ಮುಂತಾದವರು ಯಾಕೆ ಮತ್ತೆಮತ್ತೆ ಮರಾಠಿ ಸಂಸ್ಕೃತಿಯು ಕನ್ನಡದ ಚಾರಿತ್ರಿಕ ಋಣದಲ್ಲಿದೆ ಎಂಬ ವಾದವನ್ನು ಮಂಡಿಸುತ್ತಿದ್ದರು? ಇದು ಕೇವಲ ವಿದ್ವತ್ತಿನ ಪ್ರಶ್ನೆಯಲ್ಲ. ಇದರ ಹಿಂದೆ ಅನೇಕ ಚಾರಿತ್ರಿಕ ಒತ್ತಡಗಳಿದ್ದವು. ಎಷ್ಟೋ ವಿಷಯಗಳಲ್ಲಿ ಬೇಂದ್ರೆಯವರ ತಾತ್ವಿಕ ಎದುರಾಳಿಯಾಗಿದ್ದ ಶಂಬಾ ಜೋಶಿ ಅವರು, ಮರಾಠಿಯಲ್ಲಿ ಬರೆವ 'ಮರಾಠಿ ಸಂಸ್ಕೃತಿ' ಪುಸ್ತಕ ಕೂಡ, ಇದೇರೀತಿ ಕೆಲವು ಸತ್ಯಗಳಿಗೆ "ಮಹಾರಾಷ್ಟ್ರೀಯರ ಲಕ್ಷ್ಯ ಸೆಳೆಯುವ" ಕೆಲಸವನ್ನು .ಮಾಡುತ್ತದೆ. ಈ ಲೇಖನವು ಬೇಂದ್ರೆಯವರ ಸಂಶೋಧನೆಯ ವಿಶಿಷ್ಟತೆಯನ್ನೂ ಒಳನೋಟಗಳನ್ನೂ ಸಂಶೋಧನೆಗೆ ಅಷ್ಟೇನೂ ಒಳ್ಳೆಯದಲ್ಲದ ಚಂಚಲತೆ ಎಂಬ ಅಶಿಸ್ತನ್ನೂ ಒಳಗೊಂಡಿದೆ. ಬೇಂದ್ರೆಯವರು ಮರಾಠಿಯಲ್ಲಿ ಬಹಳ ಹಿಂದೆ ಬರೆದಿರುವ ಈ ಲೇಖನವು, ಮೊದಲ ಸಲಕ್ಕೆ ಕನ್ನಡದಲ್ಲಿ ಕಾಣಿಸಿಕೊಳ್ಳುತ್ತಿದೆ. ಈ ಮರಾಠಿ ಲೇಖನವನ್ನು ಒದಗಿಸಿಕೊಟ್ಟ ಶ್ರೀ ರಂಶಾ ಲೋಕಾಪುರ ಅವರಿಗೂ, ಪತ್ರಿಕೆಗೆ ಬಳಸಿಕೊಳ್ಳಲು ಅನುಮತಿಸಿದ ಶ್ರೀ ವಾಮನಬೇಂದ್ರೆ ಅವರಿಗೂ `ಕನ್ನಡ ಅಧ್ಯಯನ' ಕೃತಜ್ಞವಾಗಿದೆ - **ಸಂ**)

ವಾಸ್ತವವಾಗಿ ಕನ್ನಡ ವಾಙ್ಮಯದ ಇತಿಹಾಸಕ್ಕೆ ಕರ್ನಾಟಕದಲ್ಲಿನ ಯಾರಾದರೊಬ್ಬ ವ್ಯಕ್ತಿಯ ಕಾಲಮರ್ಯಾದೆಯನ್ನು ಇಟ್ಟುಕೊಳ್ಳಬೇಕು. ಅದಕ್ಕೆ ಬದಲಾಗಿ ಮಹಾರಾಷ್ಟ್ರದಲ್ಲಿನ ವ್ಯಕ್ತಿಯ ಕಾಲಮರ್ಯಾದೆಯಾದರೂ ಏತಕ್ಕೆ? ಎಂಬ ಆಕ್ಷೇಪ ಮೇಲಣ ಶೀರ್ಷಿಕೆಯಿಂದ ಸಹಜವಾಗಿಯೇ ಉತ್ಪನ್ನವಾಗಬಹುದು. ಅದಕ್ಕೆ ಕಾರಣಗಳಿವೆ, ಒಂದು-ಜ್ಞಾನೇಶ್ವರರ 'ಜ್ಞಾನೇ

ಶ್ವರಿ' ಕೃತಿಯು ಮರಾಠಿಯಲ್ಲಿನ ಅಮೌಲಿಕ ಗ್ರಂಥ, ಆದಿ ಮಹಾಕಾವ್ಯ. ಹಾಗಿರುವಾಗ ಅದಕ್ಕೂ ಪೂರ್ವದ ಮರಾಠಿಯೊಂದಿಗೆ ಕನ್ನಡವನ್ನು ತುಲನೆ ಮಾಡಿದಾಗಲೇ ಆ ಕೃತಿಯ ಉದ್ಬೋಧಕತೆಯು ಸಾಧ್ಯವಾಗಬಹುದು. ಮೂರು-ಮಹಾರಾಷ್ಟ್ರೀಯ ಸಾಹಿತ್ಯಕ ಮತ್ತು ರಾಜಕೀಯ ಇತಿಹಾಸಕಾರರಿಗೆ ಮರಾಠಿಯೊಂದಿಗೆ ಉಂಟಾಗಿರುವ ಬಿಕ್ಕಟ್ಟನ್ನು ಬಿಡಿಸುವಲ್ಲಿ ಇದರಿಂದ ಕೊಂಚವಾದರೂ ಸಹಾಯವಾಗಬಹುದು. ಆ ಬಿಕ್ಕಟ್ಟುಗಳೇನೆಂದರೆ- ಮಹಾರಾಷ್ಟ್ರ ದೇಶ, ಭಾಷೆ ಮತ್ತು ಜನ ಇವೆಲ್ಲ ಬಹಳ ಪ್ರಾಚೀನವಾದ ಅಂಶಗಳು. ಆದರೆ ಅವನ್ನು ಸಿದ್ಧಪಡಿಸಿ ತೋರಿಸುವಲ್ಲಿ ಅವರಿಗೆ ವಿಪುಲವಾದ ಪುರಾವೆಗಳಿಲ್ಲ. ಈ ಬಿಕ್ಕಟ್ಟುಗಳನ್ನು ಉಂಟು ಮಾಡಿರುವ ಪ್ರಾಚ್ಯ ವಿದ್ಯಾ ವಿಶಾರದರೆಂದರೆ ಭಂಡಾರಕರ್, ಇತಿಹಾಸಾಚಾರ್ಯ ರಾಜವಾಡೆ ಮತ್ತು ಭಾರತಾಚಾರ್ಯ ವೈದ್ಯ. ಈ ಎಲ್ಲರೂ ತಮ್ಮ ಬಹಳಷ್ಟು ಶಕ್ತಿಯನ್ನು ಇವುಗಳಿಗಾಗಿ ವ್ಯಯ ಮಾಡಿದ್ದಾರೆ. ಈ ಬಿಕ್ಕಟ್ಟುಗಳ ಮಂತ್ರಮುಗ್ಧತೆಯನ್ನು ಮರಾಠಿ ವಾಙ್ಮಯದ ಇತಿಹಾಸ ಕಾರರಾದ ಭಾವೆ, ಭಿಡೆ ಮತ್ತು ಪಾಂಗಾರಕರರಲ್ಲಿ ಹೆಚ್ಚಾಗಿ ಕಾಣ ಬಹುದಾಗಿದೆ. ಇನ್ನೂ ಮರಾಠಿ ಭಾಷೆಯ ಇತಿಹಾಸಕಾರರಾದ ಜೋಶಿ ಮತ್ತು ಕುಲಕರ್ಣಿ ಆವರ ಮೇಲೂ ಕೊಂಚ ಮಟ್ಟಿಗೆ ಆಗಿರುವುದು ಇಲ್ಲಿ ಕಂಡು ಬರುವಂತಹ ಮುಖ್ಯ ಸಂಗತಿ.

ಈ ಬಿಕ್ಕಟ್ಟಿನ ಮೂಲದ ಕುರುಹುಗಳು ಕನ್ನಡ ವಾಙ್ಮಯದಲ್ಲಿ ಇರುವುದು ಆ ಕಾಲದ ರಾಜಕೀಯ ಇತಿಹಾಸದ ಪ್ರಕಾಶನದಲ್ಲಿ ಗಮನಿಸಿದಾಗ ತಿಳಿಯುತ್ತದೆ. ಅವನ್ನು ದಿಗ್ದರ್ಶಿಸುವ ಮೊದಲು ವಿಂಧ್ಯಾದ್ರಿಯ ದಕ್ಷಿಣದ ಪ್ರದೇಶ ಅಂದರೆ ಯಾವುದನ್ನು ದಕ್ಷಿಣಾಪಥ ಎನ್ನಲಾ ಗುತ್ತಿತ್ತೋ ಅಲ್ಲಿ ಪ್ರಸಿದ್ಧವಾಗಿದ್ದ ಭಾಷಾ ಪ್ರಮುಖ ದೇಶಗಳ ಸ್ಥಿತಿ ಹೇಗಿತ್ತು ಎಂಬುದನ್ನು ನೋಡಬಹುದಾಗಿದೆ.

ಉತ್ತರದ ಹಿಂದಿ ಮತ್ತು ಒರಿಯಾ ಭಾಷೆಗಳನ್ನು ಬಿಟ್ಟರೆ ಗುಜರಾತಿ, ಮರಾಠಿ, ತೆಲುಗು, ಕನ್ನಡ, ಮಲಯಾಳಂ ಮತ್ತು ತಮಿಳು ಇವೆಲ್ಲ ಇಂದಿಗೂ ದಕ್ಷಿಣದಲ್ಲಿ ಸಾಹಿತ್ಯಿಕ ಭಾಷೆ ಗಳಾಗಿಯೇ ಇವೆ. ಇವುಗಳಲ್ಲಿ ತಮಿಳು ಅತ್ಯಂತ ಪ್ರಾಚೀನತಮ. ಹಿಂದೂಸ್ಥಾನದಲ್ಲಿ ತಮಿಳು ವಾಙ್ಮಯದಷ್ಟು ಪ್ರಾಚೀನ ವಾಙ್ಮಯ ಮತ್ತಾವುದೇ ಪ್ರಚಲಿತ ದೇಶೀ ಭಾಷೆಗಳಲ್ಲಿ ಉಪಲಬ್ಧ ವಾಗಿಲ್ಲ. ಅದರ ನಂತರದ ಸ್ಥಾನವಿರುವುದು ಕನ್ನಡಕ್ಕೆ. ತೆಲುಗು, ಮರಾಠಿ,ಮಲಯಾಳಂ ಮತ್ತು ಗುಜರಾತಿಗಳು ಅನುಕ್ರಮವಾಗಿ ಆನಂತರದವಾಗಿವೆ. ಮರಾಠಿಗಿಂತ ಕನ್ನಡ ವಾಙ್ಮಯ ಎಷ್ಟು ಪ್ರಾಚೀನ, ಅದು ಸಾಹಿತ್ಯ ಪದವಿಗೆ ಮರಾಠಿಗಿಂತಲೂ ಬೇಗ ಬಂದದ್ದು ಏಕೆ, ಮರಾಠಿ ಭಾಷೆಗೆ ಆ ಮಾನ ಮೊದಲಿಗೆ ಏಕೆ ದಕ್ಕಲಿಲ್ಲ -ಇತ್ಯಾದಿ ವಿಚಾರಗಳ ಊಹಾಪೋಹವನ್ನು ಕನ್ನಡ ವಾಙ್ಮಯದ ಚರಿತ್ರೆಯನ್ನು ಹೇಳುತ್ತಾ ಹೇಳುತ್ತಾ ಸಂದರ್ಭಾನುಸಾರ ನೋಡಬಹುದು.

ಯಾವುದಾದರೊಂದು ಭಾಷೆ ಸಾಹಿತ್ಯ ಪದವಿಗೆ ಮುಟ್ಟುವಲ್ಲಿ ಮೂರು ಕಾರಣಗಳಿರುತ್ತವೆ: ೧) ಶ್ರವಣಪ್ರಿಯ ಬಹುಜನಸಮಾಜ. ೨) ಪ್ರತಿಷ್ಠಾಪ್ರಿಯ ವಿದ್ವಾನ್ ಪಂಡಿತವರ್ಗ ಮತ್ತು ೩) ಕೀರ್ತಿಪ್ರಿಯರಾದ ರಾಜರು. ಇವುಗಳಲ್ಲಿ ಮೊದಲೆರಡು ಕಾರಣಗಳು ಅನುಕೂಲವಾಗಿದ್ದರೆ ಮೂರನೆಯ ಕಾರಣವೂ ಅನುಕೂಲವಾಗುತ್ತಾ ಹೋಗುವುದು ಸಹಜ. ಜೊತೆಗೆ ಈ ತ್ರಿಕೂಟ

ಗಳಿಗೆ ಸಮ್ಮತವಾದ ಭಾಷೆಯು ವಾಙ್ಮಯದಲ್ಲಿ ಅವತರಿಸಿ ಇತಿಹಾಸದಲ್ಲಿ ಸ್ಥಾನ ಪಡೆಯುತ್ತದೆ. ಯಾವುದೇ ಎರಡು ಕಾರಣಗಳು ಮೂರನೆಯದಕ್ಕೆ ಅನುಕೂಲ ಮಾಡಿಕೊಡುತ್ತವೆ ಎಂದು ಮೇಲೆ ಹೇಳಿದೆ. ಆದರೆ ಮೂರನೆಯದು ಅತಿ ಬಲಿಷ್ಠವಾಗಿದ್ದರೆ ಮಾತ್ರ ಅನುಕೂಲವಾಗುವುದು ಕಠಿಣವಾಗುವುದು ಎಂಬುದು ಗಮನೀಯ. ಅಲ್ಲದೆ ಇಷ್ಟಾನುಸಾರ ಪರಿಣಾಮ ಬೀರುವಲ್ಲಿ ಕಾಲಾವಧಿ ಹಿಡಿಯುತ್ತದೆ. ಆದರೆ ಎರಡು ಕಾರಣಗಳಲ್ಲಿ ಒಗ್ಗಟ್ಟು ಇದ್ದರೆ ಜಯವು ದಕ್ಕಲೇಬೇಕು. ಬಹುಜನರ ಭಾಷೆ ಪಂಡಿತರಿಗೆ ಮಾನ್ಯವಾಗಿದ್ದರೆ ರಾಜಾಶ್ರಯ ದೊರಕಿಸಿ ಕೊಳ್ಳುವುದು ಕಠಿಣವಾಗುವುದಿಲ್ಲ. ಪಾಲಿ ಮತ್ತು ಅರ್ಧಮಾಗಧಿಯ ಇತಿಹಾಸ ಇದನ್ನು ಸಾರಿ ಹೇಳುತ್ತದೆ. ಪಂಡಿತ ಮತ್ತು ರಾಜ ಇಬ್ಬರೂ ಒಂದಾದಲ್ಲಿ ಬಹುಜನ ಸಮಾಜಕ್ಕೆ ಬಾಗಿಸಲು (ಅದರ ಮೇಲೆ ಅಧಿಕಾರ ನಡೆಸಲು) ಸುಲಭ ಸಾಧ್ಯ. ಉರ್ದು ಮತ್ತು ಇಂಗ್ಲಿಶ್ ಭಾಷೆಯ ಇತಿಹಾಸವೂ ಅದನ್ನೇ ಹೇಳುತ್ತಲಿದೆ. ರಾಜರುಗಳು ಹಾಗೂ ಬಹುಜನ ಸಮಾಜ ಒಂದಾದುದರಿಂದ ಪಂಡಿತರನ್ನು ಅಧೀನಗೊಳಿಸಿಕೊಳ್ಳುವುದು ಕೂಡ ಸಾಧ್ಯ. ಅಪಭ್ರಂಶದ ಹಾಗೂ ದೇಶೀಯ ಭಾಷೆಗಳ ಇತಿಹಾಸ ಹೇಳಿರುವ ಸಂಗತಿಯಾಗಿದೆ ಇದು. ಕರ್ನಾಟಕದಲ್ಲಿ ರಾಜರು ಮತ್ತು ಬಹುಜನ ಸಮಾಜ ಇವರ ಏಕತ್ವದಿಂದಾಗಿ ಪಂಡಿತ ವರ್ಗವು ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶಗಳ ವ್ಯೂಹದಿಂದ ಬಹಳ ಬೇಗ ಹೊರಬಿದ್ದಿತು. ಇದರಿಂದ ದೇಶೀಯ ಭಾಷೆಗಳಿಗೆ ಮಂಗಳ ದಿನಗಳು ಬಹಳ ಬೇಗನೆ ಬಂದುವು. ಮಹಾರಾಷ್ಟ್ರದಲ್ಲಿ ಮಾತ್ರ ಹಾಗಾಗಲಿಲ್ಲ. ರಾಜವರ್ಗ ಹಾಗೂ ಪಂಡಿತ ವರ್ಗವು ಜೊತೆಯಾಗಿ ಬಹುಜನ ಸಮಾಜವನ್ನು ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶ ಭಾಷೆಗಳ ವರ್ತುಲದಲ್ಲಿ ಉರುಳಾಡಿಸಿತು ಹಾಗೂ ತೊಂದರೆ ಕೊಟ್ಟಿತ್ತು. ಮರಾಠಿ ಭಾಷೆಯು ವಾಙ್ಮಯದಲ್ಲಿ ತಲೆಹಾಕುವಲ್ಲಿ ಬಹಳ ಕಾಲ ಹಿಡಿದುದು ಈ ಕಾರಣವಾಗಿಯೇ. ಇದಕ್ಕೆ ಬೇರೆ ಕಾರಣಗಳೂ ಉಂಟು. ಆದರೆ ಅವೆಲ್ಲ ಗೌಣವಾದುವು. ಒಟ್ಟಾರೆ ಏನು? ದೇಶೀಯ ಭಾಷೆಗಳ ವಿಜಯವು ಬಹುಜನ ಸಮಾಜದವರ ವಿಜಯವೇ ಆಗಿದೆ. ಆದರೆ ಆ ವಿಜಯವನ್ನು ದೊರಕಿಸಿಕೊಳ್ಳುವ ಮೊದಲು ಅನೇಕ ಯುದ್ಧಗಳೇ ನಡೆದವು. ವಿವಿಧ ಪ್ರಾಕೃತ ಹಾಗೂ ವಿವಿಧ ಅಪಭ್ರಂಶ-ಇವು ಅವರ ರಣಕ್ಷೇತ್ರ ಗಳು. ದಕ್ಷಿಣಾ ಪಥದ ಮಟ್ಟಿಗೆ ಹೇಳುವುದಾದರೆ ಪೈಶಾಚಿಕ ನುಡಿಗಳಿಂದ ಮತ್ತು ಸ್ತ್ರೀ, ಬಾಲಕ, ವೈಶ್ಯ, ಶೂದ್ರ, ಅತಿಶೂದ್ರ, ವನಚರ, ವ್ರಾತ್ಯ ಹಾಗೂ ಅಪಸದಗಳು ಸಂಸ್ಕೃತ ದೊಂದಿಗೆ ಸಂಘರ್ಷ ಹೂಡಿ ಪ್ರಾಕೃತಗಳಿಗೆ ಕಾಲವನ್ನು ರೂಪಿಸಿದವು. ಹಾಗೆಯೇ ಸಂಸ್ಕೃತ, ಪ್ರಾಕೃತಗಳೊಂದಿಗೆ ಹೋರಾಡಿ ಅಪಭ್ರಂಶವನ್ನು ಹುಟ್ಟು ಹಾಕಿದವು. ಜೊತೆಗೆ ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶಗಳೊಂದಿಗೆ ಯುದ್ಧಮಾಡಿ ದೇಶೀಯ ಭಾಷೆಗಳನ್ನು ಮುನ್ನಡೆಸಿದವು. ಅಂದರೆ ಇಲ್ಲಿ ಆಯಾಯ ಭಾಷೆಗಳಲ್ಲಿ ವಾಙ್ಮಯ ನಿರ್ಮಾಣ ಮಾಡುವಲ್ಲಿ ಪೂರ್ವ ಪ್ರತಿಷ್ಠಿತಗೊಂಡಿದ್ದ ಭಾಷೆಯೊಂದಿಗೆ ಕೊಂಚ ಮಟ್ಟಿನ ದಾಸ್ಯ, ಕೊಂಚ ಮಟ್ಟಿಗೆ ಅನುಕರಣ ಹಾಗೆಯೇ ಕೊಂಚಮಟ್ಟಿಗೆ ಉಮೇದುವಾರಿಕೆಯನ್ನೂ ವಹಿಸಬೇಕಾಯಿತು. ಪ್ರಾಕೃತವು ಸಂಸ್ಕೃತದೊಂದಿಗೆ, ಅಪಭ್ರಂಶವು ಸಂಸ್ಕೃತ ಪ್ರಾಕೃತಗಳೊಂದಿಗೆ ಹಾಗೂ ಪೈಶಾಚಿಯು ಈ

ಮೂವರ ಶಿಷ್ಯವೃತ್ತಿ ಎನ್ನಿಸಬೇಕಾದರೆ ಇಲ್ಲವೆ ಗುಲಾಮಗಿರಿ ಎನ್ನಿರಿ ಇದನ್ನು ಸ್ವೀಕರಿಸ ಬೇಕಾಯಿತು. ಪೈಶಾಚಿಕ ಭಾಷೆಯ ಬಂಡವಾಳ ಹೆಚ್ಚಾಗಿದ್ದ ತಮಿಳು, ಕನ್ನಡ ಮತ್ತು ತೆಲುಗು ಭಾಷೆಗಳು ಗುಜರಾತಿ ಮತ್ತು ಮರಾಠಿ ಭಾಷೆಗಳಿಗಿಂತ ಬಹಳ ಮೊದಲೇ ವಾಙ್ಮಯ ಸ್ವರೂಪವನ್ನು ಹೊಂದಿದವು. ಈ ಪ್ರವೃತ್ತಿಗೆ ಮಹತ್ವಯುತ ಕಾರಣವೆಂದರೆ, ದಕ್ಷಿಣದಲ್ಲಿನ ಕ್ಷತ್ರಿಯರ ಭಾಷೆ ಆರ್ಯವಲ್ಲದಿದ್ದುದು ಹಾಗೂ ಅದು ಮ್ಲೇಚ್ಛ ಅಂದರೆ ಅಸ್ಪಷ್ಟೋಚ್ಚಾರ ಪ್ರಧಾನವಾದುದಾಗಿರುವುದು. ಚುಟುಕುಲವೇನು, ಚಾಳುಕ್ಯರೇನು, ಚೋಳರೇನು ಇವರೆಲ್ಲ ಅನಾರ್ಯ ಕ್ಷತ್ರಿಯರಾಗಿದ್ದು ಮೂಲತಃ ಆರ್ಯ ಭಾಷೆಯನ್ನು ಮಾತನಾಡುವವರೇ ಆಗಿರಲಿಲ್ಲ. ಆದರೆ ಅವರ ಭಾಷೆಯ ಮೇಲೆ ಆರ್ಯ ಭಾಷೆಗಳ ಸಂಸ್ಕಾರವಿತ್ತು. ಹಾಗೆಯೇ ಅದು ಆರ್ಯ ಭಾಷೆಗಳ ಮೇಲೂ ಇತ್ತು ಎಂಬುದನ್ನು ಈ ಮೊದಲೇ ಅವಲೋಕಿಸಿರುತ್ತೇವೆ. ಪಂಡಿತ, ಲೇಖಕ ವರ್ಗವು ಯಾವುದೇ ಧರ್ಮದಲ್ಲಿಯಾದರೂ ಮುಖ್ಯವಾಗಿ ಬ್ರಾಹ್ಮಣರದ್ದೇ ಆಗಿತ್ತು. ಕನ್ನಡ ವಾಙ್ಮಯ ಚರಿತ್ರೆಯಲ್ಲಿಯೂ ಇದೇ ಸಂಗತಿ ಕಂಡು ಬರುತ್ತದೆ. ಜೈನ ಧರ್ಮೀಯ ಜನರು ವಾಙ್ಮಯ ಸೇವೆಯನ್ನು ಮಾಡಿದ್ದರು. ಆದರೆ ಅವರಲ್ಲಿ ಶೇಕಡ ತೊಂಬತ್ತೈದರಷ್ಟು ಜನರು ಜಾತಿಯಿಂದ ಬ್ರಾಹ್ಮಣರೇ. ವೀರಶೈವ ಲಿಂಗಾಯತರಲ್ಲಿಯೂ ಇದೇ ಆಗಿತ್ತು. ಆರಾಧ್ಯರೇ ಮೊದಲಾದ ಶೈವ ಬ್ರಾಹ್ಮಣ ವರ್ಗವೇ ವಾಙ್ಮಯ ಸೇವೆ ಮಾಡಿದ್ದುದು. ಅಲ್ಲದೇ ಬ್ರಾಹ್ಮಣ ವರ್ಗವು ಮೂಲತಃ ಆರ್ಯ ಭಾಷೆಯವರಾಗಿತ್ತು ಎಂಬುದು ಗಮನೀಯ. ಶ್ರುತಿಯಿಂದಾಗಿ ಆರ್ಯ ಜನರಲ್ಲಿ ವಾಙ್ಮಯಕ್ಕೆ ಹೆಚ್ಚಿನ ಪ್ರತಿಷ್ಠೆ ಇದ್ದುದರ ಕಾರಣ ಅವರಿಗೆ ಸಂಸ್ಕೃತದಿಂದ ದೇಶೀಯ ಭಾಷೆಗಳೆಡೆ ಹೊರಳಲು ಬೇರೆಬೇರೆ ಪ್ರಾಂತ್ಯಗಳಲ್ಲಿ ಅಲ್ಲಿನ ಪರಿಸ್ಥಿತಿಗನುಗುಣವಾಗಿ ಹೆಚ್ಚುಕಡಿಮೆ ಸಮಯವು ಹಿಡಿಯಿತು. ಮಹಾರಾಷ್ಟ್ರದಲ್ಲಿ ಬ್ರಾಹ್ಮಣ ವರ್ಗವು ದೇಶೀಯ ಭಾಷೆಯ ಕಡೆಗೆ ದುರ್ಲಕ್ಷಿಸಿತ್ತು. ರಾಷ್ಟ್ರಕೂಟ, ಚಾಲುಕ್ಯ, ಕದಂಬ, ಶಿಲಾಹಾರಾದಿ ರಾಜಮನೆತನಗಳು ಸಹ ಅತ್ತಕಡೆ ಗಮನ ಹರಿಸಲಿಲ್ಲ. ರಾಜ ಎಂದರೆ ಕ್ಷತ್ರಿಯ, ಕ್ಷತ್ರಿಯ ಎಂದರೆ ಆರ್ಯ, ಆರ್ಯ ಎಂದರೆ ಅಗತ್ಯವಾಗಿ ಆರ್ಯ ಅಥವಾ ಸಂಸ್ಕೃತ ಜನ್ಯ ಭಾಷೆಗಳನ್ನು ಮಾತನಾಡುವವರು ಎಂಬುದು. ದಕ್ಷಿಣದಲ್ಲಿ ಮರಾಠಿ ಅಥವಾ ತತ್ಸದೃಶ ಭಾಷೆಯನ್ನು ಮಾತನಾಡುವವರೇ ಆಗಿರಬೇಕು. ಹೀಗೆ ಒಂದು ವಿಚಿತ್ರ ಸಮೀಕರಣದ ಮೇಲಣ ವಿಶ್ವಾಸದಿಂದ ಅಥವಾ ಅಂತಹ ಆಗ್ರಹದಿಂದ, ಪಾಲವೆ ಎಂಬುದೇ ಪಲ್ಲವ, ರಾಠೆ ಎಂಬುದೇ ರಾಷ್ಟ್ರಕೂಡ, ಕದಮ್ ಎಂಬುದೇ ಕದಂಬ, ಸಾಳುಂಕೆ ಎಂಬುದೇ ಚಾಲುಕ್ಯ ಎಂಬ ಭಾಷಾಶಾಸ್ತ್ರೀಯ ಬಾಂಧವ್ಯದಿಂದ ಅನುಮಾನಿಸುವ ಜಾತಿ ಅಥವಾ ಭಾಷಾ ಸಂಬಂಧದಿಂದ ರಾಷ್ಟ್ರಕೂಟ ಇಲ್ಲವೆ ಚಾಲುಕ್ಯರ ರಾಜಾಸ್ಥಾನದಲ್ಲಿ ಮರಾಠಿಯು ರಾಜಭಾಷೆಯಾಗಿದ್ದಿರಬೇಕು, ಜನಭಾಷೆಯಾಗಿರಬೇಕು ಎಂಬ ಕಲ್ಪನೆಗೆ ಅನುವು ಉಂಟಾ ಗುತ್ತದೆ. ಹಾಗಿದ್ದೂ ಮರಾಠಿ ವಾಙ್ಮಯವು ಬಹಳ ಮುಂಚೆಯೇ ಏಕೆ ರಚನೆ ಯಾಗಲಿಲ್ಲ ಎಂಬುದು ಗೂಢವೆನಿಸುತ್ತದೆ. ಈ ಗೂಢತೆಯನ್ನು ಬಿಡಿಸುವಾಗ್ಗೆ ಇತಿಹಾಸಾ ಚಾರ್ಯ ರಾಜವಾಡೆ 'ರಾಧಾಮಾಧವ ವಿಲಾಸ ಚಂಪೂ'ವಿನ ಪ್ರಸ್ತಾವನೆಯಲ್ಲಿ "ಈ ವಿಪರೀತ ರಗಳೆಯ

ಆರ್ಥವಿದು, ಮಹಾರಾಷ್ಟ್ರಿಕ ಜನರು ಬಹಳ ಸಂಸ್ಕೃತಿಯವರಾಗಿದ್ದರು ಎಂದಿದ್ದಾರೆ" ಎಂಬುದನ್ನು ಜಗುಪ್ಸೆಯಿಂದ ಹೇಳಬೇಕಾಗುತ್ತದೆ. ಅಥವಾ ಶ್ರೀ ಕೃ.ಪಾ. ಕುಲಕರ್ಣಿಯವರ ಮರಾಠಿ ಭಾಷೆಯ ಉಗಮ ಮತ್ತು ವಿಕಾಸ ಎಂಬ ಕೃತಿಯಲ್ಲಿ ಚಾಲುಕ್ಯ, ತ್ರೈಕೂಟಕ, ರಾಷ್ಟ್ರಕೂಟ ವಗೈರೆ ರಾಜಮನೆತನಗಳ ಆಶ್ರಯವು ಮರಾಠಿ ಭಾಷೆಯ ಶಬ್ದಸೃಷ್ಟಿಯ ಈಶ್ವರನಿಗೆ ದಕ್ಕಿರಲಿಲ್ಲ ಎಂದು ಹೇಗೆ ಹೇಳುವುದು? ಎಂಬುದಾಗಿ ಪ್ರಶ್ನಿಸಿದ್ದಾರೆಯೋ, ಎಂಬಂಥ ಕರುಣಾಜನಕ ಪ್ರಶ್ನೆಯು ಉದ್ಭವವಾಗುತ್ತದೆ. ಈ ನಿರಾಶೆಯ ಭರದಲ್ಲಿ ಉದ್ಗಮ ವಿಕಾಸಕಾರನು "ಆಂಧ್ರಭೃತ್ಯ ಮತ್ತು ವಾಕಾಟಕರು ಕನ್ನಡ ಭಾಷೆಯ ಪುರಸ್ಕತರಾಗಿದ್ದರು" ಎಂಬುದನ್ನು ವಿಶೇಷ ಪುರಾವೆಯಿಲ್ಲದಿದ್ದರೂ ಒಪ್ಪಿಕೊಳ್ಳುತ್ತಾರೆ. ಇದಕ್ಕೆ ವಿರುದ್ಧವಾಗಿ ಕೆಲವಾರು ಸಂಶೋಧಕರು ಮರಾಠಿಯನ್ನು ಮಹಾರಾಷ್ಟ್ರದೊಂದಿಗೆ ಗಂಟು ಹಾಕಿ ಮರಾಠಿಯನ್ನೆ ಪ್ರಾಚೀನವೆಂದು ಭಾವಿಸುತ್ತಾರೆ. ಕನ್ನಡ ವಾಙ್ಮಯವು ಹತ್ತನೆಯ ಶತಮಾನದಲ್ಲಿ ಆರಂಭವಾಗುತ್ತದೆ ಎಂಬ ಗ್ರಿಯರ್‌ಸನ್ ಸಾಹೇಬರ ಆಧಾರವನ್ನು ಹಿಡಿದು ಕನ್ನಡವು ಮರಾಠಿಗಿಂತ ಬಹಳೇ ಅರ್ವಾಚೀನವಾದುದು ಎಂದೂ ಹೇಳಿದ್ದಾರೆ. ಈ ಎಲ್ಲಾ ಪ್ರಮಾದಗಳಿಗೆ ಕಾರಣಗಳು ಹಾಗೂ ಪ್ರತ್ಯಕ್ಷ ಪ್ರಮಾಣವಾದ ಅನುಮಾನಗಳಿಗೆ ಈ ಇತಿಹಾಸ ಸಂಶೋಧನೆಯಲ್ಲಿ ಮಹತ್ವ ಲಭ್ಯವಾಗುವುದೆಂಬುದು ನಿಜ.

ಕನ್ನಡ ವಾಙ್ಮಯದ ಸಂಬಂಧವಾಗಿ ಪ್ರತ್ಯಕ್ಷ ಪ್ರಮಾಣವೊಂದು ಹೀಗಿದೆ. ಕಾವೇರಿ-ಗೋದಾವರಿ ಈ ಎರಡು ನದಿಗಳ ನಡುವಣ ಪ್ರದೇಶದಲ್ಲಿ ಕನ್ನಡವನ್ನು ಬಿಟ್ಟು ಮತ್ತಾವ ದೇಶೀಯ ಭಾಷೆಗೂ ವಾಙ್ಮಯದಲ್ಲಿ ಸ್ಥಾನವಿರಲಿಲ್ಲ, ಇದು ಸ್ಪಷ್ಟ ಗೋಚರ ಅಂಶ. ಮರಾಠಿ ಭಾಷೆಯ ಸಂಬಂಧವಾಗಿ ಕ್ರಿ.ಶ.೧೨ನೆಯ ಶತಮಾನದಲ್ಲಿ ಶಿಲಾಶಾಸನ ದೊರೆತಿದೆ. ಆದರೆ ಕನ್ನಡದ ವಿಷಯದಲ್ಲಿ ಅಂಥ ಶಿಲಾಶಾಸನ ದೊರೆತಿರುವುದು ಕ್ರಿ.ಶ.ದ ಮೊದಲ ಐದು ಶತಮಾನಗಳ ಒಳಗೇ. ಅಲ್ಲದೆ ಕನ್ನಡ ಶಿಲಾಶಾಸನದಲ್ಲಿ ಕಂಡು ಬಂದಿರುವಂಥ ಉಚ್ಚ ದರ್ಜೆಯ ಸುಂದರ ಕಾವ್ಯ ವಾಙ್ಮಯವು ಮರಾಠಿಯ ಶಿಲಾಶಾಸನಗಳಲ್ಲಿ ಇಂದಿಗೂ ಕಂಡು ಬಂದಿಲ್ಲ. (ಈ ಲೇಖನದ ಕಾಲ ೧೯೩೪-೩೫) ಮರಾಠಿ ನುಡಿಯ ಪುರಾವೆಯಾಗಿ ಏಳೆಂಟು ಶಬ್ದಗಳು ೭೭೦ರ ಅಪಭ್ರಂಶ ಕಾವ್ಯತ್ರಯಿಯಲ್ಲಿ ಕಂಡು ಬಂದರೆ, ಕನ್ನಡ ನುಡಿಯ ಪ್ರಮಾಣವು ಎರಡನೆಯ ಶತಮಾನಕ್ಕೆ ಸೇರಿದ ಒಂದು ಗ್ರೀಕ್ ನಾಟಕದಲ್ಲಿ ಒಂದು ಪಾತ್ರವು ಆಡುವ ಸಂಭಾಷಣೆಯಲ್ಲಿ ಇದೆ. ವಿಷಯ ವಿಸ್ತಾರದ ಭಯದಿಂದಾಗಿ ಕರ್ನಾಟಕ ದೇಶದ ಅಥವಾ ಜನತೆಯ ಪ್ರಾಚೀನತೆಯ ಬಗ್ಗೆ ಏನನ್ನೂ ಚರ್ಚಿಸುವುದಿಲ್ಲ. ವಾಙ್ಮಯದಂತೆಯೇ ಕನ್ನಡಿಗರ ಮಹತ್ವವನ್ನು ಪರಿಕಿಸುವ ಅಂಶವನ್ನಷ್ಟೆ ಇಲ್ಲಿ ಯೋಜಿಸಿಕೊಳ್ಳಲಾಗಿದೆ.

ಕ್ರಿ.ಶ. ಐದನೆಯ ಶತಮಾನದಲ್ಲಿನ ಚಿತ್ರದುರ್ಗದ ಶಿಲಾಶಾಸನದಲ್ಲಿ ಆ ಕಾಲದ ಕನ್ನಡ ಕಾವ್ಯದ ಮಾದರಿಯೊಂದು ಕಾಣಸಿಗುತ್ತದೆ. ಅದರ ಆಧಾರದ ಮೇಲೆ ಅದಕ್ಕಿಂತಲೂ ಮೊದಲೇ ಗ್ರಾಂಥಿಕ ಕನ್ನಡ ವಾಙ್ಮಯದ ಪ್ರಾರಂಭವಾಗಿತ್ತು ಎಂಬುದು ಸುಸ್ಪಷ್ಟ. ಅದು ನಿಜವೂ ಇರಬಹುದಾಗಿದೆ. ಅದಕ್ಕೆ ಕಾರಣಗಳಿಂತಿವೆ. ಜೈನ ಮಹಾಕವಿ ಸಮಂತಭದ್ರನನ್ನು ಕುರಿತು ಕಾವ್ಯಾ

ರಂಭದಲ್ಲಿಯೇ ನಮನ ಮಾಡಲಾಗಿದೆ. ಆದರೆ ಅವನು ಕನ್ನಡದಲ್ಲಿ ಬರೆದಿರುವ ಬಗ್ಗೆ ಪುರಾವೆಯಾಗಿ ಇದನ್ನು ಗಣಿಸಲಾಗಿಲ್ಲ. ಈ ಸಮಂತಭದ್ರನಿಗೆ 'ಶ್ರೀವಿಜಯ' ಅಥವಾ 'ವಿಜಯ' ಎಂಬ ಕಾವ್ಯನಾಮಗಳಿದ್ದಿರಬೇಕು ಎಂಬ ಸಂಗತಿ ಅವನ ಸಂಸ್ಕೃತ ಕೃತಿಗಳಿಂದ ಬರುತ್ತದೆ. 'ಚಂದ್ರ ಪ್ರಭಸ್ತುತಿ' ಎಂಬ ಕಾವ್ಯ ಮತ್ತು 'ಕವಿಮಾರ್ಗ' (ಕನ್ನಡ ಕಾವ್ಯಮಾರ್ಗದ ಮೇಲಣ ಪ್ರಥಮ ಗ್ರಂಥ) ಹಾಗೂ 'ಪರಮಾಗಮ' ಎಂಬುದು ಸಂಸ್ಕೃತ ಇಲ್ಲವೆ ಅರ್ಧ ಮಾಗಧಿಯಲ್ಲಿ ಬರೆದ ಕನ್ನಡ ಭಾಷೆಗೆ ಸಂಬಂಧಿಸಿದ ಸೂತ್ರಗ್ರಂಥ. ಇವು ಶ್ರೀವಿಜಯನು ರಚಿಸಿದುವಾಗಿವೆ. ಇವುಗಳಲ್ಲಿ ಚಂದ್ರಪ್ರಭ ಚಂಪೂ ಕೃತಿಯು ಲಭ್ಯವಾಗಿಲ್ಲ. ಪರಮಾಗಮದ ಕೆಲವಾರು ಬಿಡಿ ಸೂತ್ರಗಳು ಲಭ್ಯವಾಗಿರುವ ಬಗ್ಗೆ ಕನ್ನಡದ ವ್ಯಾಕರಣ ವಿಷಯ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ನೃಪತುಂಗನ 'ಕವಿರಾಜ ಮಾರ್ಗ'ದಿಂದ ಪರಮಾಗಮದಲ್ಲಿ ಯಾವ್ಯಾವ ಲಕ್ಷಣಗಳನ್ನು ನಿರ್ಣಯಿಸಲಾಗಿತ್ತು ಎಂಬುದನ್ನು ಅಂದಾಜು ಮಾಡಬಹುದು. ಅಲ್ಲದೇ ಶ್ರೀವಿಜಯನ 'ಕವಿಮಾರ್ಗ'ದಲ್ಲಿ ಕೆಲವಾರು ಶ್ಲೋಕಗಳು ಅದರಲ್ಲಿ ಗ್ರಂಥವಾಗಿದ್ದಿರಬೇಕು ಎಂಬುದು ಇಂದಿನ ಸಂಶೋಧನೆಯಿಂದಲೂ ಸ್ಪಷ್ಟವಾಗಿರುವ ಅಂಶ. ನಾಗವರ್ಮನ 'ಕಾವ್ಯಾವ ಲೋಕನ'ದಲ್ಲಿಯೂ ಶ್ರೀವಿಜಯನ 'ಕವಿಮಾರ್ಗ'ದಲ್ಲಿನ ಕೆಲವಾರು ಶ್ಲೋಕಗಳು ಇದ್ದಿರ ಬೇಕು ಎಂಬ ಸಂಶಯವು ಉಂಟು. ಸಮಂತಭದ್ರ ಶ್ರೀವಿಜಯನ ಕಾಲವು ಕ್ರಿ.ಶ. ೪೧೬ ಇದ್ದಿರಬೇಕು ಎಂಬುದಾಗಿ ಕವಿಚರಿತೆಕಾರರಾದ ರಾ. ನರಸಿಂಹಾಚಾರ್ಯರು ಗೊತ್ತುಪಡಿಸಿದ್ದಾರೆ. ಈ ಸಮಂತಭದ್ರನ ಸಂಸ್ಕೃತ, ಪ್ರಾಕೃತ-ಗ್ರಂಥಗಳ ಮೇಲೆ ಪಳಗನ್ನಡದಲ್ಲಿ ಬರೆದಿದ್ದ ವ್ಯಾಖ್ಯಾನಗಳೂ ಸಹ ಉಪಲಬ್ದವಾಗಿವೆ. ಹೀಗೆ ಸಮಂತಭದ್ರ ಶ್ರೀವಿಜಯನ ಕೈಯಿಂದ ಸುಮಾರು ಕ್ರಿ.ಶ. ೪೫೦ರಲ್ಲಿ ಕನ್ನಡ ವಾಙ್ಮಯದ ಸ್ತಂಭ ನೆಡಲ್ಪಟ್ಟಿತು. 'ನಮಸ್ಸಮಂತ ಭದ್ರಾಯ ಮಹತೆ ಕವಿವೇಧಸೆ' ಎಂಬುದಾಗಿ ಅವನನ್ನು ಸ್ತುತಿಸಲಾಗುತ್ತದೆಯೋ ಅದು ಸಾರ್ಥಕ್ಯ ವಾದುದಾಗಿದೆ. ಸಮಂತಭದ್ರನು ಕರ್ನಾಟಕದಲ್ಲಿ ಜನಿಸಿದ್ದನು ಹಾಗೂ ಕರ್ನಾಟಕದಲ್ಲಿಯೇ ತಪಸ್ಸು ಮಾಡಿದ್ದನು. ಅವನ ಕಾರ್ಯಕ್ಷೇತ್ರ ಕಾಂಚಿಯಿಂದ ಕಾಶಿಯವರೆಗೆ ವಿಸ್ತರಿಸಿದ್ದಿತಾದರೂ ಕನ್ನಡ ಭಾಷೆಗೆ ಸಾರಸ್ವತಾವತಾರ ನೀಡಿ ನಾಮರೂಪದಲ್ಲಿ ತಂದ ಶ್ರೇಯಸ್ಸು ಅವನದು. ಈ ಶ್ರೀವಿಜಯನ ಕಾಲದ ಪೂರ್ವದಲ್ಲಿ ಕರ್ನಾಟಕದಲ್ಲಿ ಪ್ರಾಕೃತದ ಕಾಲ ಆಗಿ ಹೋಗಿತ್ತು. ಕದಂಬರು ಮತ್ತು ಪಲ್ಲವರು ಅದನ್ನು ಪುರಸ್ಕರಿಸಿದ್ದವರು. ತಮಿಳು ದೇಶದಲ್ಲಿ ಈ ಪೂರ್ವದಲ್ಲಿಯೇ ದೇಶೀಯ ಭಾಷೆಯಲ್ಲಿಯೇ ವಾಙ್ಮಯ ನಿರ್ಮಾಣವಾಗಿತ್ತು. ಅಲ್ಲಿ ಅದು ಆ ರೂಪ ಪಡೆದುದಕ್ಕೆ ಕಾರಣ ಶೈವ ಧರ್ಮದ ಪ್ರಭಾವ, ಕರ್ನಾಟಕದಲ್ಲಿ ಜೈನ ಧರ್ಮದಿಂದ ಅಂಥ ರೂಪ ಬಂತು. ಆದರೆ ಸಂಮಂತಭದ್ರನು ಜಾತಿಯಲ್ಲಿ ಬ್ರಾಹ್ಮಣನಾಗಿದ್ದ. ಅವನು ಧರ್ಮದಿಂದ ಪಶುಯಜ್ಞವನ್ನು ಪೂಜ್ಯವೆಂದು ಒಪ್ಪುವ ವೈದಿಕ ಮೀಮಾಂಸಕನಾಗಿರದೆ, 'ಅಹಿಂಸೋ ಪರಮೋಧರ್ಮಃ' ಎಂದು ಒಪ್ಪುವ ಜೈನ ಧರ್ಮೀಯ ನಾಗಿದ್ದನು.

ಈ ಶ್ರೀವಿಜಯನಿಂದ ಕವಿರಾಜಮಾರ್ಗ ಪ್ರವರ್ತಕ ರಾಷ್ಟ್ರಕೂಟ ನೃಪತುಂಗನ ಕಾಲದವರೆಗೆ ಒಂದು ಕಾಲಘಟ್ಟವಾಗಿ ಒಪ್ಪಿ, ಆ ಹೊತ್ತಿಗೆ ವಾಙ್ಮಯದ ಸಮಾಲೋಚನವನ್ನು ಸಂಕ್ಷಿಪ್ತ

ವಾಗಿ ಮಂಡಿಸುತ್ತೇನೆ. ಕ್ರಿ.ಶ. ೪೫೦ರಿಂದ ೮೫೦ರವರೆಗಿನ ಕಾಲದಲ್ಲಿ ಸುಮಾರು ೧೩-೧೪ ಜನ ಕವಿಗಳು ಆಗಿ ಹೋಗಿದ್ದಾರೆ. ಗಂಗರು ಮತ್ತು ಚಾಲುಕ್ಯರು ಮುಖ್ಯವಾಗಿ ಕನ್ನಡ ಭಾಷೆಗೇ ರಾಜಮಾನ್ಯತೆ ನೀಡಿದ್ದರು. ಮತ್ತಾವ ದೇಶೀಯ ಭಾಷೆಗೂ ಅವರು ಮಾನ್ಯತೆ ನೀಡಿದ್ದ ಬಗ್ಗೆ ಪುರಾವೆಗಳು ದೊರೆಯುವುದಿಲ್ಲ. ಗೋದಾವರಿ ಮತ್ತು ನರ್ಮದಾ ನದಿಗಳ ನಡುವಣ ಪ್ರದೇಶದಲ್ಲಿ ಸಂಸ್ಕೃತ-ಪ್ರಾಕೃತ ಮತ್ತು ಅಪಭ್ರಂಶಗಳ ಕಾಲವಿತ್ತು. ಕರ್ನಾಟಕ ದಲ್ಲಿಯೂ ಸಂಸ್ಕೃತ-ಪ್ರಾಕೃತ ಮತ್ತು ಅರ್ಧಮಾಗಧಿಯಲ್ಲಿ ಗ್ರಂಥ ರಚನೆಗಳು ನಡೆಯುತ್ತಿದ್ದವು, ಅವುಗಳಿಗೂ ರಾಜಾಶ್ರಯವಿದ್ದಿತು. ಗುಜರಾತ್ ಮತ್ತು ಆಂಧ್ರ ಪ್ರದೇಶಗಳಲ್ಲಿಯೂ ಚಾಲುಕ್ಯರದ್ದೇ ರಾಜಸತ್ತೆ ಇದ್ದುದರಿಂದ, ಜನಭಾಷೆಯಿಂದಲೇ ಪಂಡಿತ ಭಾಷೆಗೆ ಚಾಲನೆ ದೊರೆತಿತ್ತು. ಗಂಗರ ರಾಜ ಮನೆತನದಲ್ಲಿ ಇಬ್ಬರು ಪ್ರಖ್ಯಾತ ಗ್ರಂಥಕಾರರು ಆಗಿ ಹೋಗಿದ್ದರು. ಭಾರವಿ ಎಂಬ ಸಂಸ್ಕೃತ ಮಹಾಕವಿಯು ಗಂಗ ದುರ್ವಿನೀತನ ಬಳಿಯಲ್ಲಿಯೇ ಇದ್ದುದ್ದು. ಭಾರವಿಯ 'ಕಿರಾತಾರ್ಜುನೀಯ' ಕಾವ್ಯದ ೧೫ನೆಯ ಸರ್ಗದ ಮೇಲೆ ದುರ್ವಿನೀತನು ಟೀಕೆ ಬರೆದಿದ್ದನು. ಹಾಗೆಯೇ ಗುಣಾಢ್ಯನ 'ಬೃಹತ್ಕಥೆ'ಗೆ ಸಂಸ್ಕೃತ ರೂಪ ನೀಡಿದ್ದು ಆತನೇ. 'ದೇವಭಾರತೀನಿಬದ್ಧ ಬೃಹತ್ಕಥಾ' ಎಂಬುದಾಗಿ ಅವನಿಗೆ ಬಿರುದಿತ್ತು. ಕನ್ನಡದ ಗದ್ಯ ಗ್ರಂಥಕಾರ ಪಂಚಕರಲ್ಲಿ ದುರ್ವಿನೀತನನ್ನೂ ಹೆಸರಿಸಿದ್ದಾನೆ ನೃಪತುಂಗ. ಅಲ್ಲದೆ ಈ ಬೃಹತ್ಕಥೆಯನ್ನು ಕನ್ನಡದಲ್ಲಿ 'ವಡ್ಡುಕಥಾ' ಎಂಬ ಹೆಸರಿನಿಂದ ಬರೆದಿರಬೇಕು ಆತ. ಇದರಿಂದಾಗಿಯೇ ಪಂಚತಂತ್ರ ಕಥೆಯ ಮೂಲ ಪರಂಪರೆ ದಕ್ಷಿಣದಲ್ಲಿ ಮುಂಚೆಯೇ ಪ್ರಾರಂಭವಾದುದು. ಚಾಲುಕ್ಯರ ದರ್ಬಾರಿ ನಿಂದ ಪರ್ಶಿಯಾ ದೇಶದ ಖುಸ್ರುವಿನ ದರ್ಬಾರಕ್ಕೆ ಹೋಗಿ ಪರ್ಶಿಯನ್ ರೂಪವನ್ನು ಧಾರಣೆ ಮಾಡಿ, ನಂತರ ಪ್ರವಾಸೋಪಾದಿಯಲ್ಲಿ ಪಶ್ಚಿಮ ದೇಶದಲ್ಲಿನ ಪಂಚತಂತ್ರ ಕಥೆಯ ಮಾತೃಕ ಸ್ಥಾನವಾಗಿ ನೆಲೆನಿಂತಿತು ಈ ಕಥೆ. ಅದರಂತೆಯೇ ಉತ್ತರದಲ್ಲಿನ ಸೋಮದೇವ ಅಥವಾ ಕ್ಷೇಮೇಂದ್ರರ ಬೃಹತ್ಕಥೆಗಳಿಗೆ ದುರ್ವಿನೀತನ ಬೃತಹ್ಕಥೆಯೇ ಮೂಲವಾಗಿದ್ದಿತು ಎಂಬುದು ಈಗ ನಿರ್ವಿವಾದಿತವಾದ ಸಂಗತಿ. ಆದರೆ ಅದರ ಒಂದಾದರೂ ಪ್ರತಿಯು ಸದ್ಯ ಲಭ್ಯವಾಗಿಲ್ಲವೆಂಬುದು ದುಃಖದ ಸಂಗತಿ. ಇದರ ಕನ್ನಡ ರೂಪವಾದ 'ವಡ್ಡುಕಥೆ'ಯಾದರೂ ದೊರೆತಿದ್ದರೆ ಹೆಚ್ಚು ಉಪಯೋಗವಾಗುತ್ತಿತ್ತು. ಆದರೆ ಒಂದು ಮಾತು ಮಾತ್ರ ಸ್ಪಷ್ಟ. ಕೇವಲ ಔತ್ತರೇಯ ಪಂಡಿತರಿಗಷ್ಟೆ 'ಬೃಹತ್ಕಥೆ'ಯ ಪೈಶಾಚಿಕ ಜ್ಞಾನ ಇರುವುದಂತೂ ಸಾಧ್ಯವಿಲ್ಲ. ದಾಕ್ಷಿಣಾತ್ಯ ಭಾಷಾ ಪಂಡಿತರೇ ಅದಕ್ಕೆ ಬೇಕಾಗಿತ್ತು. ಅಂಥವನಾಗಿದ್ದನು ದುರ್ವಿನೀತ. ಅದಕ್ಕಿಂತಲೂ ಹೆಚ್ಚಾಗಿ ಗಂಗರ ಭಾಷೆಯು ಪೈಶಾಚಿಯದಾಗಿತ್ತು, ಚಾಲುಕ್ಯರ ಭಾಷೆಯೂ ಸಹ ಸಂಸ್ಕೃತ ಅಥವಾ ಸಂಸ್ಕೃತ ಜನ್ಯ ಪ್ರಾಕೃತವಾಗಿರದೆ ಅವರ 'ಸ್ವಭಾಷೆ'ಯು ಬೇರೆಯದ್ದೇ ಆಗಿತ್ತು ಎಂಬುದು ಅವರ ಒಂದು ತಾಮ್ರಪಟದಿಂದ ತಿಳಿದುಬರುತ್ತದೆ. ಅದು ಪೈಶಾಚಿಯ ಒಂದು ಪ್ರಭೇದವಾದ ಚೂಳಿಕಾ ಪೈಶಾಚಿಯಾಗಿದ್ದಿರಬೇಕು. ವಿಂಧ್ಯಚೂಳಿಕ, ಚಳುಕ್ಯ ಅಥವಾ ಚಾಲೂಕ್ಯ, ಚುಟುಕುಲ ಮತ್ತು ಚೋಳ ಇವರೆಲ್ಲರೂ ಮೂಲತಃ ಒಂದೇ ಆಗಿದ್ದರು ಎಂಬಂತೆ ಕಾಣುತ್ತದೆ. ಅವರ ಭಾಷೆ ಚೂಳಿಕಾ ಪೈಶಾಚಿ. ದೇಶಭೇದ ರೂಪದಿಂದ ಈ ಪೈಶಾಚಿಯ

ಪ್ರಭೇದವು ವಿಂಧ್ಯಪರ್ವತದಿಂದ ದಕ್ಷಿಣದಲ್ಲಿ ಮತ್ತು ವಾಯುವ್ಯ ಪ್ರಾಂತ್ಯದಲ್ಲಿ ರೂಢಿಯಲ್ಲಿದ್ದಿತು. ಅದರ ಮೇಲೆ ಬಹಳವಾಗಿ ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶಗಳ ಸಂಸ್ಕಾರವು ಉಂಟಾಗಿ ದೇಶೀ ಭಾಷೆಗಳು ಉಂಟಾದವು. ಇದೇ ಅಭಿಪ್ರಾಯವನ್ನು ಕನ್ನಡದ ಎಲ್ಲಾ ವ್ಯಾಕರಣಕಾರರೂ ಪ್ರತಿಪಾದಿಸಿದ್ದಾರೆ. ಮೂರೂವರೆ ಭಾಷೆಗಳಿಂದ ಐವತ್ತಾರು ಭಾಷೆಗಳುಂಟಾದುವು ಎಂಬುದು ಅವರು ಹೇಳಿರುವ ಮಾತು. ಕನ್ನಡ ಭಾಷೆಯೂ ಅದಕ್ಕೆ ಅಪವಾದ ವೇನಲ್ಲ. ಮಹಾರಾಷ್ಟ್ರದಲ್ಲಿನ ಪೈಶಾಚಿಯ ಪ್ರಭೇದಗಳಿಂದ 'ಪ್ರೇತ ಮಹಾರಾಷ್ಟ್ರೀ' ಎಂದು ಹೇಳುತ್ತಿದ್ದಿರಬೇಕು ಎಂಬುದು ಹೇಮಚಂದ್ರನ ಪರಿಭಾಷೆಯಿಂದ ತಿಳಿಯುತ್ತದೆ. ಒಟ್ಟಾರೆ ಕರ್ನಾಟಕದಲ್ಲಿ ಪೈಶಾಚಿಯ ವಿವಿಧ ರೂಪಗಳು ರೂಢಿಯಲ್ಲಿದ್ದವು ಎಂಬುದಂತೂ ಸ್ಪಷ್ಟ. ಕನ್ನಡದೊಂದಿಗೆ ಕುಲಸಂಬಂಧ ಹೊಂದಿರುವ ಕಾಡು ಭಾಷೆಗಳಾದ ತೋದ, ಬಡಗ, ಕುರುಂಬಗಳೊಂದಿಗೆ 'ಇರುಳ' ಅಂದರೆ ರಾತ್ರಿಯ ಜನರ ಭಾಷೆಯೊಂದು ಇದೆ. ಚಾಲುಕ್ಯರ ರಾಜಾಸ್ಥಾನದಲ್ಲಿ ಚೋಳಿಕಾ ಪೈಶಾಚಿಗೆ ಪ್ರಾಮುಖ್ಯ ದೊರೆತಿತ್ತು. ಅದಕ್ಕೆ ಹೆಚ್ಚಿನ ಸಂಸ್ಕಾರ ನೀಡಿ ಗ್ರಾಂಥಿಕ ಭಾಷೆಯಾಗಿಯೂ ಪರಿವರ್ತಿಸಲಾಯಿತು. ಆ ಕಾರಣದಿಂದಾಗಿಯೇ ರಾಷ್ಟ್ರಕೂಟ ನೃಪತುಂಗನು ಸಾಧಾರಣವೆಂಬಂತೆ ಬಾದಾಮಿ, ಲಕ್ಷ್ಮೇಶ್ವರ, ಕೊಪ್ಪಳ ಮತ್ತು ಬೆಳಗಾವಿ ಈ ಚತುಃ ಸೀಮೆಗಳಲ್ಲಿನ ಕನ್ನಡಕ್ಕೆ ಕನ್ನಡದ ತಿರುಳು (ತಿರುಳ್ಗನ್ನಡ) ಎಂಬುದಾಗಿ ಹೇಳಿರುವುದು. ಈ ಚತುಃಸೀಮೆಗಳೆಲ್ಲ ಕ್ರಿ.ಶ. ಐದನೆಯ ಶತಕದಲ್ಲಿ ಚಾಲುಕ್ಯರ ಪ್ರಮುಖ ನಗರಗಳಾಗಿದ್ದುವು. ಚಾಲುಕ್ಯ ಮಂಗಳೇಶನು ವೈಷ್ಣವ ಭಾಗವತ ಸಂಪ್ರದಾಯದವರಿಗೆಂದು ಕೊಟ್ಟಿರುವ ದಾನದ ಸಂಗತಿಯನ್ನು ಭಿತ್ತಿಚಿತ್ರಗಳಲ್ಲಿ ಕನ್ನಡದಲ್ಲಿಯೇ ನಮೂದಿಸಲಾಗಿದೆ. ಒಂದು ಶಿಲಾಶಾಸನದಲ್ಲಿ 'ಕಲಿಯುಗ ವಿಪರೀತನ್' ಎಂಬ ಬಿರುದಿದ್ದ 'ಕಪ್ಪೇ ಅರಭಟ್ಟ'ನ ಸ್ತುತಿಯೂ ಉಂಟು. ಅದರಲ್ಲಿನ ಒಂದು ಪದ್ಯದಲ್ಲಿ 'ಯೇ ಯಥಾಮಾಂ ಪ್ರಪಂದ್ಯತೇ' ಎಂಬ ಭಗವದ್ಗೀತೆಯ ಶ್ಲೋಕವೊಂದಕ್ಕೆ ಭಾಷ್ಯ ಇರುವ ಪ್ರಮಾಣದಲ್ಲಿಯೇ ಇದೆ, 'ಸಾಧುಂಗೆ ಸಾಧು, ಮಾಧುರ್ಯಂಗೆ ಮಾಧುರ್ಯಂ, ಬಾಧಿಪ್ಪಕಲಿಗೆ ಕಲಿಯುಗ ವಿಪರೀತನ್' ಮಾಧವನೀತನ್ ಪೆರನಲ್ಲ' ಎಂಬ ಅಲ್ಲಿಯ ಹೇಳಿಕೆ. ಭಾಗವತ ಧರ್ಮದ ವೃದ್ಧಿಯೆಂದರೆ ಪಾಮರ ಭಾಷೆಯ ಪ್ರಸಾರ ಎಂಬುದು ಇತಿಹಾಸದಿಂದ ತಿಳಿದು ಬರುವ ಸಂಗತಿ. ಈ ಕಾಲದಲ್ಲಿಯೇ ಚಂದ್ರಕವಿಯೂ ಭಾಗವತ ಧರ್ಮದ ಬ್ರಾಹ್ಮಣ ಕಾವ್ಯವೊಂದನ್ನು ಬರೆಯಲಾರಂಭಿಸಿದ್ದನು. ಇವನನ್ನು ದುರ್ಗಸಿಂಹ, ರುದ್ರಭಟ್ಟ ಮತ್ತು ಚೌಂಡರಸರೆಂಬ ಶೈವ, ವೈಷ್ಣವ ಕವಿಗಳು ಬಿಡದೆ ಸ್ಮರಿಸಿದ್ದಾರೆ, ಆದರೆ ಪ್ರಮುಖ ಜೈನಕವಿಗಳಾರಲ್ಲೂ ಇವನು ಸ್ಮರಿಸಲ್ಪಟ್ಟಿಲ್ಲ. ಹೀಗೆ ವೈದಿಕರೆನಿಸಿದ ಬ್ರಾಹ್ಮಣರೂ ಕನ್ನಡ ಭಾಷೆಯನ್ನು ಕ್ರಿ.ಶ. ೫-೬ನೆಯ ಶತಮಾನದಲ್ಲಿಯೇ ಸ್ವೀಕರಿಸಿದ್ದರೆಂಬುದು ತಿಳಿಯುತ್ತದೆ. ಆದರೆ ಈ ಚಂದ್ರಕವಿಯ ಕಾವ್ಯ ಲಭ್ಯವಾಗಿಲ್ಲ. ನೃಪತುಂಗನ ಕವಿರಾಜ ಮಾರ್ಗದಲ್ಲಿ ಅಲಂಕಾರಗಳಾಗಿ ಉದಾಹರಿಸಲ್ಪಟ್ಟಿರುವ ರಾಮಾಯಣ, ಭಾರತ, ಭಾಗವತಗಳ ಪ್ರಸಂಗಗಳಲ್ಲಿನ ಕೆಲವು ಪದ್ಯಗಳು ಚಂದ್ರಕವಿಯವಾಗಿರಬೇಕು ಎನಿಸುತ್ತದೆ. ಇದಕ್ಕೇ ಇರಬೇಕು, ನೃಪತುಂಗನು ಚಂದ್ರಕವಿಯನ್ನು ಮಹಾಕವಿಯಾಗಿ ಭಾವಿಸಿರುವುದು. ಕನ್ನಡ ಅಲಂಕಾರ ಶಾಸ್ತ್ರದ ಒಂದು ವಿಶಿಷ್ಟ

ಶಿಸ್ತು ಎಂದರೆ ಕಾವ್ಯ ಲಕ್ಷಣದ ಉದಾಹರಣೆಗಳಿಗೆ ಸ್ವತಃ ರಚನೆ ಮಾಡಲು ಹೋಗದೆ, ಪ್ರಚಲಿತ ಕಾವ್ಯಗಳಿಂದ ಆಯ್ದುಕೊಳ್ಳುವುದು. ಈ ಸಂದರ್ಭದಲ್ಲಿ ಕರ್ತೃಗಳು ಶಿಲಾಶಾಸನ ಗಳಿಂದಲೂ ಉದಾಹರಣೆಗಳನ್ನು ಆಯ್ದುಕೊಳ್ಳುತ್ತಾರೆ. ಏನೇ ಇರಲಿ ಈ ಕಾಲಖಂಡದಲ್ಲಿನ ಅತ್ಯಂತ ಮಹತ್ವದ ಗ್ರಂಥಗಳಾಗಿ ಮೂರರ ಮಾಹಿತಿ ಇದೆ. ಸಮಂತಭದ್ರ ಶ್ರೀವಿಜಯಾನಂತ ಕವೀಶ್ವರ ಕವಿ ಪರಮೇಷ್ಠಿಯವರು ೨೪ ತೀರ್ಥಂಕರರ ಚರಿತ್ರೆಯನ್ನು ಬರೆದರು. ಈ ಚರಿತ್ರೆ ಯನ್ನು ಜಿನಸೇನ, ಗುಣಭದ್ರರು ತಮ್ಮ ಸಂಸ್ಕೃತ ಮಹಾಪುರಾಣ ಗ್ರಂಥಗಳಲ್ಲಿ ಉಪಯೋಗಿಸಿ ಕೊಂಡಿದ್ದಾರೆ. ಇದರ ಕಾಲ ದುರ್ವಿನೀತ ಕಾಲೀನ ಸಂಸ್ಕೃತ ಮತ್ತು ಕನ್ನಡ (?) ವ್ಯಾಕರಣಕಾರ ಪಂಡಿತ ಪೂಜ್ಯಪಾದರಿಗಿಂತ ಪೂರ್ವದ್ದಾಗಿದೆ. ಕವೀಶ್ವರರ ತೀರ್ಥಂಕರ ಕಥೆಯು ಇಂದಿಗೂ ಅನುಪಲಬ್ಧ. ಮತ್ತೊಂದು ಅತ್ಯಂತ ಮಹತ್ವದ ಕೃತಿ ಆದರೆ ಅಲಭ್ಯವಾಗಿರುವುದೆಂದರೆ 'ಚೂಡಾಮಣಿ'. ಕ್ರಿ.ಶ ೧೬೦೪ರಲ್ಲಿ ಕನ್ನಡ ಭಾಷೆಯ ವ್ಯಾಕರಣವನ್ನು ಸಂಸ್ಕೃತ ಸೂತ್ರಗಳಲ್ಲಿ ರಚಿಸಿದ ಜೈನಾಚಾರ್ಯ ಭಟ್ಟಾಕಳಂಕದೇವನು ಈ ಚೂಡಾಮಣಿ ಗ್ರಂಥದ ವಿಷಯದಲ್ಲಿ "ನ ಚೈಷಾ (ಕರ್ನಾಟ ಭಾಷಾ) ಶಾಸ್ತ್ರನುಪಯೋಗಿನೀ, ತತ್ವಾರ್ಥ ಮಹಾಶಾಸ್ತ್ರ ವ್ಯಾಖ್ಯಾನಸ್ಯ ಷಣ್ಣವತಿ ಸಹಸ್ರಪ್ರಮಿತ ಗ್ರಂಥ ಸಂದರ್ಭ-ರೂಪಸ್ಯ ಚೂಡಾಮಣ್ಯಭಿಧಾನಸ್ಯ ಮಹಾಶಾಸ್ತ್ರಸ್ಯ ಉಪಲಭ್ಯ ಮಾನತ್ವಾತ್" ಎಂದಿದ್ದಾನೆ. ಅಂದರೆ ೯೬೦೦೦ ಚೂಡಾಮಣಿ ವ್ಯಾಖ್ಯಾನವುಳ್ಳ ಈ ಕನ್ನಡ ಕೃತಿಯು ಅವನ ಕಾಲದಲ್ಲಿ ಉಪಲಬ್ಧದಲ್ಲಿತ್ತು. ಪ್ರಥಮ ಗದ್ಯಗ್ರಂಥಕಾರ 'ವಿಮಲ' ಮತ್ತು ಚೂಡಾಮಣಿಯ ಆಖ್ಯಾನಕಾರ ತುಂಬಲೂರಾಚಾರ್ಯ ಇವೆರಡೂ ಒಬ್ಬನದೇ ಹೆಸರು ಗಳೋ ಹೇಗೆ ಎಂಬ ಸಂಶಯ ಉಂಟಾಗುತ್ತದೆ. ಏಕೆಂದರೆ ತುಂಬಲೂರಾಚಾರ್ಯ ಎಂಬುದು ನಿಜವಾದ ಹೆಸರೇನಲ್ಲ. ಮೈಸೂರು ಸಂಸ್ಥಾನದಲ್ಲಿನ ತುಂಬಲೂರು ಎಂಬಲ್ಲಿ ಈ ಆಚಾರ್ಯ ಜನಿಸಿದವನಾದ್ದರಿಂದ ಅವನಿಗೆ ಈ ಹೆಸರು ಬಂದಿರುವುದು. ಭಾರವಿಯ ವಂಶ ದಲ್ಲಿಯ ದಂಡಿಯೆಂಬ ಸಂಸ್ಕೃತ ಕವಿಯ ಚೂಡಾಮಣಿ ಕರ್ತ ಶ್ರೀವರ್ಧದೇವ ಎಂಬುವವ ನನ್ನು ಸ್ತುತಿಸಿರುವುದರಿಂದ, ತುಂಬಲೂರಾಚಾರ್ಯರ ಹೆಸರು ಶ್ರೀವರ್ಧದೇವ ತುಂಬಲೂರಾ ಚಾರ್ಯನಲ್ಲ ಎಂಬುದು ಈಗ ತಿಳಿದಿದೆ. ಜಯಬಂಧುವಿನ ಗದ್ಯಗ್ರಂಥ ಅಲಭ್ಯವಾದರೂ ಅವನ ಮಗ ಜಯ ಬಂಧುನಂದನನ ಒಂದು ಪಾಕಶಾಸ್ತ್ರ ಸಂಬಂಧಿಸಿದ ಗ್ರಂಥವು ಲಭ್ಯವಾಗಿದೆ. ಗದ್ಯ ಪದ್ಯ ಈ ಶಬ್ದಗಳ ವ್ಯುತ್ಪತ್ತಿಯನ್ನು ಹೇಗೆ ಸರಳವಾಗಿ ಹೇಳಲು ಸಾಧ್ಯವೋ ಹಾಗೆಯೇ ಚಂಪೂ ಶಬ್ದದ ವಿಷಯದಲ್ಲಿ ಹೇಳಲು ಸಾಧ್ಯವಿಲ್ಲ. ಕೀತ್ ಸಾಹೇಬರು ತಮ್ಮ ಸಂಸ್ಕೃತ ವಾಙ್ಮಯದ ಇತಿಹಾಸದಲ್ಲಿ "Champu, a word of unknown origin" ಎಂದು ಉಲ್ಲೇಖಿ ಸಿದ್ದಾರೆ. ಕನ್ನಡ ಮತ್ತು ತುಳು ಭಾಷೆಯಲ್ಲಿ ಸಂಪು ಮತ್ತು ಚಂಪೆ ಎಂಬ ಶಬ್ದಗಳಿದ್ದು, ಅವುಗಳಿಗೆ ಸುಂದರ ಮತ್ತು ಮಿಶ್ರ ಎಂಬರ್ಥಗಳಿವೆ. ಮತ್ತೊಂದು ಸಂಗತಿಯೆಂದರೆ ಜೈನರೇ ಚಂಪೂಕಾವ್ಯ ಪದ್ಧತಿಯನ್ನು ರೂಢಿಗೊಳಿಸಿದ್ದು ಎಂಬುದು ಸಂಸ್ಕೃತ ಜೈನ ವಾಙ್ಮಯದಿಂದ ತಿಳಿದು ಬರುತ್ತದೆ. ಅಲ್ಲದೆ ಅವರು ದಕ್ಷಿಣದಲ್ಲಿನ ದಿಗಂಬರ ಜೈನರೆಂದೆನಿಸುತ್ತದೆ. ಅದೇನೇ ಇರಲಿ, ಶ್ರೀವಿಜಯಾದಿ ಕನ್ನಡ ಕವಿಗಳು ಐದನೆಯ ಶತಮಾನದಲ್ಲಿಯೇ ಚಂಪೂ ಕಾವ್ಯಕ್ಕೆ

ಅಡಿಪಾಯ ಹಾಕಿದವರು ಹಾಗೂ ದಾಕ್ಷಿಣಾತ್ಯನಾದ ದಂಡಿಯೇ ಅವರ ಕಾವ್ಯಲಕ್ಷಣವನ್ನು ಸೇಳಿರುವುದು ಎಂಬುದಕ್ಕಂತೂ ಆಧಾರಗಳಿವೆ. ಒಟ್ಟಾರೆ ಕನ್ನಡ ವಾಙ್ಮಯದ ಈ ಪ್ರಥಮ ಯುಗದಲ್ಲಿ ಪೈಶಾಚಿಯಲ್ಲಿನ ಮತ್ತು ತಮಿಳು ಮಾರ್ಗದ ಬಹಳಷ್ಟು ಶಬ್ದ ಮತ್ತು ಶಬ್ದ ಪ್ರಯೋಗಗಳು ಬರುತ್ತವೆ. ಚಂಪೂ ರೂಪವನ್ನು ಮಹಾಕಾವ್ಯಕ್ಕೆ ಬಳಸಲು ಯೋಜಿಸಲಾಯಿತು.

ಇದರೊಂದಿಗೆ ಸಂಸ್ಕೃತ ಗಣಗಳನ್ನು ಸ್ವೀಕರಿಸಿದರೂ ಅದಕ್ಕೆ ನವೀನ ಸಂಸ್ಕಾರವೊಂದನ್ನು ಕೊಡಲಾಯಿತು. ನಿಯತಾಕ್ಷರ ಯತಿ ನಿಯಮವನ್ನು ಪಾಲಿಸಬೇಕಾಗಿಲ್ಲ ಹಾಗೂ ಶ್ಲೋಕಗಳನ್ನು ಹೇಳುವಲ್ಲಿ ಅರ್ಥಯುತಿಗೇ ಹೆಚ್ಚು ಆದ್ಯತೆ. ಪ್ರಾಸ ವಿಷಯವಾಗಿ ಹೇಳಬಹುದಾದರೆ, ಕನ್ನಡ ಜನಪದ ಹಾಡುಗಳಲ್ಲಿ ಮೂರು ರೀತಿಯ ಪ್ರಾಸಗಳಿದ್ದವು. ಆದ್ಯಕ್ಷರ ಪ್ರಾಸ, ದ್ವಿತೀಯಾಕ್ಷರ ಪ್ರಾಸ ಮತ್ತು ಅಂತ್ಯಕ್ಷರ ಪ್ರಾಸ. ಪಂಡಿತ ಕವಿಗಳು ಖಂಡ ಪ್ರಾಸವೆಂದು ಕರೆಯಲಾಗಿರುವ ದ್ವಿತೀಯಾಕ್ಷರ ಪ್ರಾಸಕ್ಕೆ ಹೆಚ್ಚಿನ ಮಹತ್ವ ನೀಡಿದರು. ರಗಳೆ ಛಂದದಲ್ಲಿ ಅಂತ್ಯಾಕ್ಷರ ಪ್ರಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯ. ತೆಲುಗಿನಲ್ಲಿ ಮಾತ್ರ ಆದ್ಯಕ್ಷರ ಪ್ರಾಸವು ಹೆಚ್ಚು ರೂಢಿಯಲ್ಲಿತ್ತು. ಕನ್ನಡದಲ್ಲಿ ಜನಪದ ಹಾಡುಗಳು ಹೆಚ್ಚು ಪ್ರಮಾಣದಲ್ಲಿದ್ದವು. ಪಂಡಿತ ಕವಿಗಳು ಅವುಗಳಿಗೆ ವರ್ಣ ಅಥವಾ ವರ್ಣಕ ಕಾವ್ಯ ಎಂಬುದಾಗಿ ಹೆಸರಿಸಿದ್ದರು. ವರ್ಣಕ ಕಾವ್ಯವೆಂದರೆ ಗೇಯ ವಾಙ್ಮಯ. ಇದರಲ್ಲಿ ಗುರವರ ಅಂದರೆ ಶೈವರ ಶಿವಲೀಲಾ ಮತ್ತು ಕಾಮ ಸಂಹಾರಾದಿ ವಿಷಯದ ದುಂದುಭಿ ಗೀತೆಗಳು, ಕುರುಬಾದಿ ಕ್ಷತ್ರಿಯ ಜಾತಿಯ ವೀರರುಗಳ ಚರಿತ್ರೆ, ಆಶುಕವಿಗಳ ನೀತಿ ಸಂಬಂಧಿ ಹಾಡುಗಳು, ಹೆಂಗಸರು ಮತ್ತು ರೈತರ ತ್ರಿಪದಿ ಎಂಬ ಸಂಸ್ಕೃತ ನಾಮಕ ಕನ್ನಡ ಛಂದಸ್ಸಿನ ಚುಟುಕಗಳು ಬರುತ್ತವೆ. ತ್ರಿಪದಿ ಛಂದಸ್ಸು ಮತ್ತು ಮರಾಠಿಯ ಓವಿ ಛಂದಸ್ಸಿಗೂ ಇರುವ ಸಂಬಂಧವೇನೆಂಬುದನ್ನು ಮುಂದೆ ಹೇಳಲಾಗುವುದು.

ಕರ್ನಾಟಕದಲ್ಲಿ ಹೀಗೆ ದೇಶೀಯ ವಾಙ್ಮಯವು ಮುನ್ನಡೆಯುತ್ತಿದ್ದಾಗ, ಮಹಾರಾಷ್ಟ್ರದಲ್ಲಿ ಮರಾಠಿಗೆ ರೂಢ ಭಾಷೆಗಿಂತ ಹೆಚ್ಚಿನ ಮಹತ್ವದ ಜಾಗವಿತ್ತು ಎಂಬುದಕ್ಕೆ ಇತಿಹಾಸದಲ್ಲಿ ಸಾಕ್ಷ್ಯವಿಲ್ಲ. ಗೋದಾವರಿ-ನರ್ಮದಾ ನದಿಗಳ ನಡುವಣ ಪ್ರದೇಶದಲ್ಲಿ ಮರಾಠಿ, ಕನ್ನಡ ಮತ್ತು ತೆಲುಗು ಈ ಮೂರೂ ಭಾಷೆಯ ಪ್ರಜೆಗಳಿದ್ದಿರಬೇಕು ಎನಿಸುತ್ತದೆ. ಚಾಲುಕ್ಯರಿಗಾಗಲಿ ಅಥವಾ ರಾಷ್ಟ್ರಕೂಟರಿಗಾಗಲಿ ಮರಾಠಿಯ ವಿಷಯದಲ್ಲಿ ಒಂದು ದೇಶೀಯ ಭಾಷೆ ಎಂಬ ಆದರವಿದ್ದ ಕುರುಹು ಸಹ ಇದ್ದಂತಿಲ್ಲ. ಚಾಲುಕ್ಯರ ಕರ್ನಾಟಕ ಸಾಮ್ರಾಜ್ಯದಲ್ಲಿ ಮಹಾರಾಷ್ಟ್ರ ಒಂದು ಜಿತ ರಾಷ್ಟ್ರವಾಗಿಯಷ್ಟೆ ಮೆರೆಯುತ್ತಿತ್ತು. ಇಲ್ಲಿ ರಾಜ್ಯಭಾರ ನಡೆಸುವ ಮಾಂಡಲಿಕರು, ಉತ್ತರದ ಹರ್ಷವರ್ಧನಾದಿಗಳು ಹಾಗೆಯೇ ಪುಲಕೇಶಿಯಾದಿಯಾಗಿ ಚಾಲುಕ್ಯರ ಉದಾಸೀನತೆ ಗೊಳಗಾಗಿಯೇ ಇದ್ದರು ಎಂದರೂ ತಪ್ಪೇನಿಲ್ಲ. ಧರ್ಮದ ವಿಷಯದಲ್ಲಿ ಬೌದ್ಧ, ಪಾಶುಪತ ಮತ್ತು ಕಾಳಾಮುಖ ಶೈವ, ದಿಗ್ಗಂಬರ ಮತ್ತು ಶ್ವೇತಾಂಬರ ಜೈನ, ಪ್ರಾಕೃತಪ್ರಿಯ ಭಾಗವತ ಪಂಥಗಳು, ಗಣಪತಿ, ಮಲ್ಲಾರಿ ಇತ್ಯಾದಿ ದೇವತಾ ಪೂಜಕ ಸಂಸ್ಕೃತಪ್ರಿಯ ಮೀಮಾಂಸಕರು, ಕ್ವಚಿತ್ತಾಗಿ ಉಪನಿಷದ್ ಮತವಾದಿ ಜನರು ಇಲ್ಲಿ ಇದ್ದಿರುವಂತೆ ಕಾಣುತ್ತದೆ. ಇವರೆಲ್ಲ ವಾಙ್ಮಯದ ವಿಚಾರದಲ್ಲಿ ಅವಲಂಭಿಸಿದ್ದು ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶಗಳನ್ನು,

ಪ್ರೇತ ಮಹಾರಾಷ್ಟ್ರೀಯ ಭಾಷೆಯನ್ನು ಬಳಸುತ್ತಿದ್ದುದು ಕೇವಲ ವ್ಯಾವಹಾರಿಕ ಮಾತುಗಳಲ್ಲಷ್ಟೆ. ಒಟ್ಟಾರೆ ಈ ಕಾಲದ ಮರಾಠಿಯ ಭಾಗವನ್ನು ಇತಿಹಾಸಾಚಾರ್ಯ ರಾಜವಾಡೆಯವರಿಗೆ ಕೆಲವರು ಆರಿಸಿದ ಶಬ್ದಗಳಿಂದಷ್ಟೆ ಚಿತ್ರಿಸಬೇಕಾಗಿ ಬಂದಿದೆ. ಒಂದಾದರೂ ಪೂರ್ಣ ವಾಕ್ಯವು ಉದಾಹರಣೆಗಾದರೂ ಸಿಕ್ಕುವುದಿಲ್ಲ. ಅಲ್ಲದೆ ಅವರು ಒಪ್ಪಿರುವ ಮರಾಠಿ ಶಬ್ದಗಳು ಶುದ್ಧ ಮರಾಠಿಯವೇ ಎಂದು ನಿಶ್ಚಯವಾಗಿ ಹೇಳಲು ಬರುವಂತಿಲ್ಲ.

ಈ ನಂತರದಲ್ಲಿ ನಾವು ಕನ್ನಡ ವಾಙ್ಮಯದ ಎರಡನೆಯ ಯುಗದ ಸಂಬಂಧವಾಗಿ ವಿಚಾರ ಮಾಡಬಹುದು. ಈ ಯುಗದ ಪ್ರಾರಂಭ ನೃಪತುಂಗನ 'ಕವಿರಾಜಮಾರ್ಗ' ಎಂಬ ಮಾನ್ಯ ಗ್ರಂಥದೊಂದಿಗೆ ಆಗುವುದು. ಈ ಯುಗದ ಕೊನೆಯಾಗುವುದು ೧೧೬೦ರಲ್ಲಿ. ಬಸವ, ಅಲ್ಲಮಪ್ರಭು, ಹರಿಹರ, ರಾಘವಾಂಕ ಇತ್ಯಾದಿ ವೀರಶೈವರ ನೂತನ ಮಾರ್ಗದ ಕಾವ್ಯ ಮತ್ತು ವಚನಗಳಿಂದ. ಆದರೆ ಇಲ್ಲಿ ಆ ಕಾಲವನ್ನು ಮಹಾರಾಷ್ಟ್ರದ ಸಂದರ್ಭದ ಕಾರಣ ಮುಕುಂದ ರಾಜನವರೆಗೆ ಅಂದರೆ ೧೧೮೮ರವರೆಗೆ ಹಿಗ್ಗಿಸಲಾಗಿದೆ. ಈ ಕಾಲದಲ್ಲಿನ ೧೮೦-೧೯೦ ಕನ್ನಡ ಕವಿಗಳನ್ನು ಕವಿಚರಿತೆಕಾರರು ಉಲ್ಲೇಖಿಸಿದ್ದಾರೆ. ಈ ಯುಗವನ್ನು ಮೂರು ಭಾಗಗಳಾಗಿ ಕಲ್ಪಿಸಿ ಅದರಲ್ಲಿನ ಮಹತ್ವದ ಕವಿಗಳು ಹಾಗೂ ಕಾವ್ಯಗಳ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.

ರಾಷ್ಟ್ರಕೂಟ ಅಮೋಘವರ್ಷ ನೃಪತುಂಗ ರಾಜನ ಕವಿರಾಜ ಮಾರ್ಗವು ಬಹಳೇ ಮಹತ್ವಯುತ ಗ್ರಂಥ. ಅವನು ಶ್ರೀವಿಜಯನ ಕವಿಮಾರ್ಗವನ್ನು ತನ್ನ ಗ್ರಂಥದಲ್ಲಿ ಅಂತರ್ಭಾವ ಗೊಳಿಸಿಕೊಂಡಿದ್ದಾನೆ. ಅಂತೆಯೇ ದಂಡಿಯ 'ಕಾವ್ಯಾದರ್ಶ'ದಿಂದಲೂ ಕೆಲವಾರು ಅಲಂಕಾರ ಲಕ್ಷಣಗಳನ್ನು ತೆಗೆದುಕೊಂಡಿರುವನು. ಸ್ವತಃ ಅವನೇ ಕನ್ನಡದಲ್ಲಿನ ದಕ್ಷಿಣೋತ್ತರ ಮಾರ್ಗ ಗಳನ್ನು ಕುರಿತು ಚರ್ಚಿಸಿದ್ದಾನೆ. ಹಾಗೆಯೇ ಅತಿಶಯವಾಗಿ ಪ್ರಾಚೀನ ಕನ್ನಡ ಶಬ್ದ ಅಥವಾ ಸಂಸ್ಕೃತ ಶಬ್ದಗಳನ್ನು ಕಾವ್ಯದಲ್ಲಿ ಬಳಸಿ ಕ್ಲಿಷ್ಟಗೊಳಿಸಬಾರದೆಂದು ನಿರ್ಣಯಿಸಿರುವನು. ಮಹಾಕಾವ್ಯದಲ್ಲಿ ಚತುರ್ವಿಧ ಪುರುಷಾರ್ಥ ವರ್ಣನೆಗಳು ಮತ್ತು ನವರಸಗಳು ಇರಬೇಕು. ರಾಜನ ಫರ್ಮಾನು ಹೊರಟಂತೆ ಕವಿಗಳು ಕಾವ್ಯ ಬರೆತ್ತಿದ್ದರೆಂಬುದು ಇದರ ಅರ್ಥವಲ್ಲ. ಬದಲಾಗಿ ಪೂರ್ವ ಪರಂಪರೆಯ ವಿಚಾರ, ನವೀನ ಅಭಿರುಚಿ, ಸಂಸ್ಕೃತ ವಾಙ್ಮಯದೊಂದಿಗಿನ ಸಾಹಚರ್ಯ ಮತ್ತು ಪಂಡಿತ ಮಂಡಳಿಯೊಂದಿಗೆ ಚರ್ಚೆ ನಡೆಸಿಯೇ ಏನುಬೇಕು ಎಂಬುದನ್ನು ಗೊತ್ತುಪಡಿಸಲಾಗುತ್ತಿತ್ತು. ನೃಪತುಂಗನ ಕಾಲದಲ್ಲಿ ಕನ್ನಡ ಭಾಷೆಯಲ್ಲಿ ಸಾವಿರಾರು ಪ್ರಭೇದ ಗಳು ಇದ್ದುವೆಂದು ತೋರುತ್ತದೆ. ಕಾವ್ಯದಲ್ಲಿ ವ್ಯಾಕರಣ ಬದ್ಧವಾದ ಭಾಷೆಯನ್ನು ಬಳಸುವುದು ಅವಶ್ಯ. ದೇಶೀಯ ಪ್ರಕಾರವು ಸಹಸ್ರ ನಾಲಗೆಯ ಆದಿಶೇಷನಿಗೂ ಶಕ್ಯವಿಲ್ಲ ಎಂಬುದು 'ಕವಿರಾಜಮಾರ್ಗ'ದಲ್ಲಿನ ಅಭಿಪ್ರಾಯ. ಆದರೆ ದೇಶೀಯ ಮಧುರ ಮಿಲನವನ್ನು ಸಾಧಿಸಿದ ಕವಿಗೆ ಹೆಚ್ಚು ಮಾನ್ಯತೆ. 'ಕವಿರಾಜಮಾರ್ಗ'ದಲ್ಲಿನ ಉದಾಹರಣೆಗಳ ಭಾಷೆ ಸ್ವತಃ ಹಾಗಿತ್ತು. ಒಂಬತ್ತನೆಯ ಶತಮಾನದಲ್ಲಿ ಇದ್ದ ಅಸಗ ಕವಿಯ ವರ್ಧಮಾನ ಮತ್ತು 'ಶಾಂತೀಶ್ವರ ಪುರಾಣ'ಗಳೆಂಬ ಸಂಸ್ಕೃತ ಭಾಷಾ ಕೃತಿಗಳು ಲಭ್ಯವಾಗಿವೆ. ಆದರೆ ಕವೀಶ್ವರ ಹೊನ್ನ (ಪೊನ್ನ)

ಇವನ ಬಗ್ಗೆ ಹೇಳಿರುವಂತೆ ಇವನ ಕನ್ನಡ ಕಾವ್ಯಗಳು ಮಾತ್ರ ಅಲಭ್ಯ. ಅದೇ ಗತಿ 'ಗುಣಗಾಂಕೀಯಮ್' ಎಂಬ ಛಂದಶಾಸ್ತ್ರದ್ದೂ. ಪೂರ್ವಚಾಲುಕ್ಯರ ಆಸ್ಥಾನದಲ್ಲಿದ್ದು ಗ್ರಂಥವನ್ನು ರಚಿಸಿದ್ದ. ಚಾಲುಕ್ಯರು ಆರಂಭದಲ್ಲಿ ತಮ್ಮ ಮೂಲ ಮನೆತನವನ್ನು ಆಧರಿಸಿ ಕನ್ನಡಕ್ಕೆ ಪುರಸ್ಕಾರ ಕೊಟ್ಟಿದ್ದರು. ಎಂತಲೇ ತೆಲುಗು ಭಾಷೆಯೂ ನಾಮರೂಪ ಪಡೆಯುವಲ್ಲಿ ಕಾಲ ಹಿಡಿಯಿತು. ವೆಂಗಿ ಮಂಡಲದಲ್ಲಿ ಕನ್ನಡ ಭಾಷೆ ಮತ್ತು ಜೈನಧರ್ಮದ್ದೇ ರಾಜ್ಯಭಾರ. ಇರಲಿ, ಕವಿ ಪರಮೇಷ್ಟಿಯ ಕಾವ್ಯದಲ್ಲಿ ಸೂಚಿಸಿದ ಒಂದು ಕಥಾನಕದ ಮೇಲೆ ಕರ್ಣಾಪಾರ್ಯ ಕವಿಯು 'ಮಾಳವೀ ಮಾಧವ' ಎಂಬ ಕಾವ್ಯ ರಚಿಸಿದ. ಕೆಲವು ಪಂಡಿತರು ಹೇಳಿರುವಂತೆ ಇದು ಭವಭೂತಿಯ 'ಉತ್ತರ ರಾಮಚರಿತೆ'ಯ ರೂಪಾಂತರ ಅಥವಾ ಭಾಷಾಂತರವಾಗಿರಬೇಕು. ಆದರೆ ಪ್ರತ್ಯಕ್ಷ ಕೃತಿ ಕೈಗೆ ಲಭ್ಯವಾಗುವವರೆಗೂ ಈ ಕುರಿತು ಏನನ್ನೂ ಹೇಳಲು ಸಾಧ್ಯವಿಲ್ಲ. ಅದರಂತೆಯೇ ಈ ಶತಕದಲ್ಲಿನ ಮಹತ್ವದ ಅನೇಕ ಕೃತಿಗಳು ಇಂದಿಗೂ ಅನುಪಲಬ್ಧವಾಗಿವೆ. ಶ್ರೀ ಶಂಕರಾಚಾರ್ಯ, ಸುರೇಶ್ವಾರಾಚಾರ್ಯಾದಿ ವೈದಿಕ ಅದ್ವೈತ ಮತವಾದಿಗಳು ಮತ್ತು ಅಕಳಂಕ, ವೀರಸೇನ, ಗುಣಭದ್ರಾದಿ ಜೈನರು ರಾಷ್ಟ್ರಕೂಟರ ಸಹಾಯದಿಂದ ಬೌದ್ಧರೊಂದಿಗೆ ಜಗಳವಾಡಿದ್ದು ಈ ಕಾಲದಲ್ಲಿಯೇ. ಬೌದ್ಧಧರ್ಮವು ಹಿಂದೆ ಸರಿಯುವುದರೊಂದಿಗೆ ಆಂಧ್ರ ಪ್ರದೇಶದಲ್ಲಿ ಜೈನಧರ್ಮವೂ ಹಿಂದೆ ಸರಿಯಲಾರಂಭಿಸಿತು. ಇತ್ತ ಶಂಕರಾಚಾರ್ಯರಿಂದಾಗಿ ಶೈವ ಮತವು ಜೋರಾಯಿತು. ಮಹಾರಾಷ್ಟ್ರದಲ್ಲಿ ಮೂಲದಲ್ಲಿದ್ದ ಭಾಗವತ ಮತವು ಹಸ್ತಾಮಲಕ ಮತ್ತು ಚಿತ್ಸುಖಾದಿ ಆಚಾರ್ಯರಿಂದಾಗಿ ಮುಂದಾಯಿತು. ಆದರೆ ಜೈನರೂ ಸಹ ತಮ್ಮ 'ಹರಿವಂಶ ಕಾವ್ಯ'ಗಳು ಮತ್ತು 'ನೇಮಿನಾಥ ಪುರಾಣ'ಗಳ ಸಂಬಂಧವನ್ನು ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶಗಳಲ್ಲಿ ಆರಂಭಿಸಿದರು. ವಿದರ್ಭದ ಸುಧನ್ವನ ಸಾಮ್ರಾಜ್ಯ ಪ್ರತಿಷ್ಠಾಪನಾಚಾರ್ಯ ದ್ವಾರಾವತಿ ಪೀಠಾಧೀಶ್ವರ ಶಂಕರಾಚಾರ್ಯನೆಡೆಗೆ ಮಹಾರಾಷ್ಟ್ರ ಮತ್ತು ಗುಜರಾತಿನ ಭಾಗಗಳು ಬಂದವು. ಆಂಧ್ರ, ಕರ್ನಾಟಕಾದಿ ಭಾಗಗಳೆಲ್ಲ ಶೃಂಗೇರಿ ಮಠದ ವ್ಯಾಪ್ತಿಗೆ ಸೇರಿದವು. ಶಂಕರಾಚಾರ್ಯರ ಮುಖ್ಯ ಪೀಠವಿದ್ದ ಶೃಂಗೇರಿಯಂತೂ ಕರ್ನಾಟಕದಲ್ಲಿಯೇ ಇತ್ತು. ಈ ರೀತಿಯಲ್ಲಿ ಪುನಃ ಕರ್ನಾಟಕಕ್ಕೆ ಮಹತ್ವದ ದರ್ಜೆಯನ್ನು ಮಾನ್ಯ ಮಾಡಲಾಯಿತು.

ಏನೇ ಇರಲಿ ಕ್ರಿ.ಶ.೧೦ನೆಯ ಶತಮಾನ ಕನ್ನಡದಲ್ಲಿ ಜೈನ ವಾಙ್ಮಯದ ಸುವರ್ಣಯುಗ ಎನಿಸಿಕೊಂಡಿದೆ. ಪಂಪ, ಪೊನ್ನ ಮತ್ತು ರನ್ನ ಈ ಮೂವರು ಕವಿಚಕ್ರವರ್ತಿಗಳು 'ಆದಿಪುರಾಣ', 'ಶಾಂತಿ ಪುರಾಣ' ಮತ್ತು 'ಅಜಿತನಾಥ ಪುರಾಣ'ಗಳೆಂಬ ಜೈನ ವಂದ್ಯ ಪುರಾಣ ಕಾವ್ಯಗಳನ್ನು ಹಾಗೂ 'ಶೂದ್ರಕ', 'ವಿಕ್ರಮಾರ್ಜುನ ವಿಜಯ', 'ಭುವನೈಕ ರಾಮಾಭ್ಯುದಯ', 'ಸಾಹಸ ಭೀಮ ವಿಜಯ' ಅಥವಾ 'ಗದಾಯುದ್ಧ' ಎಂಬ ಐತಿಹಾಸಿಕ ಕಾವ್ಯಗಳನ್ನು ರಚಿಸಿದ್ದರು. ಅಲ್ಲದೆ ಜಗತ್ ಪ್ರಸಿದ್ಧವಾದ ಗೊಮಟೇಶ್ವರ ಮೂರ್ತಿಯ ಪ್ರತಿಷ್ಠಾಪಕ ಚಾವುಂಡರಾಯನ 'ತ್ರಿಷಷ್ಠಿ ಶಲಾಕ ಪುರುಷರ ಪುರಾಣ'ವೂ ಬಂದದ್ದು ಈ ಕಾಲದಲ್ಲಿಯೇ. ಗಂಗ, ರಾಷ್ಟ್ರಕೂಟ ಮತ್ತು ಮಾಂಡಲಿಕ ಚಾಲುಕ್ಯರ ದರಬಾರಿನಲ್ಲಿಯಂತೂ ಕನ್ನಡಕ್ಕೇ ಹೆಚ್ಚಿನ ಮಾನ್ಯತೆ. ಮಾತ್ರ

ಭಾಸ್ಕರಾಚಾರ್ಯನು ಇನ್ನು ಹುಟ್ಟಿರಲಿಲ್ಲ ಈ ಕಾಲದಲ್ಲಿ. ಗ್ರಂಥ ಜ್ಯೋತಿಷ ಶಾಸ್ತ್ರವಾದರೂ ಪದಪೂರಣೆಗಳಿಗಾಗಿ ಸಂಖ್ಯೆಗಳ ಹಿನ್ನೆಲೆಯಲ್ಲಿ ವಿಷಯವನ್ನು ಅಂದಾಜು ಮಾಡುವ ರೀತಿಯನ್ನಷ್ಟೆ ಆಧರಿಸುವುದಿಲ್ಲ. ಪ್ರಾಸಕ್ಕಾಗಿ ವೃಥಾ ಅಕ್ಷರಗಳನ್ನು ಬಳಸದೆ ಗ್ರಂಥವನ್ನು ಬರೆಯುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ವಾಙ್ಮಯ ದೃಷ್ಟಿಯಿಂದ ಈ ಕೃತಿಯು ಪರವಾಗಿಲ್ಲ. ಅವನ ಚಂದ್ರಪ್ರಭ ಪುರಾಣ ಕೃತಿಯು ಇಂದಿಗೂ ಲಭ್ಯವಾಗಿಲ್ಲ. ಧಾರವಾಡ ಜಿಲ್ಲೆಯ ನರಗುಂದದಲ್ಲಿ ನೆಲೆಸಿದ್ದವನು ಈತ. ಬನವಾಸಿ ಪ್ರಾಂತ್ಯದಲ್ಲಿದ್ದ ಶಾಂತಿನಾಥ ಕವಿಯು 'ಸುಕುಮಾರಚರಿತೆ' ಎಂಬ ಮಹಾಕಾವ್ಯವನ್ನು ರಚಿಸಿದ್ದನು. ಅದರಲ್ಲಿ ಬರುವ 'ಪದ್ದಳಿ' ಎಂಬ ವೃತ್ತಕ್ಕೂ ಮರಾಠಿಯ ಅಭಂಗಗಳಿಗೂ ಕುಲಸಂಬಂಧವಿರುವಂತೆ ಕಾಣುತ್ತದೆ. ಅಲ್ಲದೆ ದಿವಾಕರನಂದಿಯ ತತ್ವಾರ್ಥಸೂತ್ರ ವ್ಯಾಖ್ಯಾನ ಮತ್ತು ಶಂಖವರ್ಮನ ಅವನ ಹೆಸರನ್ನುಳ್ಳ ಕೃತಿಯು ಈ ಕಾಲದಲ್ಲಿ ಬಂದಿತ್ತು. ಕಾಳಾಮುಖ ಪಂಡಿತರ ಪ್ರಭಾವವು ಜನತೆಯ ಮೇಲೆ ಹೆಚ್ಚಾಗಿದ್ದುದು ಶಾಸನ ಕಾವ್ಯಗಳಿಂದ ವ್ಯಕ್ತವಾಗುತ್ತವೆ. ಇವರ ಹೆಸರಿನ ಕೊನೆಯಲ್ಲಿ ಶಕ್ತಿ, ರಾಶಿ ಮತ್ತು ಜೀಯ ಎಂಬ ಶಬ್ದಗಳು ಬಂದಿವೆ. ಮಹಾರಾಷ್ಟ್ರದಲ್ಲಿನ ಬಾಲಾಜಿ, ಶಿವಾಜಿ, ಶಹಾಜಿ ಎಂಬ ಏನೆಲ್ಲ ಹೆಸರುಗಳ ಕೊನೆಯಲ್ಲಿ ಇರುವ 'ಜಿ'ಕಾರವು ಈ ಸಂಸ್ಕಾರಗಳ ಅವಶೇಷವಾಗಿದ್ದಿರಬೇಕು ಎನಿಸುತ್ತದೆ.

ಚಾಲುಕ್ಯರು ಮತ್ತು ಮಾಳವ ರಾಜರುಗಳ ನಡುವೆ ಅನೇಕ ಯುದ್ಧಗಳು ನಡೆದಿವೆ. ಪಂಪ ಕವಿಯ 'ಆದಿಪುರಾಣದಿಂದ' ಚಾಲುಕ್ಯರ ಮಹಾಸೈನ್ಯದಲ್ಲಿ ವರಾಟರು ಮತ್ತು ಮಹಾನಾಟಕರ ದಂಡು (ಮೇಳ)ಗಳಿದ್ದುವೆಂದು ತಿಳಿದು ಬರುತ್ತದೆ. ಈ ವರಾಟರು ಮಹಾನಾಟಕರು ಯುದ್ಧೋಪಜೀವಿ ಮರಾಠರಾಗಿರುವ ಸಂಭವವು ಇದೆ. ಏನೇ ಇದ್ದರೂ ಈ ಮಾಳವ ಮತ್ತು ಚಾಲುಕ್ಯರ ಯುದ್ಧದಲ್ಲಿ ಮಹಾರಾಷ್ಟ್ರದಲ್ಲಿನ ಸಾಮಂತ ಮಾಂಡಲಿಕರು ತಟಸ್ಥ ಪ್ರವೃತ್ತಿ ಹೊಂದಿದವರಾಗಿದ್ದರು. ಇಲ್ಲವೆ ಸಮಯಾನುಸಾರ ವ್ಯವಹರಿಸುವವರಾಗಿದ್ದರು ಎಂದೆನಿಸುತ್ತದೆ. ನಾಥ ಸಂಪ್ರದಾಯದ ಪ್ರವರ್ತಕನಾದ ಮತ್ಸ್ಯೇಂದ್ರನು ಈ ಕಾಲದಲ್ಲಿಯೇ ಕರ್ನಾಟಕದಲ್ಲಿ ಸಂಚರಿಸುತ್ತಿದ್ದನು. ಆದರೆ ಹೆಚ್ಚು ಲಾಭವಾಗಿರಲಿಲ್ಲ. ಈ ಕಾರಣದಿಂದಲೇ ನಾಥಪಂಥೀಯರಲ್ಲಿ ಮರಾಠಿ ಭಾಷೆಗೆ ಹೆಚ್ಚಿನ ಮಹತ್ವ ಬರುವಂತಾಯಿತು ಎಂಬ ಸಂಗತಿಯು ಗೋರಖ ಗಹನೀನಾಥಾದಿಕರ ಹೆಸರಿನಲ್ಲಿ ಪ್ರಸಿದ್ಧವಾಗಿರುವ ಗ್ರಂಥಗಳಿಂದ ಹಾಗೂ ಮುಕುಂದ ರಾಜ, ಜ್ಞಾನೇಶ್ವರಾದಿ ಸಂತರ ಕಾವ್ಯಗಳಿಂದ ತಿಳಿದು ಬರುತ್ತದೆ.

ಕರ್ನಾಟಕದಲ್ಲಿ ನಾಥಪಂಥಕ್ಕೆ ಹೆಚ್ಚು ನೆರವು ಲಭ್ಯವಾಗಲೇ ಇಲ್ಲ. ಅಂತೆಯೇ ಜೈನಧರ್ಮವು ಕರ್ನಾಟಕ ಮತ್ತು ಮಹಾರಾಷ್ಟ್ರಗಳೆರಡರಿಂದಲೂ ಎತ್ತಂಗಡಿಯಾದುದು ಹೇಗೆ ಎಂಬುದನ್ನು ಈಗ ನೋಡೋಣ. ಶಕಕರ್ತ ಚಾಲುಕ್ಯ ವಿಕ್ರಮನ ರಾಜಾಸ್ಥಾನದಲ್ಲಿ ಶೈವಧರ್ಮಕ್ಕೆ, ಪ್ರಾಧಾನ್ಯ ಹೆಚ್ಚಾಯಿತು; ಕಾಳಾಮುಖರ ದೊಡ್ಡಸ್ತಿಕೆಯು ಹೆಚ್ಚಾದಂತೆ ಅವರು ಶಂಕರರ ಮಾಯಾದ್ವೈತವನ್ನು ವಿರೋಧಿಸಿ ಶಕ್ತಿವಿಶಿಷ್ಟಾದ್ವೈತವನ್ನು ಪ್ರತಿಪಾದಿಸಿದರು. ಈ ಕಾಳಾಮುಖರಲ್ಲಿ ಬಹಳಷ್ಟು ಮಂದಿ ಕಾಶ್ಮೀರಿ ಪಂಡಿತರಿದ್ದರು. ದಕ್ಷಿಣದಲ್ಲಿ ಹೊಯ್ಸಳ ಯಾದವರ ರಾಜ್ಯದಲ್ಲಿ ರಾಮಾನು

ಜಾಚಾರ್ಯರು ತಮ್ಮ ಶ್ರೀವೈಷ್ಣವ ಮತವನ್ನು ಪ್ರತಿಪಾದಿಸುತ್ತಿದ್ದರು. ಅಲ್ಲದೆ ವಿಷ್ಣುವರ್ಧನನು ಜೈನಧರ್ಮವನ್ನು ಬಿಟ್ಟುಕೊಟ್ಟ ಕಾರಣ ಅದರ ಪರಮ ಪ್ರತಿಷ್ಠೆಗೂ ಭಂಗವುಂಟಾಯಿತು. ಏಕಾಂತ ರಾಮಯ್ಯ, ಸಿದ್ಧರಾಮ, ಮಹಾದೇವಿಯಕ್ಕ, ಬಸವೇಶ್ವರ, ಚೆನ್ನಬಸವ, ಮಾಯಿದೇವ, ಯು(ಮು)ಕ್ತಾಯಕ್ಕ, ಅಲ್ಲಮಪ್ರಭು ಮುಂತಾದ ವೀರಶೈವ ಭಕ್ತ-ಭಕ್ತೆಯರು ಒಟ್ಟಾಗಿ ಜೈನಧರ್ಮವನ್ನು ಸಂಪೂರ್ಣವಾಗಿ ಅಲುಗಾಡಿಸಿ ಬಿಟ್ಟರು.

ಈ ಹೊತ್ತಿನಲ್ಲಿ ಜೈನರೇನು ಮಾಡುತ್ತಿದ್ದರೆಂಬುದನ್ನು ನೋಡೋಣ. ಪಂಪ ಕವಿಯ ಪ್ರತಿ ಅವತಾರ ಎಂಬಂತೆ ಅಭಿನವಪಂಪ ನಾಗಚಂದ್ರನು ಬರೆದ ಕಾವ್ಯಗಳೆರಡೂ ಶಾಂತ ರಸದ್ದಾಗಿದ್ದವು. ಜೈನಧರ್ಮಕ್ಕೆ ರಾಜಾಶ್ರಯವು ಕ್ರಮೇಣ ಕಡಿಮೆಯಾಗ ತೊಡಗಿದುದರ ಲಕ್ಷಣವೂ ಇದರಿಂದ ಸ್ಪಷ್ಟವಾಗುತ್ತದೆ. ಜೈನ ಕವಿಗಳಾದ ಬ್ರಹ್ಮಶಿವ, ವೃತ್ತವಿಲಾಸರು ಶಾಂತ ಹಾಗೂ ವೀರರಸಗಳನ್ನು ಒತ್ತಟ್ಟಿಗಿಟ್ಟು ಹಾಸ್ಯರಸದಲ್ಲಿ ಕಾವ್ಯವನ್ನು ಬರೆಯಲಾರಂಭಿಸಿದರು. ಆ ಮೂಲಕ ಶೈವ, ವೈಷ್ಣವ ಮತ್ತು ವೈದಿಕ ಧರ್ಮಗಳನ್ನು ಕುಚೋದ್ಯ ಮಾಡುವ ವ್ರತ ಕೈಗೊಂಡರು. ನಯಸೇನ ನೀತಿಯ ಮಾತುಗಳನ್ನು ಆಡುತ್ತಿದ್ದರೆ, ನೇಮಿಚಂದ್ರ ಮಹಾಕವಿಯಂತೂ ತನ್ನ ಕಾವ್ಯದಲ್ಲಿ ಶೃಂಗಾರ ರಸವನ್ನು ಅಭಿಷಿಕ್ತಗೊಳಿಸಿಬಿಟ್ಟ. ಜಗದ್ದಳ ಸೋಮನಾಥನು ವೈದ್ಯ ಗ್ರಂಥವನ್ನು ಬರೆದನು. ಎರಡನೆಯ ಚಾವುಂಡರಾಯನು ಸಾಮುದ್ರಿಕ, ಉತ್ತರ ಕ್ರಿಯೆಗಳಂಥ ಲೋಕೋಪಕಾರ ಕಲಾ ವಿಷಯಗಳ ಬಗ್ಗೆ ಗ್ರಂಥ ಬರೆಯಲು ಯೋಜಿಸಿದ. ಎರಡನೆಯ ನಾಗವರ್ಮನು ಒತ್ತು ನೀಡಿದ್ದು ಅಲಂಕಾರ, ಛಂದಸ್ಸು, ವ್ಯಾಕರಣ ಮತ್ತು ನಿಘಂಟು ಇತ್ಯಾದಿ ಶಬ್ದಾರ್ಥ ಸಾಹಿತ್ಯಗಳ ಮೇಲೆ. ಕೀರ್ತಿವರ್ಮನು ರಚಿಸಿದ್ದು ಗೋವೈದ್ಯದ ಕೃತಿ. ೧೧೨೦ರ ಕಾಲದ ರಾಜಾದಿತ್ಯನು ೬-೭ ಗ್ರಂಥಗಳನ್ನು ಬರೆದನಾದರೂ ಅವೆಲ್ಲವೂ ಗಣಿತ ಶಾಸ್ತ್ರವನ್ನು ಕುರಿತುವಾಗಿದ್ದವು. ಇನ್ನು ಎರಡನೆಯ ಕರ್ಣಾಪಾರ್ಯನು ಬರೆಯಲು ಸಾಧ್ಯವಾಗಿದ್ದು ನೇಮಿನಾಥ ಪುರಾಣವನ್ನು ಮಾತ್ರ. ಒಟ್ಟಾರೆ ಈ ಕಾಲದಲ್ಲಿ ಜೈನರು ಲೌಕಿಕ ಇತಿಹಾಸ ಕಾವ್ಯಗಳನ್ನು ರಚಿಸಲೇ ಇಲ್ಲ.

ಜೈನರ ಈ ವಾಙ್ಮಯದ ಸ್ವರೂಪ ಮೌಲ್ಯಾತ್ಮಕವಾಗಿ ಕೆಳದರ್ಜೆಯದ್ದು ಎಂಬರ್ಥವಲ್ಲ. ಆದರೆ ಅವರ ರಾಜಕೀಯ ಮಹತ್ವ ಕಡಿಮೆಯಾಗಿತ್ತು ಮತ್ತು ಮುಖ್ಯವಾಗಿ ಅದರ ಧಾರ್ಮಿಕ ಮಹತ್ವವು ಇಳಿಮುಖವಾಗುತ್ತಿರುವ ಕಾಲವು ಬಂದಿತ್ತು. ಇದಕ್ಕೆ ವಿರುದ್ಧವಾಗಿ ಚಾಲುಕ್ಯರ ವಿಷಯದಲ್ಲಿ ಕನ್ನಡ ಕಾವ್ಯ ರೂಪದಲ್ಲಿ ಬ್ರಾಹ್ಮಣ ಕವಿಗಳು ಬರೆದಿರುವ ನೂರಾರು ಶಾಸನ ಕಾವ್ಯಗಳು ಅವರ ಔನ್ನತ್ಯದ ಕಾಲವನ್ನು ತೋರ್ಪಡಿಸುತ್ತವೆ. ಅಪರಾರ್ಕರು ಕೊಂಕಣದಲ್ಲಿ ಮತ್ತು ವಿಜ್ಞಾನೇಶ್ವರರು ಕರ್ನಾಟಕದಲ್ಲಿ ಸ್ಮೃತಿಗಳಿಗೆ ಟೀಕೆಗಳನ್ನು ಬರೆದು ಅವುಗಳಿಗೆ ಮಹತ್ವದ ನೆಲೆಯನ್ನು ರೂಪಿಸುವ ಪ್ರಯತ್ನ ಮಾಡಿದ್ದರು. ಆದರೆ ಆ ಕಾಲದಲ್ಲಿ ಇತರೆಲ್ಲದಕ್ಕಿಂತಲೂ ವೀರಶೈವ ಧಾರ್ಮಿಕ ಚಳವಳಿಯು ಹೆಚ್ಚು ಶ್ರೇಷ್ಠವಾದುದೆಂದು ನಿರ್ಣಯಿತವಾಗಿತ್ತು. ವಚನಗಳು, ಗೀತೆ, ಸಂವಾದ, ಪಂಚೀಕರಣ ಜ್ಞಾನಬೋಧಕ ವೇದಾಂತ ಗ್ರಂಥಗಳು ವೀರಶೈವ ಲಿಂಗಾಯತರಿಂದ ವಿಪುಲವಾಗಿ ಸೃಷ್ಟಿಯಾದವು. ಈ ಮುನ್ನ ಜೈನ ಪಂಡಿತರು ತಿರಸ್ಕರಿಸಿದ

ಅಥವಾ ಕಡಿಮೆ ಮಹತ್ವ ನೀಡಿದ್ದ ಜನಪದ ಕಾವ್ಯ ಪ್ರಕಾರವನ್ನೂ ಇವರು ಕೈಗೆತ್ತಿಕೊಂಡರು. ರೂಢ ಭಾಷೆಯನ್ನು ಗ್ರಂಥಭಾಷೆಯ ಮಟ್ಟಕ್ಕೇರಿಸಿ, ಗೇಯ ವೃತ್ತಗಳನ್ನು ಕಾವ್ಯದಲ್ಲಿ ತಂದರು. ಗದ್ಯದಲ್ಲಿ ಬಾಣನ ಕಾದಂಬರಿಯಿಂದ ಪ್ರವೃತ್ತವಾದ ಅರಣ್ಯದಂಥ ಅತಿಶಯವಾದ ಶೈಲಿಯನ್ನು ಕೈಬಿಟ್ಟು ಉಪವನವಾಸಿಯಂಥ ರಮ್ಯವೂ ಸ್ವತಂತ್ರವೂ ಆದ ಶೈಲಿಯೊಂದನ್ನು ಉಪಯೋಗಿಸಿದರು. ರಾಜಾಶ್ರಯವನ್ನು ಹಿಡಿಯದೆ ಲೋಕಾಶ್ರಯವನ್ನು ಅವಲಂಬಿಸಿದರು. ಶ್ರೀಶೈಲದಿಂದ ಹಿಡಿದು ವೆಂಕಟಾಚಲದವರೆಗಿನ ಪ್ರಾಂತ್ಯದಲ್ಲಿ ಇವರು ಒಂದೇ ಪ್ರವೃತ್ತಿಯ ವಾಣಿಯನ್ನು ಬಿಂಬಿಸಿದರು. ಕಲ್ಯಾಣ, ಲಕ್ಷ್ಮೇಶ್ವರ, ಸೋಲಾಪುರ, ಬನವಾಸಿ, ಪಂಪಾ, ದ್ವಾರಸಮುದ್ರ-ಇವೇ ಮೊದಲಾದ ಸ್ಥಳಗಳಲ್ಲಿ ಅನುಭವ ಗೋಷ್ಠಿ ಮತ್ತು ಅನುಭವ ಮಂಟಪಗಳನ್ನು ಸ್ಥಾಪಿಸಿದ್ದರಿಂದ ಆಧ್ಯಾತ್ಮಿಕ ಜೀವನಕ್ಕೆ ಹೆಚ್ಚಿನ ಮಹತ್ವ ಬಂದಿತು. ಸ್ತ್ರೀಯರೂ ಸಹ ಈ ಸಂವಾದದಲ್ಲಿ ಭಾಗವಹಿಸಿದರು. ಮೂವತ್ತೂರು ಸ್ತ್ರೀಯರ 'ವಚನ' ಕೃತಿಗಳು ಉಪಲಬ್ಧವಾಗಿವೆ. ವೀರಶೈವರು ವರ್ಣಗಳ ಮಹತ್ವವನ್ನು ಕಡಿಮೆಗೊಳಿಸುವುದರ ಮೂಲಕ ಪಶುಯಜ್ಞದ ಧರ್ಮಕ್ಕೆ ಮತ್ತೊಮ್ಮೆ ಧಕ್ಕೆ ನೀಡಿದರು. ವೇಶ್ಯೆಯರು, ಮಹಾರರು, ಪತಿತ-ಪಾಪಿಗಳೇ ಮೊದಲಾದವರಿಗೆಲ್ಲ ಉನ್ನತಿಯ ಮಾರ್ಗವನ್ನು ತೋರಿಸಲಾಯಿತು ಇಲ್ಲಿ. 'ಕಾಯಕ'ಕ್ಕೇ ಇವರಲ್ಲಿ ಅತ್ಯಂತ ಹೆಚ್ಚಿನ ಮಹತ್ವ. ವೃತ್ತಿ-ಭೇದವನ್ನು ಮಾಡದಿದ್ದುದರಿಂದ ಧನಿಕರು ಮತ್ತು ಬಡವರ ನಡುವೆ ಸಮನಾದ ದೃಷ್ಟಿಯೊಂದು ಸಾಧ್ಯವಾಯಿತು. ಬಡವರಲ್ಲಿ ಸ್ವಾಭಿಮಾನವನ್ನು, ಶ್ರೀಮಂತರಲ್ಲಿ ವಿನಯವನ್ನು ಪ್ರವೃತ್ತಗೊಳಿಸಿದರು. ವರ್ಗಕಲಹಕ್ಕೆ ಇವರಲ್ಲಿ ಅವಕಾಶ ಸಾಧ್ಯವಾಗಲಿಲ್ಲ. ಒಟ್ಟಾರೆ ಹೇಳುವುದಾದರೆ, ಹಲವಾರು ಆತ್ಮಗಳ ದಿವ್ಯಜ್ಯೋತಿಯು ಅಂತರಿಕ್ಷದಲ್ಲಿ ಬೆಳಗುತ್ತಿರುವಂತಾಯಿತು ಈ ಕಾಲದ ಕರ್ನಾಟಕದಲ್ಲಿ, ಅಲ್ಲಮಪ್ರಭುವಿನ ಸಂವಾದವು ಇಂದಿಗೂ ಮುಮುಕ್ಷು ಜ್ಞಾನಿಗಳನ್ನು ತೃಪ್ತಿಗೊಳಿಸು ವಂತಹದ್ದಾಗಿದೆ. ಬಸವೇಶ್ವರನ ವಚನಗಳು ಭಕ್ತಿಯ ಗಂಗೆಯನ್ನು ಹರಿಸಿವೆ. ಅಭಂಗ ವಾಙ್ಮಯವು ಹೇಗೆ ಕೋಟಿ ಸಂಖ್ಯೆಯಿಂನ ಗಣಿಸಲ್ಪಡುವುದೋ ಹಾಗೆಯೇ ವಚನಗಳನ್ನು ಗಣಿಸಲಾಗುತ್ತಿರುವುದು ಕೋಟಿ ಸಂಖ್ಯೆಯಿಂದಲೇ. ಈ ಕಾಲದ ಕಾವ್ಯ ಲೇಖಕರಲ್ಲಿ ಪಂಪಾಪುರದ ಹರಿಹರ ಮತ್ತು ಅವನ ಸೋದರಳಿಯ ರಾಘವಾಂಕರು ಬಹು ಮುಖ್ಯವಾದ ಕೃತಿಗಳನ್ನು ರಚಿಸಿದ್ದಾರೆ. ಚಂಪೂಕಾವ್ಯದ ಪರಂಪರೆಯನ್ನು ಬಿಟ್ಟು ಜನಪದ ವರ್ಣಕ ಕಾವ್ಯಕ್ಕೆ ಪೂರ್ವಕಾವ್ಯದ ಲಕ್ಷಣಗಳನ್ನು ಸಂಸ್ಕಾರಗೊಳಿಸಿ ಗೇಯಮಯವಾದ ಷಟ್ಪದಿ ಕಾವ್ಯಗಳ ಪ್ರಗಾಥವನ್ನು ಆರಂಭಿಸಿದರು. ಈ ಕಾಲದಲ್ಲಿ ಕುಂತಳ ಅಂದರೆ ಕರ್ನಾಟಕ ಮತ್ತು ಕರ್ನಾಟಕ ಎಂದರೆ ಕುಂತಳ ದೇಶ ಎಂಬ ಸ್ಥಿತಿ ಇತ್ತು ಎಂಬುದು ಬಿಲ್ಹಣನ ವಿಕ್ರಮಾಂಕದೇವ ಚರಿತ ಮತ್ತು ಚಾಲುಕ್ಯ ಸೋಮೇಶ್ವರನ ಮಾನಸೋಲ್ಲಾಸ ಅಥವಾ ಅಭಿಲಕ್ಷಿತಾರ್ಥ ಚಿಂತಾಮಣಿ ಎಂಬ ಗ್ರಂಥಗಳಿಂದ ತಿಳಿದು ಬರುತ್ತದೆ. ಮಾನಸೋಲ್ಲಾಸದಲ್ಲಿ ಕುಂತಳ ಕರ್ನಾಟಕದ ಸ್ತ್ರೀಯರ ಮುಖ್ಯ ಲಕ್ಷಣವಾಗಿ ಕೂದಲನ್ನು ಉಂಗುರದಂತೆ ಸುತ್ತಿಕೊಳ್ಳುತ್ತಿದ್ದರೆ, ಮಹಾರಾಷ್ಟ್ರದಲ್ಲಿನ ಸ್ತ್ರೀಯರು ಉದ್ದಕ್ಕೆ ಇರುವಂತೆ ಧಾರಣ ಮಾಡುತ್ತಿದ್ದರೆಂದು ಹೇಳಲಾಗಿದೆ. ಇದೇ ಕೃತಿಯಲ್ಲಿ ಮರಾಠಿ ಮತ್ತು ಕನ್ನಡ ಗೀತೆಗಳನ್ನು ಕೊಟ್ಟಿರುವುದು ಗಮನೀಯ. ಆದರೆ

ಮರಾಠಿ ಉದಾಹರಣೆಗಿಂತ ಕನ್ನಡ ಉದಾಹರಣೆಯಲ್ಲಿನ ಭಾಷೆ ಹೆಚ್ಚು ಸಂಪನ್ನವಾಗಿರುವುದು. ಚಕ್ರಧರನ ಮಹಾನುಭಾವ ಸಂಪ್ರದಾಯದಿಂದಾಗಿ ಭಾಗವವತ ಪಂಥೀಯ ಬ್ರಾಹ್ಮಣರಲ್ಲಿ ನಿಷ್ಠಾವಂತ (ಕಟ್ಟರ್) ಮರಾಠಿತನವು ಗಟ್ಟಿಗೊಳ್ಳತೊಡಗಿತ್ತು. ಚಕ್ರಧರನು ಸ್ವತಃ ಗುರ್ಜರ ಬ್ರಾಹ್ಮಣನಾಗಿದ್ದನಾದರೂ ಅವನು ಪುರಸ್ಕರಿಸಿದ್ದು ಮಾತ್ರ ಮರಾಠಿಯನ್ನು. ಇದಕ್ಕೆ ಮುಖ್ಯ ಕಾರಣವೆಂದರೆ ಕರ್ನಾಟಕದಲ್ಲಿ ಜೈನರ ಪ್ರಾಬಲ್ಯ ಕಡಿಮೆಯಾಗಿ, ಗುರ್ಜರ (ಗುಜರಾತ್) ದೇಶದಲ್ಲಿ ಹೇಮಚಂದ್ರಾದಿ ಪಂಡಿತರ ಆಶ್ರಯದಲ್ಲಿ ಅದು ಹೆಚ್ಚಾಗತೊಡಗಿತು. ಅಲ್ಲದೆ ಆ ಹೊತ್ತಿನಲ್ಲಿ ಗುರ್ಜರ ಭಾಷೆಯೂ ಕೂಡ ಇದ್ದುದು ಬಾಲ್ಯಾವಸ್ಥೆಯಲ್ಲಿಯೇ. ಅಲ್ಲದೆ ಚಕ್ರಧರನಿಗೆ ಕನ್ನಡ ಮತ್ತು ತೆಲುಗು ಭಾಷೆಗಳ ಬಗ್ಗೆ ವಿಪರೀತ ವೈರಭಾವವಿತ್ತು. ಮಹಾನುಭಾವ ಪಂಥದಲ್ಲಿ ಮಹಾ ಪಂಡಿತರುಗಳೇ ಇದ್ದರು. ಹಾಗಾಗಿ ವಾಙ್ಮಯ ರಚನೆಗಾಗಿ ಗುರು ಭಕ್ತಿಯಷ್ಟೇ ಸಂಪ್ರದಾಯ ಪ್ರೀತಿಯಿಂದಲೂ ಮರಾಠಿಯ ಕೆಚ್ಚಲನ್ನು ಹಿಡಿದರು. ಇದೇ ಹೊತ್ತಿನಲ್ಲಿ ಮತ್ಸ್ಯೇಂದ್ರನಾಥನ ಶಿಷ್ಯನಾದ ಗೋರಖನಾಥನು ತನ್ನ ಸಂಪ್ರದಾಯವನ್ನು ವೃದ್ಧಿಗೊಳಿಸುವುದಕ್ಕಾಗಿ ಮಹಾರಾಷ್ಟ್ರ ಮತ್ತು ಮರಾಠಿ ಭಾಷೆಗಳನ್ನು ಆಶ್ರಯಿಸಿದ. ಇದಕ್ಕೆ ಕಾರಣ ಈ ಮುಂದಿನಂತಿರುವಂತೆ ಕಾಣುತ್ತದೆ. ಅಲ್ಲಮ ಪ್ರಭುವಿನ ಹೆಸರು ನಾಥ ಸಂಪ್ರದಾಯದ ಹಟಯೋಗ ಪ್ರದೀಪಿಕೆಯಲ್ಲಿನ ಪರಂಪರೆಯಲ್ಲಿ ಬರುವುದು. ರೇವಣಸಿದ್ಧ ಅಥವಾ ಮರುಳಸಿದ್ಧ ಎಂಬ ವೀರಶೈವ ಲಿಂಗಾಯತ ಧರ್ಮಪ್ರವರ್ತಕ ಮಹಾಪುರುಷನನ್ನು ಪರಿಗಣಿಸಿರುವುದು ನವನಾಥ ಪಂಥದಲ್ಲಿ. ಅಲ್ಲಮ ಪ್ರಭುವು ತನ್ನ ಗುರುವನ್ನು ಅನಿಮಿಷ ದೇವನೆಂದು ಹೇಳಿದ್ದಾನೆ. ಆತ ಮತ್ಸ್ಯೇಂದ್ರನಾಥನಿದ್ದರಬೇಕು ಎಂಬ ವಾದವುಂಟು. ಇದಕ್ಕೆ ಕಾರಣವಿದೆ. ಅನಿಮಿಷ ಎಂದರೆ ಮತ್ಸ್ಯ. ಅಲ್ಲಮ ಮತ್ಸ್ಯೇಂದ್ರನ ಪಂಥದಲ್ಲಿದ್ದ. ಅಷ್ಟೇ ಅಲ್ಲ, ಆತ ಗೋರಖನಾಥನಿಗೆ ಸಮಕಾಲೀನ. ಗೋರಖನಾಥ ಮತ್ತು ಅಲ್ಲಮನ ನಡುವೆ ವಾದ-ಸಂವಾದ ನಡೆದು ಗೋರಖನಾಥ ಪರಾಜಿತನಾದ ಅದರಲ್ಲಿ. ಗೋರಖನಾಥನು ಲಿಂಗಮಹಾನುಭಾವದಲ್ಲಿ ಕೆಲವಾರು ದಿವಸ ಕಳೆದನು. ಕನ್ನಡದಲ್ಲಿ ವೀರಶೈವರ ರೀತಿಯಲ್ಲಿ ವಚನಗಳನ್ನು ರಚಿಸಿದ. ಅವನ ವಚನಗಳು ಉಪಲಬ್ಧವಾಗಿರುವುವು. ಈಗ ಸಿಕ್ಕಿರುವ ಗೋರಖನಾಥನ ಮರಾಠಿ ವಾಙ್ಮಯದಲ್ಲಿ ಆತ ಆತ್ಮವನ್ನು 'ಲಿಂಗ' ಎಂಬ ಸಂಜ್ಞೆಯಲ್ಲಿ ಮೇಲಿಂದ ಮೇಲೆ ಹೇಳಿರುವನು. ಗೋರಖನಾಥನು ಮತ್ಸ್ಯೇಂದ್ರನ ಸಾಕ್ಷಾತ್ ಶಿಷ್ಯ.

ಅಲ್ಲಮನಿಗೆ ಅನಿಮಿಷ ಗುರುವಿನಿಂದ ಸಾಕ್ಷಾತ್ ಉಪದೇಶವೇನೂ ಆಗಿರಲಿಲ್ಲ. ತನ್ನ ದೇಹವಿಡುವ ಕೊನೆಯ ಹೊತ್ತಿನಲ್ಲಿ ಅನಿಮಿಷನ ನಂಟು ಅಲ್ಲಮನಿಗೆ ದೊರೆತದ್ದು. ಅನಿಮಿಷನು ಆಗ ಅಲ್ಲಮನಿಗೆ ಲಿಂಗವನ್ನು ಕೊಟ್ಟ, ಇದೇ ದೀಕ್ಷೆ. 'ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಸ್ತುಚ್ಛಿನ್ನಸಂಶಯಾಃ' ಈ ಪ್ರಮಾಣದ್ದೇ ಉಪದೇಶ. ತತ್ಕಾಲದಲ್ಲೇ ದೇಹವನ್ನಿಟ್ಟ ಅನಿಮೇಷ. ಮುಂದೆ ಅಲ್ಲಮಪ್ರಭು ಕರ್ನಾಟಕಾದ್ಯಂತ ತಿರುಗಾಡಿದ. ಮೂಲತಃ ಬನವಾಸಿಯ ಕಡೆಯ ಕನ್ನಡ ವ್ಯಕ್ತಿಯಾಗಿದ್ದನಾತ. ನಿಷ್ಠಾವಂತ ಕನ್ನಡಿಗರು ವೀರಶೈವ ಮತೋದ್ಧಾರಕರೂ ಆದ ಬಸವೇಶ್ವರಾದಿ ಶರಣ ಸಮುದಾಯದೊಂದಿಗೆ ಕಲಚೂರಿಗಳ ರಾಜಧಾನಿ ಕಲ್ಯಾಣದಲ್ಲಿ

ಶೂನ್ಯ ಸಿಂಹಾಸನವನ್ನು ಸಂಸ್ಥಾಪಿಸಿದ. ಶಿವಾನುಭವ ಮಂಟಪವನ್ನು ಸ್ಥಾಪಿಸಿದುದಲ್ಲದೆ, ಅಧ್ಯಾತ್ಮ ಜೀವನದಲ್ಲಿ ಸ್ಫೂರ್ತಿಯನ್ನುಂಟು ಮಾಡಿದನು. ಅಲ್ಲಮನು ಗೋರಖನಾಥನನ್ನು ಸೋಲಿಸಿರಲಿ, ಬಿಡಲಿ ಗೋರಖನಾಥನು ಮಾತ್ರ ಅಲ್ಲಮನ ಪ್ರಭಾವಶಾಲಿ ಚರಿತ್ರೆಯಿಂದ ಬೋಧಪ್ರದನಾದುದು ವಿದಿತ. ಕರ್ನಾಟಕಕ್ಕೆ ಹತ್ತಿಕೊಂಡಿರುವ ಮಹಾರಾಷ್ಟ್ರದಲ್ಲಿ ಮರಾಠಿಯ ಕೆಚ್ಚಲನ್ನು ಹಿಡಿದನು ಆತ. ನಿಷ್ಠಾವಂತ ಶೈವರ ವಿರೋಧಿ ಆದರೆ ಹರಿ ಮತ್ತು ಹರರು ಸಮಾನರೆಂದು ಒಪ್ಪಿದರೂ ವಿಷ್ಣುವನ್ನೇ ಹೆಚ್ಚು ಒಪ್ಪಿಕೊಂಡಿರುವ ಭಾಗವತ ಮತಕ್ಕೆ ಸಹಜ ವಾಗಿಯೇ ಬೆಂಬಲಿಸಿದ್ದಲ್ಲದೆ, ಅಲ್ಲಿ ಗುರು ಸಂಪ್ರದಾಯವನ್ನು ರೂಢಿಗೊಳಿಸಿದ. ವೀರಶೈವ ಹಟರಾಜಯೋಗಾದಿಗಳಲ್ಲಿ ಹೆಚ್ಚು ವಿಶ್ವಾಸವಿರಲಿಲ್ಲ, ಆದರೆ ಅದರಿಂದ ಬರುವ ಅನುಭವ ಸೂಕ್ಷ್ಮ ಅಥವಾ ಕಾರಣಿಕಗಳನ್ನು ಒಪ್ಪುತ್ತಿದ್ದನು. ಅಧ್ಯಾತ್ಮ ವಿಚಾರಧೀರ ಅಲ್ಲಮ ಪ್ರಭುವಿ ನೊಂದಿಗೆ ನೆನಪಾಗುವವನು ಮಹಾನುಭಾವ ಚಕ್ರಧರನ ಗುರು ಗುಂಡಮಪ್ರಭು. ಈ ಗುಂಡಮ ಪ್ರಭುವಿನ ಶಿಷ್ಯರಿಂದ ಪ್ರವರ್ತವಾದುದೇ ಮಹಾನುಭಾವ ಪಂಥ ಎನ್ನಲಾಗಿದೆ. ಮಹಾನುಭಾವ ಪಂಥವೂ ಸಹ ವೀರಶೈವದಂತೆಯೇ ಸಂನ್ಯಾಸಾಚಾರ ಪ್ರಮುಖವಾದುದು. ಸ್ತ್ರೀಯರನ್ನೂ ಈ ಪಂಥದಲ್ಲಿ ಸಮಾವೇಶಗೊಳಿಸಿಕೊಳ್ಳಲಾಗಿತ್ತು. ಮಹದಂಬೆಯ ಉದಾಹರಣೆಗಳಿವೆ ಮಹಾ ನುಭಾವರಲ್ಲಿ. ವೀರಶೈವರಲ್ಲಿ ನೀಲಾಂಬಾ, ಗಂಗಾಂಬಾ, ಮಹಾದೇವಿಯಕ್ಕ, ಮುಕ್ತಾಯಕ್ಕ, ರಾಮವ್ವ, ಕಾಳವ್ವ, ಅಕ್ಕನಾಗಮ್ಮ, ಸತ್ಯಕ್ಕ ಇತ್ಯಾದಿ ೨೨ ಶರಣೆಯರು ವಚನಗಳನ್ನು ರಚಿಸಿದವ ರಾಗಿದ್ದಾರೆ. ವೀರಶೈವರಲ್ಲಿ (‘ಮಹಾನುಭಾವ’, ಅಂದರೆ ‘Mystic Experience’) ತೂರ್ಯಾತೀತ ಮಹಾನುಭಾವಕ್ಕೆ ಅತ್ಯಂತ ಹೆಚ್ಚಿನ ಮಹತ್ವ. ಮಹಾನುಭವವಿಲ್ಲದ ಯಾವುದೇ ಶರಣರಿಗೆ ಬಸವೇಶ್ವರ, ಅಲ್ಲಮಪ್ರಭು ಇತ್ಯಾದಿಗಳ ಮಹಾನುಭವ ಮಂಟಪದಲ್ಲಿ ಸ್ಥಾನ ವಿರಲಿಲ್ಲ. ಸಿದ್ಧರ ಪ್ರಭಾವ, ವೈಭವ ಈ ನೆಲೆಗಳಿಂದ ದಿಗಂಬರ ಜೈನರಲ್ಲಿಯೂ ‘ಮಹಾ ನುಭಾವ’ ಎಂಬ ಶಬ್ದವು ಪ್ರಚಲಿತದಲ್ಲಿತ್ತು. ಇಸ್ಲಾಂ ಧರ್ಮವು ಪ್ರಬಲವಾಗಿದ್ದ ಕಾಲದಲ್ಲಿ ಮಹಾನುಭಾವರಿಗೆ ಬಂದ ದುರವಸ್ಥೆಯೇ ವೀರಶೈವರಿಗೂ ಬಂದಿತು. ಅಲ್ಲದೆ ವೈದಿಕರಿಂದಲೂ ವಿರೋಧ. ಆದರೆ ಮಹಾನುಭಾವ ವಾಙ್ಮಯದಂತೆ ವೀರಶೈವ ವಾಙ್ಮಯವು ಗುಪ್ತಸುಪ್ತವಾಗ ಬೇಕಾಗಿ ಬರಲಿಲ್ಲ. ಮಾತ್ರವಲ್ಲ ಮಹಾನುಭಾವರು ಮಹಾರಾಷ್ಟ್ರದಿಂದಾಚೆ ಉತ್ತರದ ದಾರಿ ಹಿಡಿಯಬೇಕಾಗೂ ಬಂತು. ಆದರೆ ವೀರಶೈವರಿಗೆ ಕರ್ನಾಟಕವೇ ಕೇಂದ್ರಸ್ಥಾನ. ಮುಂದೆ ರಾಮಾನುಜರ ಚಳುವಳಿಯಿಂದಾಗಿ ಭಾಗವತ ಧರ್ಮಕ್ಕೆ ಹೆಚ್ಚು ಉತ್ತೇಜನ ವುಂಟಾಯಿತು. ಈ ಹೊತ್ತಿನಲ್ಲೇ ರುದ್ರಭಟ್ಟನು ಹೊಯ್ಸಳ ಯಾದವರ ಆಶ್ರಯದಲ್ಲಿದ್ದುಕೊಂಡು ‘ಜಗನ್ನಾಥ ವಿಜಯ’ವೆಂಬ ಮಹಾಕಾವ್ಯ ರಚಿಸಿದ. ಇದರಲ್ಲಿ ಕೃಷ್ಣಲೀಲೆಯನ್ನು ಉತ್ಕೃಷ್ಟವಾಗಿ ಬಣ್ಣಿ ಸಲಾಗಿದೆ. ಇದು ಮಾಯಾದ್ವೈತಕ್ಕೆ ಪುನಃ ಜಬರ್ ದಸ್ತಾದ ವಿರೋಧವು ಉಂಟಾಗಲು ಕಾರಣ ವಾಯಿತು. ಈ ಎಲ್ಲದರ ಪರಿಣಾಮವೆಂದರೆ, ಉದಯೋನ್ಮುಖ ಮಹಾರಾಷ್ಟ್ರದಲ್ಲಿ ಮರಾಠಿ ಭಾಷೆಗೆ ಹೆಚ್ಚು ಪ್ರಚೋದನೆ ಉಂಟಾಯಿತು. ವೀರಶೈವರ ಚಳವಳಿಯಿಂದಾಗಿ ಒಂದೆಡೆ ಜೈನಧರ್ಮದೊಂದಿಗೆ ಮಾರಣಾಂತಿಕವಾದ ಜಟಾಪಟಿ ಉಂಟಾದರೆ, ಮತ್ತೊಂದೆಡೆ ಶಂಕರಾ

ಚಾರ್ಯರ ಮತಕ್ಕೆ ಕರ್ನಾಟಕದಲ್ಲಿ ಮತ್ತೆ ಮಾನ್ಯತೆ ದೊರೆಯಲಿಲ್ಲ. ಹೊಯ್ಸಳ ನರಸಿಂಹನ ಮಗ ಎರಡನೆಯ ಬಲ್ಲಾಳನು ಚಾಲುಕ್ಯ ಕಲಚೂರಿಗಳ ರಾಜ್ಯಕ್ಕೆ ಸೇರಿದ ಪುಣೆಯವರೆಗಿನ ಪ್ರಾಂತ್ಯಗಳನ್ನೆಲ್ಲ ಆಕ್ರಮಿಸಿದ. ಮುಂದೆ ಪುಣೆಯು ಈ ಬಲ್ಲಾಳನ ಮಗ ಜೈತ್ರಪಾಲನೆಂಬ ವೈಸರಾಯನ ಮುಖ್ಯ ನೆಲೆಯಾಗಿ ಬಿಟ್ಟಿತು. ಆತ ಮುಖ್ಯವಾಗಿ ವೇದಾಂತಿಯಾಗಿದ್ದ. ಅನುಭವದ ಹಸಿವು ಆತನಿಗೆ ಇನ್ನೂ ಹೆಚ್ಚಾಗಲು, ಮುಕುಂದರಾಜ ತನ್ನ ವಿವೇಕಸಿಂಧುವಿನ ಮೂಲಕ ನೀಗಿಸಿದ ಆ ಹಸಿವನ್ನು.

ಹೊಯ್ಸಳ ಯಾದವರಲ್ಲಿ ಮರಾಠ ಜನರು ರಾಜ ಶಿಕ್ಷಕರಾಗಿದ್ದಿರಬೇಕು. ಎಂತಲೇ 'ಜಾ, ಊಠ್, ತೂಂ ಬೈಟ್, ಯೇ' (ಹೋಗು, ಏಳು, ನೀನು ಕುಳಿತುಕೋ, ಬಾ) ಎಂಬ ಶಬ್ದಗಳನ್ನು ಅವರು ಬಳಸುತ್ತಿದ್ದರೆಂದು ಹೇಳಲಾಗಿದೆ-ಯಾದವ ಕಾಲೀನ ಕನ್ನಡ ಕಾವ್ಯವೊಂದರಲ್ಲಿ. ಜೈತ್ರ ಪಾಲನಿಗೆ ಹೆಚ್ಚು ಕಡಿಮೆ ಮೊದಲಿನಿಂದಲೇ ಮರಾಠಿ ಮಾತನಾಡಲು ಬರುತ್ತಿದ್ದಿರಬಹುದು. ಅಲ್ಲದೆ ಅವನಿಗೆ ಶಂಕರಾದ್ವೈತವು ಪ್ರಿಯವಾದುದಾಗಿರಬೇಕು. ಆದರೆ ಪೂರ್ವ ಪ್ರತಿಷ್ಠಿತ ಜೈನ ಧರ್ಮ, ರಾಜ ಪ್ರತಿಷ್ಠಿತ ರಾಮಾನುಜ ಶ್ರೀ ವೈಷ್ಣವ ಧರ್ಮ ಮತ್ತು ಉತ್ಕರ್ಷಾವಸ್ಥೆಯ ವೀರಶೈವ ಧರ್ಮ ಇವುಗಳ ತಿಕ್ಕಾಟದಲ್ಲಿ ಜೈತ್ರಪಾಲನಿಗೆ ಸಿಗಬೇಕಾದ ಅವಕಾಶವೂ ಸಿಗಲಿಲ್ಲ. ನಾಥ ಸಂಪ್ರದಾಯದ ಅದ್ವೈತಿಯಾದ ಮುಕುಂದರಾಜನು ಆ ಕಾರ್ಯವನ್ನು ಮಾಡಿದ. ಮರಾಠಿ ವಾಙ್ಮಯ ಮುಕುಂದರಾಜನಿಗಿಂತ ಪ್ರಾಚೀನವಾದುದಾಗಿರಬೇಕು. ಆದರೆ ಬಹಳ ಪ್ರಾಚೀನವಂತೂ ಅಲ್ಲ. ಇದಕ್ಕೆ ಕಾರಣಗಳು ಇಲ್ಲದಿಲ್ಲ. ಮೊದಲ ಕಾರಣ ಮುಕ್ತೇಶ್ವರನ ಪೂರ್ವದ್ದೆನ್ನಲಾದ ಶಿಲಾಶಾಸನಗಳು ದೊರೆತಿದ್ದು, ಅವು ಮರಾಠಿಯ ಪ್ರಾಥಮಿಕ ಅವಸ್ಥೆಯವಾಗಿ ಕಾಣುತ್ತವೆ. ಕನ್ನಡ ಮತ್ತು ಸಂಸ್ಕೃತ ಶಿಲಾಶಾಸನಗಳು ಅಥವಾ ತಾಮ್ರ ಪಟಗಳಲ್ಲಿನ ಭಾಷೆಯು ಕೆಲವು ವೇಳೆ ವಿಶಿಷ್ಟವಾದುದಾಗಿದೆ. ಅದಕ್ಕಿಂತಲೂ ಹೆಚ್ಚಾಗಿ ಅಲ್ಲಿ ಖಂಡ ಕಾವ್ಯಗಳೂ ಸಿಕ್ಕಿರುವುದುಂಟು. ಅಂಥವು ಮರಾಠಿಯಲ್ಲಿ ಸಿಕ್ಕಿಲ್ಲ. ಎರಡನೆಯ ಕಾರಣವೆಂದರೆ ಮರಾಠಿ ಭಾಷೆಗೆ ರಾಜಾಶ್ರಯವಂತೂ ಎಂದೂ ಇರಲೇ ಇಲ್ಲ. ಅದು ಎಂದಿಗೂ ರಾಜರ ಭಾಷೆಯಾಗಿರಲಿಲ್ಲ, ಒಂದೊಮ್ಮೆ ರಾಜರ ಭಾಷೆಯಾಗಿದ್ದರೆ ಬಹಳ ಮೊದಲೇ ಮರಾಠಿ ಭಾಷೆಯಲ್ಲಿ ಕಾವ್ಯರಚನೆ ಆಗಿರಬೇಕಾಗಿತ್ತು. ಸದ್ಯಕ್ಕಂತೂ ಹಾಗೆ ಹೇಳುವಂತಹ ಯಾವುದೇ ಐತಿಹಾಸಿಕ ಪುರಾವೆಗಳು ಲಭ್ಯವಾಗಿಲ್ಲ. ಕನ್ನಡ ತೆಲುಗು ಮತ್ತು ತಮಿಳುಗಳಂಥ ದೇಶೀ ಭಾಷೆಗಳ ವಿಷಯದಲ್ಲಿ ಅಂಥವು ಹೇರಳವಾಗಿಯೇ ಸಿಕ್ಕಿವೆ. ಮುಕುಂದರಾಜನಿಗೂ ಪೂರ್ವ ಕಾಲದ ಶಿಲಾಶಾಸನಗಳು ಹಾಗೂ ವಾಙ್ಮಯವು ಮುಳುಗಿ ಹೋಗುವಂಥ ಸಂಕಷ್ಟವು ಮಹಾರಾಷ್ಟ್ರದ ಮೇಲೆ ಎಂದಾದರೂ ಬಂದಿರುವ ಬಗ್ಗೆಯಂತೂ ಇತಿಹಾಸವು ಉಲ್ಲೇಖಿಸುವುದಿಲ್ಲ. ಮೂರನೆಯ ಕಾರಣವೆಂದರೆ, ಮುಕುಂದರಾಜ, ಜ್ಞಾನೇಶ್ವರ ಅಥವಾ ಮಹಾನುಭಾವ ಸಾಹಿತಿಗಳಾರೂ ಮರಾಠಿ ವಾಙ್ಮಯದ ಪೂರ್ವಪರಂಪರೆಯ ಬಗ್ಗೆ ಏನನ್ನೂ ಹೇಳಿಲ್ಲ. ಮಾತ್ರವಲ್ಲ ಇದಕ್ಕೆ ಬದಲಾಗಿ ತಾವೇ ಆ ಭಾಷೆಯನ್ನು ನಾಮರೂಪಕ್ಕೆ ತಂದಿರುವುದೆಂಬ ಅಭಿಪ್ರಾಯವನ್ನು ಬಹಳ ಆವೇಶದಿಂದ ಹೇಳಿದ್ದಾರೆ. ಇದು ಸತ್ಯವಾದ ಸಂಗತಿಯೂ ಹೌದು.

ಕರ್ಮಠರಾದ ವೈದಿಕ ಬ್ರಾಹ್ಮಣರು ಈ ಮುನ್ನ ಮರಾಠಿಯನ್ನು ಅಸ್ಪೃಶ್ಯವಾಗಿಯೇ ಕಂಡಿದ್ದರು. ಅಲ್ಲದೆ ಸಮಾಜದಲ್ಲಿ ಅದನ್ನು ಬಳಸಲಾರಂಭಿಸಿದ ಮೇಲೆಯೂ ಅದನ್ನು ಬಹಿಷ್ಕರಿಸುವುದಕ್ಕೆ ಸಹ ಪ್ರಯತ್ನಿಸಿದ್ದರೆಂಬುದು ಗಮನೀಯ. ಜ್ಞಾನದೇವ, ಏಕನಾಥ ಮತ್ತು ತುಕಾರಾಮರಂಥ ಸಂತರ ಚರಿತ್ರೆಯಿಂದಲೂ ಸುಸ್ಪಷ್ಟವಾಗಿ ಕಾಣುವುದಾಗಿದೆ ಈ ಸಂಗತಿ. ಲೇಖಕ ವರ್ಗವು ಬಹಳ ಬೇಗ ಮರಾಠಿ ಭಾಷೆಯನ್ನು ಕೈಯಲ್ಲಿ ಹಿಡಿಯಲಿಲ್ಲ. ನಿಷ್ಠಾವಂತ ವೈದಿಕರು ಈ ಬಗ್ಗೆ ಮೃದುಭಾವ ಹೊಂದುವಲ್ಲಿಯೂ ಬಹಳ ದೀರ್ಘ ಕಾಲವೇ ಹಿಡಿಯಿತು.

ಈಗ ಮರಾಠಿಗೆ ಸಂಬಂಧಿಸಿದಂತೆ ಪ್ರಾಚೀನವೆಂದು ಗೊತ್ತುಪಡಿಸಿರುವ ಒಂದು ಅನುಮಾನವನ್ನು ಕುರಿತು ಚರ್ಚಿಸಬಹುದು. ಮುಕುಂದರಾಜನಂಥವನ ಕಾವ್ಯ ಉತ್ಪನ್ನವಾಗುವ ಅಥವಾ ಜ್ಞಾನೇಶ್ವರನಂಥ ಕಾವ್ಯ ಹುಟ್ಟುವುದಕ್ಕೆ ೨೦೦-೩೦೦ ವರುಷಗಳಿಗೆ ಮುಂಚಿನಿಂದಲೇ ವಾಙ್ಮಯ ನಿರ್ಮಾಣವಾಗಿರಬೇಕು ಎಂಬ ತರ್ಕಸರಣಿಯುಂಟು. ಕನ್ನಡ ವಾಙ್ಮಯದ ಪ್ರಾಚೀನ ತರತಮವನ್ನು ನಿಗದಿತವಾಗಿ ಹೇಳುವಲ್ಲಿಯೂ ಇಂಥ ತರ್ಕಸರಣಿಯನ್ನು ಅವಲಂಬಿಸಲಾಗಿದೆ. ಆದರೆ ಈ ತರ್ಕ ಪೊಳ್ಳಾದುದಾಗಿದೆ. ಇಂಗ್ಲಿಶ್ ವಿದ್ಯಾಭ್ಯಾಸದ ವಾಙ್ಮಯವು ಮರಾಠಿಯಲ್ಲಿ ಕೇವಲ ನೂರು ವರುಷಗಳ ಒಳಗೇ ನಿರ್ಮಾಣವಾಗಲಿಲ್ಲವೆ? ಭಾಷಾಭಿಮಾನಿ ಜನತೆ, ಭಾಷಾಭಿಮಾನಿ ಕವಿ ಮತ್ತು ಸಾಹಿತ್ಯ ಪ್ರಪೂರ್ಣದಂಥ ನಿಕಟವರ್ತಿ ಭಾಷೆಯಾಗಿದ್ದರೆ ಉತ್ತಮ ಕಾವ್ಯ ಬರೆಯಲು ಶತಕಗಳು ಬೇಕಾಗುವುದಿಲ್ಲ. ಕ್ರೈಸ್ತ ಕವಿ ಸ್ಟೀಫನ್ನನು ಕೊಂಕಣಿಯಲ್ಲಿ ಕಾವ್ಯ ಬರೆಯುವುದಕ್ಕೆ ಮರಾಠಿಯ ಆಸರೆಯು ಸಾಕಾಗಿತ್ತು. ಕರ್ನಾಟಕದಲ್ಲಿ ತುಳು, ಕೊಡಗು ಭಾಷೆಗಳಲ್ಲಿಯೂ ಅಂಥ ಪ್ರಯತ್ನ ನಡೆಯುತ್ತಿದೆ. ಮಹಾಕವಿಯ ನಿಶ್ಚಯವು ಈ ಮಾತೃಭಾಷೆಯ ಲಲಾಟ ಲೇಖವಾಗುವುದು. ಮರಾಠಿಯಲ್ಲಿ ಈ ಬರೆಹ ಸ್ವರೂಪದ ಶ್ರೇಯಸ್ಸು ಸದ್ಯಕ್ಕೆ ನಾಥ ಮತ್ತು ಮಹಾನುಭಾವ ಸಂಪ್ರದಾಯದ ಬ್ರಾಹ್ಮಣರಿಗೇ ಸಲ್ಲುತ್ತದೆ. ಇದಕ್ಕೂ ಮುನ್ನ ಕ್ಷೇವಣರು ಅಂದರೆ ದಿಗಂಬರ ಜೈನ ಬ್ರಾಹ್ಮಣರು ಇದಕ್ಕೆ ಪ್ರಯತ್ನಿಸಿದ್ದಿರಬೇಕು. ಆದರೆ ಹಾಗೆ ಹೇಳುವುದಕ್ಕೆ ಸಾಕಷ್ಟು ಪುರಾವೆಗಳಂತೂ ಇಲ್ಲ, 'ಒನಾಮಾಸೀಧಂ' ಮತ್ತು 'ಚಾವುಂಡರಾಯೇ ಕರವಿಯಲೇ' ಎಂಬ ವಾಙ್ಮಯ ವಿಶೇಷಗಳು ಆ ಕಾರ್ಯಕ್ಕೆ ಅವಶೇಷಗಳಾಗಿ ಕಂಡುಬರುತ್ತಿವೆ. ಒಟ್ಟಾರೆ ಹೇಳುವುದಾದರೆ ಚಾಲುಕ್ಯ-ಕಳಚೂರಿ ರಾಜ್ಯಗಳ ಭಾಗದ ವಿಷಯದಲ್ಲಿ ಸೇವುಣ ಯಾದವರು ಹಾಗೂ ಹೊಯ್ಸಳ ಯಾದವರಲ್ಲಿ ಯಾದವೀ ಕಲಹವು ಬೆಳೆಯಿತು. ದೇವಗಿರಿಯವರಿಗೆ ಮೊದಲು ಕನ್ನಡಿಗರ ಭೋಕ್ತೃವೇ ಇತ್ತು. ಅವರ ಕನ್ನಡ ಶಿಲಾಶಾಸನಗಳ ಭಾಷೆ ಮತ್ತು ವಿಚಾರ ಗೌರವ ಅಲ್ಲಿಂದ ಮುಂದೆ ಉಪಲಬ್ಧವಾದ ಮರಾಠಿ ಶಿಲಾಶಾಸನಗಳಲ್ಲಿ ಬಹಳ ಇಳಿಮುಖಗೊಳ್ಳುತ್ತಿದ್ದುದರ ಭಾವನೆ ಬರುತ್ತದೆ. ಅಂದರೆ ರಾಜಕಾರಣ ನಿಮಿತ್ತ ಬಹಮನಿ ರಾಜ್ಯದಂತೆಯೇ ಅವರ ಪ್ರತಿಷ್ಠಿತ ಕನ್ನಡದ ವಿರುದ್ಧ ಉದಯೋನ್ಮುಖ ಮರಾಠಿಯ ಕೈಹಿಡಿದರು. ದುರ್ಲಕ್ಷಿತ ಶಂಕರಾದ್ವೈತ ಮತವು ಮಹಾರಾಷ್ಟ್ರದಲ್ಲಿ ಮೊದಲು ನೆಲೆಸಿತು. ಪರಾಭೂತಗೊಂಡ ನಾಥಪಂಥವು ಮರಾಠಿಯಲ್ಲಿ ತನ್ನ ನೆಲೆಗಳನ್ನು ಸ್ಥಾಪಿಸಿತು. ಮಹಾನುಭಾವವು ಮರಾಠಿಯ ತೀವ್ರನಿಷ್ಠೆಯಿಂದ ಸಾಂಪ್ರದಾಯಿಕ ವೈದಿಕರ

ಮೇಲೆ ಜಯ ಸಾಧಿಸಿ ಶೈವ ಮಹಾನುಭಾವವನ್ನು ತಮ್ಮ ಭಾಗವತ ಮತ್ತು ವೈಷ್ಣವ ಮಹಾನು ಭಾವಗಳಿಂದ ತಡೆದು ನಿಲ್ಲಿಸಿತು. ಕರ್ನಾಟಕದಲ್ಲಿನ ಧಾರ್ಮಿಕ, ರಾಜಕೀಯ, ಸಾಮಾಜಿಕ ಪರಿಸ್ಥಿತಿಯ ಮರಾಠಿ ಭಾಷಾ ವಾಙ್ಮಯದ ಜನ್ಮಕಾಲವನ್ನು ಇನ್ನೂ ಹತ್ತಿರ ತಂದಿತು. ದುರ್ವಿನೀತ, ನೃಪತುಂಗ, ಕನ್ನರ, ಅರಿಕೇಸರಿ, ತೈಲಪ, ವಿಕ್ರಮಾದಿತ್ಯ, ಹರಿಹರ, ದೇವರಾಯ, ಕೃಷ್ಣರಾಜ, ಚಿಕ್ಕದೇವರಾಯ, ವಿಷ್ಣುವರ್ಧನ ಇವರು ಕನ್ನಡ ವಾಙ್ಮಯಕ್ಕೆ ಆಶ್ರಯದಾತರು. ಈ ಮಾಲಿಕೆಯಲ್ಲಿ ಸೇರುವ ಎರಡನೆಯ ಹೊಯ್ಸಳ ಬಲ್ಲಾಳ ಕುಮಾರನೇ ಮರಾಠಿಯ ಧ್ವಜವನ್ನು ಎತ್ತಿ ಹಿಡಿದಂತೆ ಕಾಣುತ್ತದೆ. ಮುಂದಿನ ನೂರು ವರ್ಷಗಳಲ್ಲಿ ಕರ್ನಾಟಕದಲ್ಲಿನ ಅಗ್ರಹಾರಗಳಲ್ಲೆಲ್ಲ ಮರಾಠಿ ಭಾಷಾ ಶಿಕ್ಷಣವನ್ನು ವಿದ್ಯಾಲಯಗಳಲ್ಲಿ ನೀಡಲಾಗುತ್ತಿತ್ತೆಂಬ ಪುರಾವೆಗಳು ಸಿಗುತ್ತವೆ-ಕನ್ನಡ ಶಿಲಾಶಾಸನ ಹಾಗೂ ಸಾಹಿತ್ಯದಲ್ಲಿ. ಇದಕ್ಕೆ ಮುಖ್ಯಕಾರಣವೆಂದರೆ-ದೇವಗಿರಿಕರರ ದರಬಾರಿನಲ್ಲಿ ಮರಾಠಿಗೆ ಹೆಚ್ಚಿನ ಮಾನ್ಯತೆ ದೊರೆತುದೇ ಆಗಿದೆ.

ಇನ್ನು ಮುಂದೆ ಸಂಕ್ಷಿಪ್ತವಾಗಿ ಕನ್ನಡ ವಾಙ್ಮಯದ ಮೂರನೆಯ ಯುಗದ ಇತಿಹಾಸವನ್ನು ನೀಡುತ್ತೇನೆ. ಈ ಯುಗವು ನಿಜವಾಗಿ ಕೊನೆಯಾಗುವುದು ವಿಜಯನಗರ ಸಂಸ್ಥಾನದ ಆರಂಭಕ್ಕೆ. ಆದರೆ ಇಲ್ಲಿ ಅದನ್ನು ಜ್ಞಾನೇಶ್ವರನ ಕಾಲಕ್ಕೆ ಅಂದರೆ ಕ್ರಿ.ಶ.೧೨೯೦ಕ್ಕೆ ನಿಲ್ಲಿಸುತ್ತೇನೆ. ಇದಕ್ಕೆ ಒಂದು ಕಾರಣವನ್ನು ಈ ಹಿಂದೆಯೇ ಹೇಳಲಾಗಿದೆ. ಎರಡನೆಯ ಕಾರಣವು ಸಂದರ್ಭಾನುಸಾರ ಮುಂದೆ ಬರುತ್ತದೆ. ವೀರಶೈವರ ಮತ್ತು ವೀರವೈಷ್ಣವರ ಚಳವಳಿಯಿಂದಾಗಿ ಜೈನರು ಪೂರ್ಣವಾಗಿ ಇಲ್ಲವಾಗಿರಲಿಲ್ಲ. ಸಾವಿರ ವರ್ಷ ಪ್ರತಿಷ್ಠಿತಗೊಂಡಿದ್ದ ಜೈನ ಧರ್ಮದ ಕುರುಹುಗಳು ವಟವೃಕ್ಷ ದಂತೆ ಅಪಾರವಾಗಿದ್ದವು. ಹೊಯ್ಸಳರು ವೈಷ್ಣವ ಧರ್ಮವನ್ನು ಸ್ವೀಕರಿಸಿದರೂ, ಜೈನ ಧರ್ಮವನ್ನು ಬಿಟ್ಟುಕೊಟ್ಟಿರಲಿಲ್ಲ. ಸೌಂದತ್ತಿಯ ರಟ್ಟರು ಮತ್ತು ಕಾರವಾರ, ಧಾರವಾಡ, ವಿಜಾಪುರ ಹಾಗೂ ಬೆಳಗಾವಿ ಪ್ರಾಂತ್ಯದಲ್ಲಿನ ಜೈನ ವೈಶ್ಯ ಧನಿಕರು ಮತ್ತು ಕ್ಷತ್ರಿಯ ಪಾಳೆಗಾರರು ಕನ್ನಡ-ಜೈನ-ವಾಙ್ಮಯಕ್ಕೆ ಪೂರ್ಣ ಬೆಂಬಲವಾಗಿದ್ದರು. ಲಕ್ಷ್ಮೇಶ್ವರದ ಆಚಣ್ಣ ಕವಿಯು 'ವರ್ಧಮಾನ ಪುರಾಣ' ರಚಿಸಿದನು. ಬನವಾಸಿ ಪ್ರಾಂತ್ಯದಲ್ಲಿನ ಕವಿ ಕಾಮನು 'ಶೃಂಗಾರ-ರತ್ನಾಕರ' ಎಂಬ ರಸ ವಿಷಯಕ ಗ್ರಂಥವನ್ನು ಬರೆದು ರಸೋತ್ಪತ್ತಿಯ ವಿಷಯವಾಗಿ ಹೊಸ ಮತವೊಂದನ್ನು ಪ್ರತಿಪಾದಿಸಿದನು. ಬಂಧುವರ್ಮನ 'ಹರಿವಂಶಾಭ್ಯುದಯ' ಮತ್ತು 'ಜೀವ ಸಂಬೋಧನ'; ದೇವಕವಿಯ 'ಕುಸುಮಾವಳಿ ಕಾದಂಬರಿ'; ಪಾರ್ಶ್ವಪಂಡಿತನ 'ಪಾರ್ಶ್ವನಾಥ ಪುರಾಣ'; ಅಗ್ಗಳನ 'ಚಂದ್ರಪ್ರಭ ಪುರಾಣ'; ಕಮಲಭವನ 'ಶಾಂತೀಶ್ವರ ಪುರಾಣ'; ಮಹಾಬಲ ಕವಿಯ 'ನೇಮಿನಾಥ ಪುರಾಣ'; ಮಾಘನಂದಿಯ 'ಶ್ರವಕಾಚಾರ'ವೆಂಬ ಗದ್ಯಗ್ರಂಥ; ಗುಣವರ್ಮನ 'ಪುಷ್ಪದಂತ ಪುರಾಣ'; ಬಾಲಚಂದ್ರನ 'ಉದ್ಯೋಗಸಾರ'-ಮುಂತಾದುವೆಲ್ಲ ಪೂರ್ವ ಪರಂಪರೆಯ ಕೃತಿಗಳು. ಅಲ್ಲದೆ ವೀರಶೈವರು ಪ್ರಾರಂಭಿಸಿದ ಷಟ್ಪದಿ ಮಾರ್ಗವನ್ನು ಅನುಸರಿಸಿ ಶಿಶುಮಾಯಣನು 'ಅಂಜ ಚರಿತ್ರೆ' ಮತ್ತು 'ತ್ರಿಪುರ ದಹನ'; ಕುಮುದೇಂದುವು 'ರಾಮಾಯಣ'- ಈ ಗೇಯ ಕಾವ್ಯಗಳನ್ನು ಬರೆದರು. 'ಮನ್ಮಥ ವಿಜಯ' ಅಥವಾ 'ಕಬ್ಬಿಗರ ಕಾವ' ಎಂಬ ಕಾವ್ಯವು ಹೊಯ್ಸಳ ಬಲ್ಲಾಳ ಮತ್ತು ಹಾನಗಲ್‌ನ ಕದಂಬ ಕಾಮರ ನಡುವಣ

ಯುದ್ಧವನ್ನು ಕಾಮದಹನ ಹಾಗೂ ಈಶ್ವರನ ಅರ್ಧನಾರೀಶ್ವರೀಕರಣದ ಹಿನ್ನೆಲೆಯಲ್ಲಿ ವರ್ಣಿಸಿದುದಾಗಿದೆ. ಕವಿಯು ಈ ಕಾವ್ಯದಲ್ಲಿ ಸಂಸ್ಕೃತ ಶಬ್ದಗಳಿಗೆಲ್ಲ ಕನ್ನಡದ ಮುದ್ರೆಯೊತ್ತಿ ದಾಖಲಿಸಿರುವುದು ವಿಶೇಷ. ಈ ಕಾವ್ಯದಲ್ಲಿ ಒಂದಾದರೂ ಸಂಸ್ಕೃತ ರೂಪದ ಶಬ್ದವು ದೊರೆಯುವುದಿಲ್ಲ. ಎರಡನೆಯ ಬಲ್ಲಾಳನ ಮಗ ನರಸಿಂಹನ ದರಬಾರಿನಲ್ಲಿ ಜನ್ನ ಅಥವಾ ಜನಾರ್ಧನ ಎಂಬ ಕವಿಚಕ್ರವರ್ತಿಯು ಗಣ್ಯಸ್ಥಾನ ಹೊಂದಿದ್ದ. ತನ್ನ 'ಅನಂತನಾಥ ಪುರಾಣ'ದಲ್ಲಿ ಆತ ಹೊಯ್ಸಳ ಮತ್ತು ಸೇವುಣರ ಯುದ್ಧದ ಪ್ರಸಂಗವನ್ನು ವರ್ಣಿಸಿದ್ದಾನೆ. ಅವನ 'ಯಶೋಧರ ಕಾವ್ಯ'ವು ವಾದಿರಾಜನ ಸಂಸ್ಕೃತ ಕಾವ್ಯದಿಂದ ಸರಸವಾಗಿಯೇ ಪುಷ್ಟಿಗೊಂಡಿದೆ. ಪ್ರೇಮದ ವಿಲಾಸ ಮತ್ತು ದುರ್ವಿಲಾಸದ ವರ್ಣನೆಯಲ್ಲಿ ಕೌಶಲವು ಮೆರೆದಿದೆ. ಅವನು ರಚಿಸಿದ ಶಿಲಾಶಾಸನಗಳು ಕಾವ್ಯಗಳೇ ಆಗಿವೆ ಎಂದು ಹೇಳುವ ಆವಶ್ಯಕತೆಯೇನೂ ಬರುವುದಿಲ್ಲ. ಅಲ್ಲದೆ ಜನ್ನನ ಮನೆತನವನ್ನು ಕುರಿತ ಸಂಗತಿಯು ಅತ್ಯಂತ ಮಹತ್ವವಾದುದು, ಅವರೆಲ್ಲ ಸಾಹಿತ್ಯ ಭಕ್ತರೇ ಆಗಿದ್ದರು. ಜನ್ನನ ತಂದೆ ಸುಮನೋಬಾಣ ಬಹುದೊಡ್ಡ ಕವಿ. 'ಕಾವ್ಯಾವಲೋಕನ', 'ಭಾಷಾಭೂಷಣ', 'ವಸ್ತುಕೇಶ', 'ಛಂದಃಶಾಸ್ತ್ರ' ಮುಂತಾದ ಸಾಹಿತ್ಯ ಶಾಸ್ತ್ರಗಳು ಒಂದೊಂದು ಅಧ್ಯಯನ ಯೋಗ್ಯವಾದಂಥ ಪ್ರಮಾಣಭೂತ ಕೃತಿಗಳನ್ನು ರಚಿಸಿದ ನಾಗವರ್ಮ ಜನ್ನನಿಗೆ ಗುರು. ಇಂದಿಗೂ ಈ ಗ್ರಂಥಗಳಿಗೆಲ್ಲ ಶ್ರೇಷ್ಠ ಸ್ಥಾನವುಂಟು. ಜನ್ನನ ಸೋದರಿಯ ಪತಿ ಮಲ್ಲಿಕಾರ್ಜುನನು ಕನ್ನಡ ಸುಭಾಷಿತಗಳನ್ನು ಸಂಗ್ರಹ ಮಾಡಿ ಕಾವ್ಯಧರ್ಮದ ಮೀಮಾಂಸಕನೆನಿಸಿದ್ದಾನೆ. ಜನ್ನನ ಸೋದರಿಯ ಮಗ ಕೇಶಿರಾಜನು ಪ್ರಖ್ಯಾತ ವ್ಯಾಕರಣಕಾರ. ಹೀಗೆ ಈ ಮನೆತನವು ಸಾಹಿತ್ಯ ಮಂಡಲವನ್ನೇ ಸ್ಥಾಪಿಸುವ ಮೂಲಕ ಕನ್ನಡ ಧ್ವಜವನ್ನು ಎತ್ತಿಹಿಡಿದಿದೆ.

ವೀರಶೈವ ಲಿಂಗಾಯತರು ವಾಙ್ಮಯ ನಿರ್ಮಿತಿಯನ್ನು ಚಾಲ್ತಿಯಲ್ಲಿಟ್ಟಿದ್ದರು. ಕೆಲವಾರು ಹಾಡುಗಳು, ಕೆಲವಾರು ವಚನಗಳು ಮತ್ತು ಪಾಲ್ಕುರಿಕೆ ಸೋಮನಾಥ ಎಂಬ ಆಂಧ್ರಕರ್ನಾಟಕ ಕವಿಯ ಆರು ಕನ್ನಡ ಗ್ರಂಥಗಳು ರಚನೆಗೊಂಡಿದ್ದವು. ಜೊತೆಗೆ ಸೋಮರಾಜನ 'ಉದ್ಭಟ ಕಾವ್ಯ'ವೂ ಬಂದಿತ್ತು. ಆದರೆ ಅವರ ಮುಖ್ಯ ಲಕ್ಷ್ಯವಿದ್ದುದು ವೀರಶೈವ ಸಮಾಜದ ಸಂಘಟನೆಯೆಡೆಗೆ. ಈ ಯುಗದಲ್ಲಿಯೇ ಕರ್ನಾಟಕದಲ್ಲಿ ಮಧ್ವಾಚಾರ್ಯರು ಬಂದರು. ದ್ವೈತ ಮತದ ಪುರಸ್ಕರ್ತರಾಗಿ ಆಚಾರ್ಯತ್ರಯರಲ್ಲಿ ಅವರಿಗೆ ಸ್ಥಾನವುಂಟು. ಅವರ ಶಿಷ್ಯರಾದ ನರಹರಿತೀರ್ಥರೇ ದಾಸಪರಂಪರೆಯನ್ನು ಹುಟ್ಟು ಹಾಕಿದ್ದು. ಅವರ ಉಪಾಸ್ಯ ದೇವ ರಾಮನಾಗಿದ್ದುದು ನಿಜವೇ. ಆದರೆ ಅವರು ಬರೆದುದೆಲ್ಲ ಪಾಂಡುರಂಗ ಪುರಿಯ ವಿಠ್ಠಲನನ್ನು ಕುರಿತ ಕೀರ್ತನೆಗಳು. ನಾಮದೇವ ಮತ್ತು ಜ್ಞಾನೇಶ್ವರಿಗೆ ಪೂರ್ವದಲ್ಲೇ ಕರ್ನಾಟಕದಲ್ಲಿ ಕಾನಡಿ ವಿಠ್ಠಲನ ಭಕ್ತಿ ಪರಂಪರೆಯು ಚಾಲ್ತಿಯಲ್ಲಿತ್ತು. ಅದರ ಪುರಸ್ಕರ್ತರೆಂದರೆ ನರಹರಿತೀರ್ಥರು. ಅವರ ದಾಸಮಾರ್ಗದಲ್ಲಿ ಶ್ರೀಪಾದರಾಯ, ವ್ಯಾಸರಾಯ, ಪುರಂದರದಾಸ, ವಾದಿರಾಜರಂಥ ಪ್ರಖ್ಯಾತ ದಾಸರು ತುಕಾರಾಮನಿಗೆ ಪೂರ್ವದಲ್ಲೇ ಆಗಿ ಹೋಗಿದ್ದರು. ಪೋಲಾಳ ದಂಡನಾಥನೆಂಬ ಹೊಯ್ಸಳರ ಪ್ರಖ್ಯಾತ ಸೇನಾಪತಿಯು ೧೨೨೪ರ ಸುಮಾರಿ

ನಲ್ಲಿಯೇ ಹರಿಹರ ಕ್ಷೇತ್ರದ ಮಹತ್ವವನ್ನು ಪ್ರವೃದ್ಧಗೊಳಿಸುವ ಪ್ರಯತ್ನ ಮಾಡಿದ್ದನು. ದೇವಸ್ಥಾನಗಳನ್ನು ಬೆಳೆಸುವುದರೊಂದಿಗೆ, ಹರಿಹರ ಚರಿತ್ರವೆಂಬ ಕಾವ್ಯವನ್ನೂ ರಚಿಸಿದ್ದನು. ದೇವಗಿರಿಯ ಯಾದವರೂ ಸಹ ಹರಿಹರಪುರಕ್ಕೆ ಪ್ರತಿಷ್ಠೆ ತರುವ ಪ್ರಯತ್ನ ಮಾಡಿದ್ದರು. ಆದರೆ ಪಂಢರಪುರದ ವಿಷಯದಲ್ಲಿ ಅವರ ಉದ್ದೇಶ ಸಫಲವಾದಂತೆ ಹರಿಹರಪುರದ ವಿಷಯ ದಲ್ಲಿ ಆಗಲಿಲ್ಲ. ಧಾರವಾಡ, ವಿಜಾಪುರ, ಬೆಳಗಾವಿ ಪ್ರಾಂತ್ಯಗಳಲ್ಲಿನ ಭಕ್ತಿಮಾರ್ಗದ ಅದ್ವೈತಿಗಳ ಲಕ್ಷ್ಯವನ್ನು ಪಂಢರಪುರದ ವಿಠೋಬನೆಡೆ ಸೆಳೆದವನು ಹೇಮಾಡ ಪಂಥದ ಪುಢಾಕಾರ ನೆಂಬಾತ. ಮಾಧ್ವ ವೈಷ್ಣವರಿಗಂತೂ ಆ ಸ್ಥಾನ ಪೂಜನೀಯವೇ ಆಗಿತ್ತು. ವಿದ್ಯಾರಣ್ಯವು ಬ್ರಾಹ್ಮಣರಲ್ಲಿ ಬಣ್ಣಿಸಲ್ಪಟ್ಟಿರುವಂತೆ, ಕನ್ನಡ ಬ್ರಾಹ್ಮಣ ಕುಲದಲ್ಲಿನ ಚೌಂಡರಸನ ಅಭಿನವ ದಶಕುಮಾರ ಚರಿತ್ರೆ ಎಂಬ ಕಾವ್ಯದಲ್ಲಿ ಪಂಢರಪುರ ಕ್ಷೇತ್ರವರ್ಣನೆಯ ಪ್ರಸಂಗವು ಇದೆ. ಅದರಲ್ಲಿನ ವರ್ಣನೆಯ ರೀತಿಯಿಂದ ನೋಡಿದರೆ ಅದು ಜ್ಞಾನೇಶ್ವರನಿಗೂ ಪೂರ್ವ ಕಾಲದ್ದಾಗಿ ರುವಂತೆ ಕಾಣುತ್ತದೆ. ಜ್ಞಾನೇಶ್ವರನಿಂದ ರಾಮದಾಸರವರೆಗೆ ಎಲ್ಲ ಸಂತರು ವಿಠ್ಠಲನ ಶಿರದ ಮೇಲೆ ಶಂಕರಲಿಂಗವಿದೆಯೆಂದು ಹೇಳಿದ್ದಾರೆ. ಆದರೆ ಚೌಂಡರಸನು ಹೇಳಿರುವಂತೆ ಅವನ ತಲೆಯ ಮೇಲಿರುವುದು ಕೇವಲ ಮುಕುಟವಷ್ಟೆ. ಆ ಕಥೆಯಲ್ಲಿ ಎರಡು ಸ್ಥಿತ್ಯಂತರಗಳು ಉಂಟಾ ಗಿರಬೇಕು ಎಂಬುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ವಿಷ್ಣುವಿಗಿಂತ ಶಿವ ಬಹಳ ದೊಡ್ಡವನು ಎಂಬುದನ್ನು ಹೇಳುವುದಕ್ಕಾಗಿ ಆ ಕಿರೀಟಕ್ಕೆ ಲಿಂಗತ್ವ ನೀಡಿ ವಿಷ್ಣುವಿನ ತಲೆಯ ಮೇಲೆ ಕೂರಿಸಿರಬೇಕು. 'ಶಿವಂ ಧರ್ಮೋಪದೇಷ್ಟಾರಂ ವಿಷ್ಣೋ ಧರ್ಮೋಪದೇಶಕಂ' ಎಂಬು ದಾಗಿ ಸ್ತುತಿಸುವ ಶಂಕರಾದ್ವೈತ ಪರಂಪರೆಯಲ್ಲಿನ ಯಾರದೋ ಕಲ್ಪನೆಯಾಗಿದ್ದಿರಬೇಕು. ಇಲ್ಲವೆ ದೇವ ಮತ್ತು ಜಂಗಮರು ತಲೆಯ ಮೇಲೆ ಲಿಂಗಧಾರಣೆ ಮಾಡುತ್ತಾರೆ. ಆ ಸಂದರ್ಭಾ ನುಸಾರ ಪಾಂಡುರಂಗ ಪುರದ ವಿಠ್ಠಲನು ಶೈವನಾಗಿರಲೂಬಹುದು. ಅಲ್ಲದೆ ಮಧ್ವಾಚಾರ್ಯರ ಕಾಲದಲ್ಲಿನ 'ಪರಡಿಗೆ ತಿರುಗಿತು' ಮತ್ತು 'ಈ ಕಥೆಗೆ ಬದಲಿ ಅರ್ಥ'ವನ್ನು ಹೇಳಿರುವುದಾ ಗಿರಬೇಕು. ಮಧ್ವರಿಗೆ ವಿಷ್ಣು ಸರ್ವೋತ್ತಮ, ರುದ್ರನ ಸ್ಥಾನ ಜೀವೋತ್ತಮ ಪ್ರಾಣಿಗಳಿಗೆ ಸರಿಸಮನಾದುದು ಎಂದು ನಂಬುತ್ತಾರೆ. ಎಂತಲೇ ಮಹಾರಾಷ್ಟ್ರದ ವಿಠ್ಠಲ ಭಕ್ತರಲ್ಲಿ 'ವಿಠೋನೆ ಶಿರೀ ವಾಹಿಲಾ ದೇವರಾಣ' (ವಿಠ್ಠಲನನ್ನು ಶಿರದಿ ಹೊತ್ತಿಹೆನು ದೇವರಾಯನೆಂದು) 'ಮಾಝ್ಯಾ ಭಜನೀ ಆಸ್ಥಾ ತರೀ ತಯಾನೆ ಮೀ ಮಾಥಾ ಮುಕುಟ ಕರೀ' (ನನ್ನ ಭಜನೆಯೊಳು ಇರಲು ಪ್ರಾಮಾಣಿಕನು ಅವನು, ನಾನು ನೀಡುವೆ ಮುಕುಟವನು ತಲೆಗೆ) ಮುಂತಾದ ಉಕ್ತಿಗಳ ಪ್ರಸಾರವಾಗಿರಬಹುದು. ಏನೇ ಇರಲಿ ವಿಠ್ಠಲ ಭಕ್ತಿಯಂತೂ ಮಹಾರಾಷ್ಟ್ರಕ್ಕಿಂತಲೂ ಪೂರ್ವದಲ್ಲಿ ಕರ್ನಾಟಕದಲ್ಲಿ ಇತ್ತೆಂಬುದು ವೇದ್ಯ. ಅರ್ಥಾತ್ ಆತ ಕರ್ನಾಟಕದವನೇ ಆಗಿದ್ದ. ಆ ಕಾಲದ ಸಂತರಿಗೂ ಇದರ ಅರಿವಿತ್ತು. ಚೌಂಡರಸನು ವಿಠ್ಠಲನನ್ನು ಕರೆದಿರುವುದು ಅಭಂಗ ವಿಠ್ಠಲ ಎಂಬುದಾಗಿ. ಅದರಿಂದಾಗಿಯೇ ವಿಠಲನಿಗೆ ಸಂಬಂಧಿಸಿದ ಓವಿ ಪ್ರಬಂಧಗಳಿಗೆ ಅಭಂಗ ಎಂಬ ಹೆಸರು ಬಂದಿರಬಹುದು ಎಂಬುದು ಮನನೀಯ. ಬಹಳ ಪ್ರಾಚೀನ ಕಾಲದಿಂದಲೇ ಹೆಣ್ಣು ಮಕ್ಕಳ ಕಟ್ಟುವ-ಬೀಸುವ ಗೀತೆಗಳಲ್ಲಿ ಈ ಛಂದದ ಉಪಯೋಗವಾಗುತ್ತಿದೆ. ಬಹಳಷ್ಟು

ಕನ್ನಡ ಜನಪದ ಗೀತೆಗಳು ಈ ಛಂದದಲ್ಲಿವೆ. ಆರನೆಯ ಶತಮಾನದ ಮಂಗಳೇಶನ ಶಿಲಾ ಶಾಸನದಲ್ಲಿನ ಕಾವ್ಯದಲ್ಲಿ ಈ ಛಂದದ ಉಪಯೋಗ ವಾಗಿರುವುದನ್ನು ಕಾಣಬಹುದು. ಎಂಟನೆಯ ಶತಮಾನದಲ್ಲಿ ಗಂಗ ಶಿವಮಾರನೆಂಬಾತ ಗಜಶಾಸ್ತ್ರವನ್ನು ರಚಿಸಿದ. ಅದರಲ್ಲಿನ ಗಜಾಷ್ಟಕಗಳು ತ್ರಿಪದಿ ಛಂದಸ್ಸಿನಲ್ಲಿವೆ. ಚಂಪೂ ವಾಙ್ಮಯದಲ್ಲಿ ತ್ರಿಪದಿಯ ಉಪಯೋಗವಾಗಿರುವುದು ಕೆಲವಾರು ಕುಟ್ಟುವ-ಬೀಸುವ ಪ್ರಸಂಗಗಳಲ್ಲಿ. ಜ್ಞಾನೇಶ್ವರ ಅಥವಾ ತುಕಾರಾಮನ ಕೆಲವು ಉದ್ಗಾರಗಳಿಂದ ಓವಿ ವೃತ್ತದ ಪರಂಪರೆ ಇದೇ ಆಗಿರಬೇಕು ಎಂಬುದು ತಿಳಿದುಬರುತ್ತದೆ. ಈ ತ್ರಿಪದಿಗಳನ್ನು ಜೋಗುಳ ಗೀತೆಗಳಲ್ಲೂ ಉಪಯೋಗಿಸುತ್ತಿದ್ದುದುಂಟು. ಜೋಗುಳ ಗೀತೆಗಳ ಕೊನೆಯಲ್ಲಿ ಓಈ ಅಥವಾ ಹೋಈ ಎಂದು ಉದ್ಗರಿಸುವುದು ಸಂಪ್ರದಾಯ. ತ್ರಿಪದಿ ಎಂಬ ಹೆಸರನ್ನು ಕೊಟ್ಟವರು ಸಂಸ್ಕೃತ ಲಾಕ್ಷಣಿಕರು. ದೇವಗಿರಿಯ ಸಿಂಘಣನ ಆಸ್ಥಾನದಲ್ಲಿದ್ದ ಶಾರ್ಙ್ಗಧರನು ತ್ರಿಪದಿ ವೃತ್ತವು ಕರ್ನಾಟಕೀಯವಾಗಿರುವುದನ್ನು ಹೇಳಿ, ಅದನ್ನು ಹೇಗೆ ಹಾಡಬೇಕು ಎಂಬ ನಿಯಮವನ್ನು ಕುರಿತು ಹೇಳಿದ್ದಾನೆ.

ಮಹಾರಾಷ್ಟ್ರದಲ್ಲಿ ಜ್ಞಾನೇಶ್ವರರಂತೆ ಓವಿಯನ್ನು ಸುಂದರವಾಗಿ ರಚಿಸಿದವರು ಮತ್ತೊಬ್ಬರಿಲ್ಲ ಎಂಬ ಅಭಿಪ್ರಾಯವು ಸುಪ್ರಸಿದ್ಧ. ಆದರೆ ಇಂದು ಅವರಿಗೂ ಮುಂಚಿನ ಓವಿಗಳು ಸಿಕ್ಕಿವೆ. ಓವಿಯ ಹದಿನಾರು ಪ್ರಕಾರಗಳನ್ನು ಅವರು ಹೇಳಿರುವುದು ತಿಳಿದು ಬರುತ್ತದೆ. ಈ ವೃತ್ತವು ಬಹಳಷ್ಟು ದ್ರಾವಿಡ ಛಂದಗಳಂತೆ ತಾಲಪ್ರಧಾನ, ಮಾತ್ರಾ ನಿಯತ ಮತ್ತು ಅಕ್ಷರ ಕ್ಲುಪ್ತವಾದುವಾಗಿರುವಂತೆ ಕಾಣವುದು. ಇದರ ವಿಚಾರವನ್ನು ಸ್ವತಂತ್ರವಾಗಿ ಮಾಡುವುದಾಗಿರುವುದರಿಂದ ಇಲ್ಲಿ ಓವಿಯ ಮತ್ತು ಹೋಈ ತ್ರಿಪದಿಯ ಛಂದಃ ಸಾದೃಶ್ಯಗಳನ್ನಷ್ಟೇ ನೀಡುತ್ತೇನೆ. ಜೋಕಾಲಿಯನ್ನು ಕುರಿತ ಈ ನಮುನದ ಓವಿಯನ್ನು ತೆಗೆದು ಕೊಳ್ಳೋಣ:

ಮೊದಲಿಗೆ ನನ್ನಯ ಓವಿ | ಮೊದಲದು ನನ್ನಯ ನೇಮ |
ತುಳಸಿಯ ಕೆಳಗೆ ರಾಮ | ಪುರಾಣವ ವಾಚಿಸಿಹ ||

ಮೊದಲ ಮೂರು ಚರಣಗಳಲ್ಲಿ ತಾಳಗಳಿದ್ದರೆ, ನಾಲ್ಕನೆಯದರಲ್ಲಿ ಎರಡೇ ಇವೆ. ಈಗ ಜ್ಞಾನೇಶ್ವರಿಯಲ್ಲಿನ ಮೊದಲಿನ ಓವಿಯನ್ನು ತೆಗೆದುಕೊಳ್ಳೋಣ:

ಓಂ ನಮೋ ಜೀ ಅದ್ಯಾ | ವೇದ ಪ್ರತಿಪಾದ್ಯ |
ಜಯ ಜಯ ಸ್ವಸಂವೇದ್ಯಾ | ಆತ್ಮರೂಪಾ ||

ಇದರೊಂದಿಗೆ ಕನ್ನಡದಲ್ಲಿನ ಒಂದು ಜೋಗುಳ ಗೀತೆಯಲ್ಲಿನ ಓವಿಯನ್ನು ನೋಡೋಣ:

ಬಾರೋ ಬಾರೋ ನನ್ನ | ಬಾಲ ಚಕ್ರವರ್ತಿ
ನಾಲಿಗಿ ಮ್ಯಾಲೆ ಸರಸೋತಿ | ಇರುವಂಥ
ನನಬಾಲ ಬಾರಾ ಹಾಲ ಕುಡಿಬಾರೋ

ಈ ಓವಿಯಲ್ಲಿ ಮೂರನೆಯ ಚರಣಾನಂತರ ಮತ್ತು ನಾಲ್ಕನೆಯ ಚರಣದ ಆರಂಭ ಹೀಗೆ ಎರಡು ತಾಳಗಳು ಬರುತ್ತವೆ. ಇದರ ಪ್ರಕಾರವು ಬಹಳವಾಗಿರುವುದು. ಆರನೆಯ ಶತಮಾನದಲ್ಲಿನ ತ್ರಿಪದಿ ಓವಿಗಳೂ ಹೀಗೆಯೇ ಇವೆ.

ಸಾಧುಂಗೆ ಸಾಧು ಮಾ | ಧುರ್ಯಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ | ಪೆಱನಲ್ಲ ||

ಇಲ್ಲಿಯೇ ಮಹಾನುಭಾವಿ ಮಹದಂಬೆಯ ಧವಳಗಳ ಬಗ್ಗೆ ಎರಡು ಮಾತು ಹೇಳುತ್ತೇನೆ. 'ಧವಳ' ಎಂದರೆ ಕೀರ್ತಿಗೀತ-ಯಶೋಗಾನ ಎಂಬರ್ಥಗಳಿವೆ ಜೈನವಾಙ್ಮಯದಲ್ಲಿ. ನನ್ನ ಅಭಿಪ್ರಾಯವೆಂದರೆ ಮಹದಂಬೆಯ ಧವಳಗಳು ದ್ರಾವಿಡದ 'ಅಕ್ಕರ' ಜಾತಿಯ ಛಂದಗಳಲ್ಲಿವೆ. ಈ ಛಂದಃ ಪ್ರಕಾರ ತೆಲುಗು ವಾಙ್ಮಯದಲ್ಲಿಯೂ ಉಂಟು. ಧವಳದ ಒಂದು ಗೀತೆಯನ್ನು ನಾನು ಇಲ್ಲಿ ತೆಗೆದುಕೊಳ್ಳುತ್ತೇನೆ:

ಶ್ರೀಕೃಷ್ಣ ರುಕುಮಿಣಿ ಗರ್ಜಿಸುತವುರೆ ಯಾದವ ದಾಟುಗಾ ಬಾ |
ಶ್ರೀಚಕ್ರಧರನ ಶಿರದೊಳು ಓಡಿದ ಶ್ರೀಶರಣು ಧವಳ ಹಾಡುತಿಹೆ ||
ಗೋವಿಂದರಾಣಾ ಯಾರನು ರುಕುಮಿಣಿ ಸೋಲಿಸಿ ಪವಾಡ ತೋರಿದಳು ಅತಿ |
ಬಹುಳವೆ ಕಳುಹಿದನು ಪರಮಾಗತಿ ಭಕುತಿ ಕೇಳುತಿರೆ ಶ್ರೀಕೃಷ್ಣ ಚರಿತೆ ||

ಇದನ್ನು ೯೪೧ರ ಪಂಪಕವಿಯ ವೃತ್ತದೊಂದಿಗೆ ತುಲನೆ ಮಾಡಬಹುದು.

ಮೃಗಮಂ ಗಾಳಿಯನಿರ್ಕೆಯಂ ಪಕ್ಕಿಯಂ ಗಣಿದಮಂ ಕಂಡಿಯಂ ಮಾರ್ಕಂಡಿಯಂ |
ಪುಗಿಲಂ ಪೋಗಂ ಬಾರಿಯಂ ಸನ್ನೆಯಂ ನೂರುವಮರ್ಚುವ ನಿಲ್ವೇಡೆಯಂ ||
ಬರೆಯಂ ತೆಗೆ ಯನಲ್ಲಾಟಮಂ ಕಾಟಮಂ ನೋವುದಂ ಸಾವುದನೆಲ್ಲಂದದಿ |
ಬಗೆದಾಗಳರಸರೊಳೆಲ್ಲ ಕೇಳು ನೀಂ ಬಲ್ಲೆ ಬಂಟೆಕಾರರೊಳೆಲ್ಲಮಾನೆ ಬಲ್ಲೆಮ್ ||

ಗುಂಡಮಪ್ರಭು, ಚಕ್ರಧರ, ನಾಗದೇವ, ಮಹದಂಬಾ ಇವರಿಗೆಲ್ಲ ಕನ್ನಡ ಹಾಗೂ ತೆಲುಗು ಭಾಷೆ ಬರುತ್ತಿದ್ದಿರಬಹುದಾದ ಸಂಭವವಿದೆ. ಏನೇ ಇರಲಿ, ಮರಾಠಿ ವಾಙ್ಮಯದ ಶಾಸ್ತ್ರೀಯ ಮತ್ತು ಐತಿಹಾಸಿಕ ಅಧ್ಯಯನಕ್ಕೆ ಕನ್ನಡ ಭಾಷೆ ಮತ್ತು ಇತಿಹಾಸದ ಜ್ಞಾನ ಅವಶ್ಯ. ಹೊಯ್ಸಳ ನಾರಸಿಂಹನು ದೇವಗಿರಿಯ ಸೇವುಣರ ಸೇನಾಪತಿಗಳಾದ ವಿಕ್ರಮಪಾಲ ಮತ್ತು ಪಾವುಸರುಗಳನ್ನು ಯುದ್ಧದಲ್ಲಿ ಪರಾಭವಗೊಳಿಸಿದುದಲ್ಲದೆ ಅವರನ್ನು ಕೊಂದು ಹಾಕಿದ. ಅವರ ರುಂಡಗಳನ್ನು ತನ್ನ ಆನೆ ಧ್ವಜಕ್ಕೆ ಸಿಕ್ಕಿಸಿಕೊಂಡು ತನ್ನ ರಾಜಧಾನಿಗೆ ಹಿಂತಿರು ಗುತ್ತಿರುವಾಗ, ಆ ಅಲ್ಲಾಡುತ್ತಿದ್ದ ತಲೆಗಳು ಭಟರಂತೆ ಬಲ್ಲಾಳನ ಸ್ತುತಿ ಮಾಡುತ್ತಿದ್ದವೋ ಹೇಗೆ ಎಂಬ ಭಯಾನಕ ಹಾಸ್ಯ ವರ್ಣನೆಯು ೧೨೨೪ರ ದಾವಣಗೆರೆಯ ಶಿಲಾಶಾಸನದಲ್ಲಿದೆ. ವಿಕ್ರಮಪಾಲ ಮತ್ತು ಪಾವುಸ ಇವರು ಮರಾಠಾ ಸರದಾರರಾಗಿದ್ದುದರಿಂದ ಅವರ ಬಾಯಿಂದ ಮರಾಠಿಯಿಂದ ನಕಲು ಮಾಡಿದ ಭಾಷೆಯನ್ನು ಮುಂದಿನ ಶ್ಲೋಕದಲ್ಲಿ ಬಳಸಲಾಗಿದೆ:

ಜವರಾತು ಜಗದೇಕವೀರು ಮಝುದೇವರೋಹಕೂ ಬಾಪೂ ಜಾ |
ಧಳ ನಾರಾಯಣು ನರಸಿಂಗು ಭಲ ಎಂದಂಣಿಮಗೆ ತಾಮಮೇಚ್ಚಿ ತೂ ||
ಗುವವೋಲ್ ವಿಕ್ರಮಪಾಲಪಾವುಸ ಶಿರಃ ಕಂಜಮ್‌ಗಳಲ್ಲಾಡುತಿರ್ |
ದುವು ತನ್ನಾನೇಯ ದೋಸ್ನಡೇಂಚೇಯದ ಚಂಚತಪಕೇತು ದಂಡಗಂಗಳೋಳ್ ||

ಹೊಯ್ಸಳರ ವಿಜಯ ಬಹಳ ದಿನ ಉಳಿಯಲಿಲ್ಲ. ನಾರಸಿಂಹನ ಮಲತಮ್ಮ ರಾಮನಾಥ ನೊಂದಿಗೆ ದಕ್ಷಿಣದಲ್ಲಿ ಮೇಲಿಂದ ಮೇಲೆ ಯುದ್ಧ ನಡೆಯಲಾರಂಭಿಸಿದವು. ಆ ಕಾರಣದಿಂದಾಗಿ

ತುಂಗೆಯಾಚೆಗಿನ ರಾಜ್ಯದ ಆಶೆಯನ್ನು ಹೊಯ್ಸಳರು ಕೈಬಿಟ್ಟರು. ಬಿಜ್ಜಣಾದಿ ಸರದಾರರುಗಳ ಸಹಾಯದಿಂದ, ವಿಠ್ಠಲನ ಭಕ್ತಿಯ ಬಲದಿಂದ ಮತ್ತು ಹೇಮಾದಿ ಬೋಪದೇವನ ಧಾರ್ಮಿಕ ಚಳವಳಿಯಿಂದ ಧಾರವಾಡ, ಬೆಳಗಾವಿ, ವಿಜಾಪುರದ ಕಡೆಯವರೆಲ್ಲ ದೇವಗಿರಿಯವರ ಕಡೆಗೆ ವಾಲಿದರು. ಸಾಳುವ ತಿಕ್ಕನನು ರಾಜನಾದ. ಮುಂದೆ ಹನ್ನೆರಡನೆಯ ಶತಮಾನದಲ್ಲಿನ ಅಭಿಧಾನ ಚಿಂತಾಮಣಿ ವೈದ್ಯ ಗ್ರಂಥದಲ್ಲಿ ಕನ್ನಡಕ್ಕೆ ಮರಾಠಿ ಪರ್ಯಾಯ ಶಬ್ದ ಜೋಡಿಸಿ ಕೊಡುವುದು ಅವಶ್ಯವಾಗಿ ಕಂಡಿತು ನರಹರಿ ಪಂಡಿತನಿಗೆ. ಕ್ರಿ.ಶ. ೧೨೯೦ ಜ್ಞಾನೇಶ್ವರಿಯ ಜನನ ಸಂವತ್ಸರ ಕಾಲದ ಈ ಸುಮಾರಿನಲ್ಲಿಯೇ ಜವನಿಕಾ ನಾರಾಯಣ, ರಾವುತರಾಯ ಬಿರುದಾಂಕಿತ ಪೆರು ಮಾಳ್ ಎಂಬ ಸೇನಾಪತಿಯು ಮೈಸೂರಿನಲ್ಲಿನ ಮಾಲಿಂಗೀ ವಿದ್ಯಾಲಯ ದಲ್ಲಿ ಕನ್ನಡ, ತಮಿಳು ಭಾಷೆಗಳೊಂದಿಗೆ ನಾಗರಿ ಮತ್ತು ಆರ್ಯ ಅಂದರೆ ಜೈನ ಮಹಾರಾಷ್ಟ್ರೀ ಜನ್ಯ, ಗುಜರಾಥಿ ಮತ್ತು ಮರಾಠಿ ಭಾಷೆಗಳನ್ನು ಕನ್ನಡ ವಿದ್ಯಾವಂತರು ಅವಶ್ಯ ಓದುವಂತೆ ಮಾಡಿದ. ಮಲ್ಲಿಕಾಫರನು ಒಂದೊಮ್ಮೆ ಬರದಿದ್ದರೆ, ಈ ರಾಜಕಾರಣದ ಕೊನೆ ಹೇಗೆ ಆಗುತ್ತಿತ್ತೊ, ಅಲ್ಲದೇ ದೇವಗಿರಿಯವರ ಮತ್ತು ಅವರೊಂದಿಗೆ ಮರಾಠಿ ಭಾಷೆಯ ಭಾಗ್ಯ ಹೇಗೆ ಬೆಳಗುತ್ತಿತ್ತೋ ಈ ವಿಚಾರವನ್ನು ಕುರಿತು ಕಲ್ಪಿಸುವುದರಲ್ಲಿ ಅರ್ಥವಿಲ್ಲ. ಮುಂದೆ ಮುಸಲ್ಮಾನರು ಮರಾಠಿ, ಫಾರ್ಸಿ, ಉರ್ದೂ ಭಾಷೆಗಳಿಗೆ ಹಾಗೂ ವಿಜಯನಗರದವರು ಕನ್ನಡ ಮತ್ತು ಸಂಸ್ಕೃತ ಭಾಷೆಗೆ ಏಕೆ ಮತ್ತು ಹೇಗೆ ಆಶ್ರಯ ನೀಡಿದರು ಎಂಬುದು ಪ್ರಸ್ತುತ ಹೇಳುವ ವಿಷಯವಲ್ಲ. ಈವರೆಗೆ ನಾನು ನನ್ನ ವಿಚಾರಗಳನ್ನು ಸ್ಪಷ್ಟವಾಗಿ ಮಂಡಿಸಿದ್ದೇನೆ. ಇನ್ನು ಉಪಸಂಹಾರಕ್ಕಾಗಿ ಒಂದೆರಡು ಶಬ್ದಗಳನ್ನು ಬರೆದು ಮುಗಿಸುತ್ತೇನೆ.

## ಉಪಸಂಹಾರ

ಕರ್ನಾಟಕದಲ್ಲಿ ವಾಙ್ಮಯ ಸೇವಕರು ಅದನ್ನವಲಂಬಿಸಿಯೇ ಹೊಟ್ಟೆ ತುಂಬಿಸಿ ಕೊಳ್ಳುತ್ತಿರಲಿಲ್ಲ. ಪಂಪ, ಜನ್ನ, ನಾಗವರ್ಮರುಗಳು ವಿರಕ್ತರಾಗಿದ್ದರು. ಈಗ್ಗೆ ತಮ್ಮೆದುರು ವರ್ಣಿಸಿರುವ ಕಾಲಖಂಡದಲ್ಲಿ ೩೦೦ ಮಂದಿ ಲೇಖಕರು ಇದ್ದರು. ಹಾಗೂ ೬೦೦-೭೦೦ ಕೃತಿಗಳು ಬಂದಿದ್ದವು. ಸಾಮಾನ್ಯೀಕರಿಸಿ ಹೇಳುವುದಾದರೆ ೧೦೦ ಮಂದಿ ಜೈನರು, ೧೦೦ ಮಂದಿ ಲಿಂಗಾಯತರು, ೫೦ ಮಂದಿ ಬ್ರಾಹ್ಮಣರು ಹಾಗೂ ೫೦ ಮಂದಿ ಇತರ ಜಾತಿಗಳವರು ಗ್ರಂಥಗಳನ್ನು ರಚಿಸಿದವರಾಗಿದ್ದರು. ಅವರಲ್ಲಿ ೩೦-೩೫ ಮಂದಿ ಲೇಖಕಿಯರೂ ಇದ್ದರು. ಇದಲ್ಲದೆ ಕನ್ನಡಿಗರು ಸಂಸ್ಕೃತ-ಪ್ರಾಕೃತದಲ್ಲಿ ಮಾಡಿದ ಕಾರ್ಯವು ಬೇರೆಯೇ. ಕನ್ನಡ ವಾಙ್ಮಯದ ಬಗ್ಗೆ ಸಂಕ್ಷಿಪ್ತ ವರ್ಣನೆಯನ್ನಷ್ಟೇ ಕೊಟ್ಟಿರುವುದಿಲ್ಲ ನಾನು. ನಾಮ ನಿರ್ದೇಶನದ ಹೊರತು ಇಲ್ಲಿ ಹೆಚ್ಚಿಗೇನೂ ನೀಡುವ ಶಕ್ಯತೆಯಿಲ್ಲ. ಮಹಾರಾಷ್ಟ್ರೀಯರ ಲಕ್ಷ್ಯವನ್ನು ಸೆಳೆಯುವ ಕಾರಣದಿಂದ ತೌಲನಿಕವಾಗಿಯೂ ವಿವೇಚಿಸಿರುವೆನು. ಅಲ್ಲದೆ ಮಹಾರಾಷ್ಟ್ರೀಯರ ಇತಿಹಾಸ ಪ್ರಿಯತೆಯನ್ನು ಅರಿತು ಯಥಾವಿಧಿಯಾಗಿ ಇತಿಹಾಸ ದೃಷ್ಟಿಯಿಂದಲೂ ಮಂಡಿಸಿರುತ್ತೇನೆ. ಕರ್ನಾಟಕಸ್ಥ ಜನರು ಜಗತ್ತಿನ ಯಾವುದೇ ಜನತೆಗಿರುವಂತೆ ಬುದ್ಧಿಬಲವುಳ್ಳವರು. ಪರಾಕ್ರಮ ದಲ್ಲಿಯೂ ಕಡಿಮೆಯಿಲ್ಲ. ತ್ಯಾಗ ಅವರ ಬದುಕಿನ ಅಂಗವೇ ಆಗಿ ಬಿಟ್ಟಿದೆ. ಈ ಎಲ್ಲದಕ್ಕೆ ಸಾಕ್ಷ್ಯವನ್ನು ಈ ಮುನ್ನಿನ ವಾಙ್ಮಯಗಳೇ ಹೇರಳವಾಗಿ ಕೊಡುತ್ತವೆ.

ಮುಖಾಮುಖಿ

## ಜಿ ಎಚ್ ನಾಯಕ ಅವರೊಂದಿಗೆ

● ಸಂಪಾದಕ

(ನವ್ಯ ವಿಮರ್ಶೆಯ ಅತ್ಯುತ್ತಮ ಪ್ರತಿನಿಧಿಯಾದ ಜಿ ಎಚ್ ನಾಯಕರು, ನಿಷ್ಠುರವಾದ ಭಿನ್ನಾಭಿಪ್ರಾಯವನ್ನು ಡೆಮಾಕ್ರಟಿಕ್ಕಾದ ಸಹನೆಯಿಂದಲೂ ವೈಯಕ್ತಿಕ ರಾಗ-ಭಾವಗಳಿಲ್ಲದೆಯೂ ಹೇಳಲು ಸಾಧ್ಯವಾಗಬೇಕು ಎಂದು ನಂಬಿದವರು. ಅವರ ಈ ನಿಲವು 'ವಿನಯ ವಿಮರ್ಶೆ' ಎಂದೇ ಹೆಸರಾಗಿದೆ. ಸಾಹಿತ್ಯ ಕೃತಿಯನ್ನು ಸೂಕ್ಷ್ಮವಾಗಿ ಸಮಗ್ರವಾಗಿ ಅನುಸಂಧಾನ ಮಾಡುವ ಹಾಗೂ ವಿಮರ್ಶೆಯ ತೀರ್ಮಾನಗಳನ್ನು ಬಹಳ ಎಚ್ಚರಿಕೆಯಿಂದ ತೆಗೆದುಕೊಳ್ಳುವ ನಾಯಕರು, ಸ್ವೀಪಿಂಗ್ ಹೇಳಿಕೆ ಮಾಡಲು ನಿರಾಕರಿಸುತ್ತಾರೆ. ಒಂದು ಬಗೆಯ 'ಶುದ್ಧಸಾಹಿತ್ಯಕ' ಸಂಪ್ರದಾಯಕ್ಕೆ ಸೇರಿದ ನಾಯಕರ ವಿಮರ್ಶೆಗೆ 'ಸಾಂಸ್ಕೃತಿಕ' ಎನ್ನುವ ಆಯಾಮವೂ ಇದೆ. ನಾಯಕರು ಕೇವಲ ಸಾಹಿತ್ಯ ವಿಮರ್ಶಕರಲ್ಲ, ನಮ್ಮ ಸಾರ್ವಜನಿಕ ವ್ಯಕ್ತಿಯೂ ಹೌದು. ೯೦ರ ದಶಕದ ನಂತರ ನಮ್ಮ ಸಾರ್ವಜನಿಕ ಬದುಕಿನ ಅನೇಕ ವಿಷಯಗಳಲ್ಲಿ ತಮ್ಮ ಚಿಂತನೆ ಮಂಡಿಸಿ ಚರ್ಚೆಗೆ ಆಸ್ಪದ ಮಾಡಿದವರು. ಅವರ ಚಿಂತನೆಗಳು ನಾಸ್ತಿಕ ಮಾನವತಾವಾದ, ನೈತಿಕತೆ ಹಾಗೂ ವಿಚಾರವಾದವನ್ನು ಮೇಳವಿಸಿಕೊಂಡಿವೆ. ಸಾಹಿತ್ಯದ ಮೌಲ್ಯಮಾಪನದಲ್ಲಿ ಪಾಲಿಸುವ ಎಚ್ಚರ ದಿಟ್ಟತನಗಳನ್ನು, ಬಾಳಿನಲ್ಲೂ ಪಾಲಿಸಲು ಯತ್ನಿಸಿದ ನಾಯಕರ ಆದರ್ಶವಾದವು ಒಂದು ಬಗೆಯಲ್ಲಿ ವ್ಯಕ್ತಿವಾದಿ ನೆಲೆಯತ್ತಲೇ ಸರಿಯುತ್ತದೆ. ಅವರ ಚಿಂತನೆಗಳ ಜತೆ ಭಿನ್ನಾಭಿಪಾಯ ಇಟ್ಟುಕೊಂಡು ಜಗಳಕ್ಕೆ ಇಳಿಯುವುದಕ್ಕೆ ಬೇಕಾದಷ್ಟು ಅವಕಾಶವಿದೆ. ಆದರೆ ಅವರ ವ್ಯಕ್ತಿತ್ವ ಹಾಗೂ ಬರೆಹದ ಪ್ರಾಮಾಣಿಕತೆಯ ಬಗ್ಗೆ ಅನುಮಾನ ಮೂಡುವುದಿಲ್ಲ.

೨೫-೨-೦೨ರಂದು, ಮೈಸೂರಿನ ಅವರ ಮನೆಯಲ್ಲಿ ಈ ಸಂದರ್ಶನ ಮಾಡಲಾಯಿತು. ನಾಯಕರು ತಮ್ಮ ಬಾಲ್ಯದ ದಿನಗಳಿಂದ ಹಿಡಿದು ಈ ಹೊತ್ತಿನ ಸಾಹಿತ್ಯಕ ವಿದ್ಯಮಾನಗಳ ತನಕ ವಿಸ್ತಾರವಾಗಿ ಮಾತನಾಡಿದ್ದಾರೆ. ತಮ್ಮ ಅನುಭವ ಮತ್ತು ಚಿಂತನೆಯನ್ನು ಹಂಚಿಕೊಂಡಿದ್ದಾರೆ-ಸಂ)

ಸಂ: ಕರನಿರಾಕರಣೆ ಚಳುವಳಿ ಭುಗಿಲೆದ್ದ ಉತ್ತರ ಕನ್ನಡ ಪರಿಸರದಲ್ಲಿ ನೀವು ಹುಟ್ಟಿದವರು. ಅದರ ಯಾವ ನೆನಪುಗಳು ನಿಮಗಿವೆ?

ನಾಯಕ: ಕರನಿರಾಕರಣೆ ಹೊತ್ತಿಗೆ ನಾನು ಹುಟ್ಟಿರಲಿಲ್ಲ. ಕರನಿರಾಕರಣೆ ಘೋಷಣೆ ಆಗಿದ್ದು ನಮ್ಮೂರು ಸೂರ್ವೆಯಲ್ಲಿ. ನಮ್ಮ ಸೋದರ ಮಾವ ವಾಸ್ರೆ ಸುಬ್ರಾಯ ನಾಯಕ

ಅಂತ, ಮೊಟ್ಟ ಮೊದಲು ಪಟೇಲಿಕೆಗೆ ರಾಜಿನಾಮೆ ಕೊಟ್ಟೋನು. ಇವನು ಕರನಿರಾಕರಣೆ ಕಾಲದಲ್ಲಿ ಭೂಗತನಾಗಿ ಘೋರಾರಣ್ಯದ ಶಿಬಿರದಲ್ಲಿದ್ದಾಗ, ಜೋಡು ಹುಲಿಗಳಿಗೆ ಬಲಿಯಾಗುವುದರಲ್ಲಿದ್ದು ಪಾರಾದವನು. ಅವನ ಮನೆ ಜಮೀನು ಮುಟ್ಟುಗೋಲಾಗಿತ್ತು. ಅವನ ಹೆಂಡತಿ ಕೂಡಾ ಹೋರಾಟಗಾರ್ತಿ, ಚಂದ್ರಿ ಅಂತಿದ್ಲು. ಬೊಮ್ಮಯ್ಯ ಪೊಕ್ಕನಾಯಕ ಅನ್ನೋರು, ನಮ್ಮ ದಾಯಾದಿ, ಮೊತ್ತಮೊದಲು ಕರೆ ನಿರಾಕರಣೆ ಘೋಷಣೆ ಮಾಡದೋರು. ನಮ್ಮ ಅಪ್ಪನ ಸೋದರ ಮಾವಂದಿರು. ಅವನ ಕಸಿನ್ ಕೂಡ ಕರನಿರಾಕರಣೆ ಮಾಡಿದವರು. ಅವರ ಮನೆ ಜಮೀನೂ ಮುಟ್ಟುಗೋಲಾಗಿತ್ತು. ಈ ಹೋರಾಟದಲ್ಲಿ ನಮ್ಮನೆ, ಜಮೀನೆಲ್ಲ ಬಾಂಬೆ ಸರಕಾರಕ್ಕೆ ಮುಟ್ಟುಗೋಲಾಗಿ ಹೋಗಿತ್ತು. ಅದು ೧೯೩೭ರಲ್ಲಿ ತಿರುಗಿ ಬಂತು. ಅದನ್ನ ಸರಿ ಮಾಡೋಣ ಅನ್ನೋ ಹೊತ್ತಿಗೆ ೧೯೪೨ರ ಕ್ವಿಟ್ ಇಂಡಿಯಾ ಮೂಮೆಂಟ್ ಬಂತು. ನಮ್ಮಪ್ಪ, ಭಾಗವತ ಹಮ್ಮಣ್ಣ ನಾಯಕ ಅಂತ, ಮುಲ್ಕಿ ಪಾಸ್ ಮಾಡಿದ್ದ ನನ್ನ ಅಣ್ಣನ್ನ ವಾಸ್ರೆ ಗಾಂವಠಿ ಶಾಲೆಗೆ ಮಾಸ್ತರಾಗಿ ಸೇರಿಸಿದ್ದ. ನನ್ನಣ್ಣ ನಮ್ಮಪ್ಪನಿಗೆ ಹೇಳದೇ ಕೇಳದೆ, ಸರ್ಕಾರದ ವಿರುದ್ಧ ಮೆರವಣಿಗೆಯಲ್ಲಿ ಹೊರಟು ಬಹಿರಂಗ ಭಾಷಣಾ ಮಾಡಿ ಅರೆಸ್ಟ್ ಆದ. ಜೈಲು ಶಿಕ್ಷೆ ಆಗಿ ಮಾಸ್ತರಿಕೆ ಕಳಕೊಂಡು ಅದಾದ ಒಂದು ತಿಂಗಳೊಳಗೆ, ನಮ್ಮಪ್ಪನನ್ನು ಅರೆಸ್ಟ್ ಮಾಡಿದರು. ನಮ್ಮ ಸೋದರ ಮಾವನಿಗೆ ವಾರೆಂಟು ಇತ್ತು. ಅವನೂ ಭೂಗತನಾಗಬೇಕಾಯಿತು. ಆಮೇಲೆ ಅವನಿಗೂ ಜೈಲು ಶಿಕ್ಷೆ ಆಯಿತು. ಎಲ್ಲ ಜೈಲಿಗೆ ಹೋದರಲ್ಲ ಅಂತ ಹೇಳಿ, ನಮ್ಮ ಅಕ್ಕನ ಗಂಡ ಮತ್ತು ನಮ್ಮ ದೊಡ್ಡಮ್ಮನ ಮಗ, ನಮಗೆ ಸಹಾಯ ಮಾಡಬೇಕಂತ ಬಂದೋರು, ನಮ್ಮ ಕಣ್ಣೆದುರಿಗೇನೆ ನಮ್ಮನೆಯಲ್ಲಿದ್ದಾಗಲೇ ಅರೆಸ್ಟಾಗಿ ಹೋದರು. ನನ್ನ ದೊಡ್ಡವ್ವನ ಗಂಡ ಬೊಳೆ ಊರಿನ ದೇವಣ್ಣ ಕೃಷ್ಣನಾಯಕ ಹಾಗೂ ನನ್ನ ದೊಡ್ಡಪ್ಪ, ಅವನ ಹಿರಿಯ ಮಗ ಎಲ್ಲಾ ಹೋರಾಟಗಾರರು: ಜೈಲು ಶಿಕ್ಷೆ ಅನುಭವಿಸಿದೋರು. ಬೊಳೆಯ ನನ್ನ ದೊಡ್ಡವ್ವನ ಗಂಡ ಕರನಿರಾಕರಣೆಯನ್ನು ಘೋಷಿಸಿದವರಲ್ಲಿ ಎರಡನೆಯವನು. ಅವನ ತಮ್ಮ ಬೊಳೆ ಬೊಮ್ಮಯ್ಯ ನಾಯಕ ಕೂಡ ಮುಖ್ಯ ಹೋರಾಟಗಾರರಲ್ಲಿ ಒಬ್ಬ. ಹೀಗೆ ಪ್ರಾಯಕ್ಕೆ ಬಂದ ಹುಡುಗರನ್ನು ಒಬ್ಬರೂ ಊರಲ್ಲಿ ಇಲ್ಲದಹಾಗೆ ಅರೆಸ್ಟ್ ಮಾಡ್ತಿದ್ರು. ಕಣ್ಣೆದುರಿಗೇನೇ ದೊಡ್ಡ ಹೋರಾಟವನ್ನು ನೋಡ್ತಾ ಇದ್ದೆವು. ಆ ಕಥೆ ಹೇಳಿ ಮುಗಿಯೋದಲ್ಲ. ನನಗಾಗ ಎಂಟು ವರ್ಷ...

ಸಂ: ನಾಡವರ ಸಮುದಾಯ, ಇಂಥದೊಂದು ಚಳುವಳಿಗೆ ಧುಮುಕಲಿಕ್ಕೆ ಏನು ಕಾರಣ

ನಾಯಕ: ಅವರದ್ದು ರೈತಾಪಿ ಸಮುದಾಯವಾಗಿದ್ದು ಒಂದು ಕಾರಣ ಇರಬೇಕು. ಜತೆಗೆ ಒಂದು ವೀರ ಪರಂಪರೆಯ ಜನ ಅಂತ ಕಾಣಿಸುತ್ತೆ. ವಿಜಯನಗರದಲ್ಲಿ ಕಾದಿದ್ದ

ದಂಡಿನವರು ಅಂತ ಹೇಳ್ತಾರೆ. 'ನಾಯಕ' ಅಂತ ಹೆಸರು ಬಂದಿದ್ದು ಹೀಗೆ. ಆಮೇಲೆ ದಿವಾಕರ್, ಕರ್ಮರ್‌ಕರ್, ಶ್ರೀಮತಿ ಪಂಜೀಕರ್ ಮೊದಲಾದವರೆಲ್ಲ ಬಂದು ಸಾಕಷ್ಟು ಪ್ರಚಾರ ಮಾಡಿದರು. ಮೈಸೂರು ಕಡೆಯಿಂದ ವಿ.ಎಸ್.ನಾರಾಯಣ್‌ರಾವ್, ಎಂ.ಎನ್. ಜೋಯಿಸ್, ಅವರೆಲ್ಲ ಬಂದರು. ಧಾರವಾಡ, ಮೈಸೂರು ಕಡೆಯಿಂದ ಬಂದಂತಹವರು ಎಲ್ಲ ಇಂಗ್ಲಿಷ್ ಎಜುಕೇಶನ್ ಇದ್ದೋರು. ಸ್ಥಳೀಯ ಹೋರಾಟಗಾರರೂ ಸೇರಿದ್ರು. ಒಂದು ಹೊಸ ಅಲೆಯನ್ನು ಎಬ್ಬಿಸಿದ್ರು. ನಾಡವರಂತೂ ಸಂಪೂರ್ಣವಾಗಿ ಹೋರಾಟದಲ್ಲಿ ಧುಮುಕಿದ್ರು. ಸ್ವಾತಂತ್ರ್ಯ ಹೋರಾಟದ 'ಸರ್ವಾಧಿಕಾರಿ' ಎಂದು ಖ್ಯಾತರಾಗಿದ್ದ ಬಾಸಗೋಡ ರಾಮ ನಾಯಕರಂಥ ಅಪ್ರತಿಮ ಹೋರಾಟಗಾರರು ಮುಂದೆ ಬಂದ್ರು. ಈ ರಾಮ ನಾಯಕರು ನನ್ನ ಹೆಂಡತಿ ಮೀರಾಳ ಅಜ್ಜ- ತಾಯಿಯ ತಂದೆ. ಆ ಕಥೆ ಈ ಸಂದರ್ಶನದಂಥ ಕಿರು ಅವಕಾಶದಲ್ಲಿ ಹೇಳಿ ಮುಗಿಸುವಂಥದಲ್ಲ. ಅದೊಂದು ಹೋರಾಟದ ಮಹಾ-ವೀರಗಾಥೆ.

ಸಂ: ನೀವು ವಿಮರ್ಶಕರಾದ್ದರಿಂದಲೋ ಏನೋ ಇವೆಲ್ಲ ಅನುಭವ ಜಗತ್ತು ಕನ್ನಡ ಓದುಗರಿಗೆ ಸಿಗಲೇ ಇಲ್ಲ ಅನಿಸುತ್ತೆ.

ನಾಯಕ: ಈಗ ಆತ್ಮಚರಿತ್ರೆ ಬರೀತಾ ಇದೀನಿ. ವಿಸ್ತಾರವಾಗೇ ಬರೀತಾ ಇದೀನಿ. ಅದಿನ್ನೂ ಬಾಲ್ಯದಿಂದಲೇ ಹೊರಗೆ ಬಂದಿಲ್ಲ. ನಾನು ಹುಟ್ಟಿ ಬೆಳೆದು ಬಂದ ಜಾಡನ್ನೆಲ್ಲ ಕಟ್ಟಿ ಕೊಡೋದಕ್ಕೆ ಪ್ರಯತ್ನಿಸುತಾ ಇದೀನಿ. ಒಂದು ಕಲ್ಚರಲ್ ಎಥೋಸ್ ನಲ್ಲಿ ಬೆಳಿದಿದೀನಿ. ಅದು ಇನ್ನು ಮುಂದೆ ಸಿಗೋದಿಲ್ಲ. ರೆಕಾರ್ಡ್ ಮಾಡಿದರೇನೇ ಉಳಿದುಕೊಳ್ಳೋದು. ಆ ತರಹದಲ್ಲಿ ಬರೀತಾ ಇದೀನಿ. ಯಾವಾಗ ಮುಗಿಯುತ್ತೋ ನೋಡೋಣ. ನಾನು ಬಹಳ ನಿಧಾನಿ.

ಸಂ: ಉತ್ತರ ಕನ್ನಡದವರು ಓದೋಕೆ ಮುಂಬೈಗೊ ಧಾರವಾಡಕ್ಕೋ ಹೋಗೋದು ಸಹಜ. ನೀವು ಮೈಸೂರಿನ ಕಡೆ ಬಂದ್ರಿ. ಈ ದಿಕ್ಕು ಬದಲಾವಣೆಗೆ ಕಾರಣ ಏನು?

ನಾಯಕ: ಮೈಸೂರಿಗೆ ಬರೋದು ನಾನಾಗೇ ಯೋಚನೆ ಮಾಡಿದ್ದಲ್ಲ. ನನಗೇನು ಕಾಲೇಜಿಗೆ ಹೋಗಬೇಕು, ಓದಬೇಕು ಎಂಬ ಆಸೆ ದೃಢವಾಗಿಯೇ ಇತ್ತು. ಅಷ್ಟೆ. ನನ್ನ ಅಕ್ಕಂದಿರಲ್ಲಿ ಕಿರಿಯವಳ ಗಂಡ ಮುಂಬಯಿಯ ಜೋಗೇಶ್ವರಿಯಲ್ಲಿ ಇರುವ ಇಸ್ಮಾಯಿಲ್ ಯುಸೂಫ್ ಕಾಲೇಜಿನಲ್ಲಿ ಮೆಥೆಮೆಟಿಕ್ಸ್ ಪ್ರೊಫೆಸರ್ ಆಗಿದ್ದ. ಕಾಲೇಜ್ ಲೆಕ್ಚರರ್‌ಗೂ ನಮ್ಮ ಕಡೆಯಲ್ಲಿ ಪ್ರೊಫೆಸರ್ ಅನ್ನುತ್ತಿದ್ದರು. ಈಗಲೂ ಹೇಳುವ ರೂಢಿ ಹೋಗಿಲ್ಲ. ಅವನಿಗೆ ಬುದ್ಧಿ ಭ್ರಮಣೆ ಆಯ್ತು. ಬೇರೆ ದಾರಿ ಕಾಣದೆ ಧಾರವಾಡದ ಹುಚ್ಚಾಸ್ಪತ್ರೆಗೆ ಸೇರಿಸಿದ್ರು. ಅಲ್ಲಿಯೇ ತೀರಿಕೊಂಡ. ನನ್ನ ಅಕ್ಕನ ಬಾಳು ಭಗ್ನವಾಯ್ತು. ಮುಂಬಯಿಗೆ ಹೋಗಿ ಕಾಲೇಜು ಶಿಕ್ಷಣ ಮುಂದುವರಿಸಬಹುದೆಂದು ನಾನು ಕನಸು ಕಟ್ಟಿಕೊಂಡಿದ್ದೆನಲ್ಲಾ ಅದೂ ಭಗ್ನವಾಯ್ತು. ಆಗ ಸಪ ಗಾಂವಕರ್ ಅಂತ ನಮ್ಮ ಕಡೆಯವರು, ಕನ್ನಡದ ಕವಿ ಅವರು ನನ್ನ

ಜೀವನದಲ್ಲಿ ಪ್ರವೇಶವಾದರು. (ಭಾವುಕದನಿಯಲ್ಲಿ) ನಾನು ನನ್ನ ಬದುಕಲ್ಲಿ ಅಷ್ಟು ದೊಡ್ಡವರನ್ನ ನೋಡಿಲ್ಲ. ನಿಜವಾಗಿಯೂ ಅಸೀಮ ಅಂತ:ಕರಣದ ವ್ಯಕ್ತಿತ್ವ ಅವರದು. ಅವರು ರವೀಂದ್ರನಾಥ ಟಾಗೂರರ 'ಗೀತಾಂಜಲಿ' ಅನುವಾದ ಮಾಡಿದೋರು. ಜಾತಿ ಮತ ಧರ್ಮ ಅಂತ ತಲೆಗೆ ಹಾಕ್ಕೋಳ್ತಿರಲಿಲ್ಲ. ಕಷ್ಟದಲ್ಲಿರೋರು ಯಾರು ಬಂದರೂ ಸಹಾಯ ಮಾಡತಿದ್ರು. ನಾನು ಹೈಸ್ಕೂಲ್ಲಿನಲ್ಲಿದ್ದಾಗ ಕವನಗಳನ್ನು ಬರೀತಾ ಇದ್ದೆ. ಗೋಪಾಲಕೃಷ್ಣ ಅಡಿಗರು ಇಂಗ್ಲಿಷ್ ಪ್ರೊಫೆಸರಾಗಿ ಕೆನರಾ ಕಾಲೇಜಿನಲ್ಲಿದ್ದರಲ್ಲ, ವಿದ್ಯಾರ್ಥಿ ಕವಿ ಗೋಷ್ಠಿಗೆ ಅಂತ ನಮ್ಮ ಸ್ಕೂಲಿಗೆ ಬಂದಿದ್ದರು. ನಾವೆಲ್ಲ ಕವನ ಓದಿದೆವು. ಕವಿಗೋಷ್ಠಿ ಆದಮೇಲೆ ನನ್ನೊಬ್ಬನ ಕವನ ಚೆನ್ನಾಗಿದೆ, ಇನ್ನುಳಿದವರದು ಸರಿಯಿಲ್ಲ, ಅನುಭವಕ್ಕೆ ಸಂಬಂಧಪಟ್ಟದಲ್ಲ ಅಂತ ಏನೊ ಅಡಿಗರು ಹೇಳಿದರು. ಗಾಂವಕರ್ ಆ ಸಭೆಯಲ್ಲಿ ಕೂತಿದ್ದರು. ಅವರೂ ಕವಿ ತಾನೇ? ಸಭೆ ಮುಗೀತಿದ್ದ ಹಾಗೇನೆ ತಾವಾಗಿ ಬಂದು ಕೊಂಡು ನನ್ನ ಅರೆತಬ್ಬಿಕೊಂಡು ಮಾತಾಡಿಸಿದರು. ಅಲ್ಲಿಂದ ನನ್ನ ಮೇಲೆ ಅವರಿಗೆ ಪ್ರೀತಿ. ನಾನು ಕಾಲೇಜೋದೋಕೆ ಬೆಳಗಾವಿಗೆ ಹೋದರೆ ಅಂತ ಅಲ್ಲಿ ನಾಗನೂರು ಮಠದಲ್ಲಿ ಊಟದ ವ್ಯವಸ್ಥೆನೂ ಮಾಡಿದ್ರು. ಆದರೆ ನಾನು ಮೈಸೂರಿಗೇ ಹೋಗಬೇಕು, ದೊಡ್ಡ ಕವಿಯಾಗಬೇಕು ಅಂತ ಅವರಿಗೆ ಆಸೆ. ಅಷ್ಟೊತ್ತಿಗಾಗಲೇ ಅಡಿಗರು ಮೈಸೂರಿನ ಸೇಂಟ್ ಫಿಲೋಮಿನಾ ಕಾಲೇಜಿಗೆ ಬಂದಿದ್ದರು. ಆಗ ಗಾಂವಕರ್‌ರು ಟಿ ಎಸ್ ಸುಬ್ಬಣ್ಣನವರ ಸಾರ್ವಜನಿಕ ಹಾಸ್ಟಲಿಗೆ ಸೇರೋಕೆ ಬೇಕಾದ ಎಲ್ಲ ವ್ಯವಸ್ಥೆ ಮಾಡಿದರು. ಹಂಗಾಗಿ ಆ ಕಡೆ ಹೊರಟೋನು, ಈ ಕಡೆ ಬಂದೆ. ಆ ಕಾಲದಲ್ಲಿ ನನ್ನ ಅಪ್ಪನ ಆರ್ಥಿಕಸ್ಥಿತಿ ಕೆಟ್ಟ ದರಿದ್ರಾವಸ್ಥೆಯಲ್ಲಿತ್ತು. ಆಗ ಪಾರ್ವತಿ ಎಂಬ ವಿಧವೆ ಕುಂಬಾರವಳು, ನಮ್ಮೂರಿನ ಬೀರದೇವರ ಗುನಗ ಅಂದರೆ ಪೂಜಾರಿಯ ಮಗಳು, ಇನ್ನೂರು ರೂಪಾಯಿ ಸಾಲ ಅಪ್ಪನಿಗೆ ಕೊಟ್ಟಳು. ಅವಳ ಗಂಡ ಫಾರೆಸ್ಟ್ ಗಾರ್ಡ್ ಆಗಿದ್ದವನು, ತೀರಿ ಹೋಗಿದ್ದ. ಆ ಪಾರ್ವತಕ್ಕ ಈಗಲೂ ಇದ್ದಾಳೆ. ನನ್ನ ವಿಷಯದಲ್ಲಿ ಅಪಾರ ಪ್ರೀತಿ, ಅಭಿಮಾನ ಈಗಲೂ ತೋರಿಸ್ತಾಳೆ. ಗಾಂವಕರ್‌ರ ಹಾಗೆ ಅವಳನ್ನೂ ನೆನೆಯುತ್ತಿರುತ್ತೇನೆ. ಗಾಂವಕರ್ ಅವರು ಕುವೆಂಪು ಅಭಿಮಾನಿ. ಬರುವಾಗ ಅವರು "ಕುವೆಂಪುರನ್ನು ಗುರುವಾಗಿ ಮಾಡ್ಕೋಬೇಕು, ಕವಿಯಾಗಿ ಬೆಳೀಬೇಕು" ಎಂದು ಹೇಳಿ ಮತ್ತೆ 'ಅಡಿಗರೂ ಪ್ರತಿಭಾವಂತ ಕವಿ, ಆದರೂ ಕುವೆಂಪು ದಾರಿ ಆತ್ಮೋದ್ಧಾರದ ದಾರಿ' ಎಂದು ಹೇಳಿದ್ರು.

ಸಂ: ಆಮೇಲೆ? ಕುವೆಂಪು ಅವರನ್ನ ಭೇಟಿಯಾದರಾ ನೀವು?

ನಾಯಕ: ಮೈಸೂರಿಗೆ ಬಂದೋನೇ ಕುವೆಂಪು ಇದ್ದಲ್ಲಿ ಹೋಗಿದ್ದೆ, ಗುರುವಾಗಿ ಅಂತ ಕೇಳ್ಕೊಳೋಕೆ. (ನಗು) 'ಕುವೆಂಪು ಯಾರನ್ನೂ ಮಾತಾಡಿಸಲ್ಲ' ಅಂತೆಲ್ಲ ಹೇಳೋರು. ೧೯೫೪ ಆಗಸ್ಟ್ ೬ನೇ ತಾರೀಖು ಭಾನುವಾರ ಬೆಳಿಗ್ಗೆ ಕುವೆಂಪು ಇದ್ದಲ್ಲಿ ಹೋದೆ.

ಹೋಗಿ ಗೇಟ್ ಹತ್ತಿರ ನಿಂತೆ. ಕುವೆಂಪು ಯಾರದೋ ಜೊತೆಯಲ್ಲಿ ಹುಲ್ಲು ಹಾಸಿನ ಮೇಲೆ ಬೆತ್ತದ ಕುರ್ಚಿ ಹಾಕಿಬಿಟ್ಟು ಕೂತಿದ್ದರು. ಎದುರುಗಡೆ ಒಬ್ಬರು ಕೂತಿದ್ದರು. ಅವರು ಪ್ರಭುಶಂಕರ ಅಂತ ಆಮೇಲೆ ಗೊತ್ತಾಯಿತು. ಕುವೆಂಪು ನನ್ನನ್ನ ನೋಡದವರೇ 'ಬಾ' ಅಂತ ಕೈಸನ್ನೆ ಮಾಡಿದರು. ನಾಲ್ಕು ಕವನಗಳನ್ನು ಚೆಂದ ಅಕ್ಷರದಲ್ಲಿ ಬರೆದುಕೊಂಡು ರೆಡಿ ಮಾಡಿಕೊಂಡು ಹೋಗಿದ್ದೆ, ಹೋದ ತಕ್ಷಣ ಅವರ ಕೈಯಲಿ ಕೊಟ್ಟು "ಸಾರ್, ನನಗೆ ಅಂಕೋಲೆಯ ಸಪ ಗಾಂವಕರ್ ಕಳ್ಸಿದಾರೆ, ನಾನು ಕವನ ಬರೀತೀನಿ, ತಾವು ನನಗೆ ಗುರು ಆಗಬೇಕು" ಅಂತ ಒಂದೇಸಲ ಪಟಪಟ ಅಂತ ಹೇಳಿದೆ. ಅವರು ನೇರವಾಗಿ ಉತ್ತರ ಹೇಳಲಿಲ್ಲ. ಪ್ರಭುಶಂಕರ್ ಕಡೆ ತಿರುಗಿ 'ಅಧ್ಯಾತ್ಮಕ್ಕೆ ಗುರು ಬೇಕು. ಕಾವ್ಯಕ್ಕೆ ಗುರು ಬೇಕೇಬೇಕು ಎಂದೇನು ಇಲ್ಲ' ಅಂತ ಹೇಳಿದರು. ನನ್ನ ಕಡೆ ತಿರುಗಿ 'ಒಳಗಡೆ ಪ್ರತಿಭೆಯ ಕಿಡಿ ಇದ್ರೆ ತನಗೆತಾನೆ ಒಂದು ರೂಪ ಪಡೆದುಕೊಳ್ತದೆ. ಹಿರಿಯರು ಬರೆದ ಕಾವ್ಯ ಓದುತ್ತಿರಬೇಕು' ಅಂದು ಬಿಟ್ಟರು. ಕೊನೆಗೆ ಗಾಂವಕರ್ ಬಗ್ಗೆ ಎಲ್ಲಾ ಕೇಳಿದರು.

ಸಂ: ಗಾಂವಕರ್ ರಮ್ಯ ಸಂಪ್ರದಾಯದಲ್ಲಿ ಕವಿತೆ ಬರೀತಿದ್ದೋರು ಅಂತ ಗೊತ್ತಿದೆ. ಅವರು ಸಾರ್ವಜನಿಕ ವ್ಯಕ್ತಿಯಾಗಿ ಏನಾಗಿದ್ದೋರು ಗೊತ್ತಿಲ್ಲ.

ನಾಯಕ: ಅವರು ಕನ್ನಡ ಶಾಲೆ ಮಾಸ್ತರಾಗಿ ಇನ್ಸ್‌ಪೆಕ್ಟರಾಗಿ ರಿಟೈರಾದವರು. ಚಲೇಜಾವ್ ಚಳವಳಿಯಲ್ಲಿ ಹೋರಾಟಕ್ಕಿಳಿದು ಜೈಲು ಶಿಕ್ಷೆ ಅನುಭವಿಸಿದವರು. ಆಮೇಲೆ ಎಂ ಎಲ್ ಎ ಆದರು. ಪಾರ್ಲಿಮೆಂಟರಿ ಸೆಕ್ರೆಟರಿಯಾದರು-ಬಿಜಿ ಖೇರ್ ಅವರ ಗವರ್ಮೆಂಟಿನಲ್ಲಿ.ಉತ್ತರ ಕರ್ನಾಟಕದಲ್ಲಿ ಕರ್ನಾಟಕದ ಏಕೀಕರಣದ ಬಹುದೊಡ್ಡ ಹೋರಾಟಗಾರರಲ್ಲಿ ಅವರೂ ಒಬ್ಬರು. ಮುಖ್ಯವಾಗಿ ಸಾಮಾಜಿಕವಾಗಿ ದೊಡ್ಡ ಕೆಲಸ ಮಾಡಿದವರು. ಎಷ್ಟು ಜನರನ್ನು ಓದಿಸಿದ್ದಾರೆ ಅಂತ ಲೆಕ್ಕ ಮಾಡಕ್ಕಾಗಲ್ಲ.

ಸಂ: ಕುವೆಂಪು ಅವರಿಗೂ ಯಾವ ತರಹದ ಸಂಬಂಧ ಬಂತು ಸಾರ್ ?

ನಾಯಕ: ಬಹಳ ಇಂಟರೆಸ್ಟಿಂಗ್. ಗಾಂವಕರ್ ಗೆ ಕುವೆಂಪು ಯಾಕಷ್ಟು ಗೊತ್ತಿತ್ತು ಅಂದರೆ, ಕುವೆಂಪು ಅವರನ್ನ ಒಬ್ಬಳು ಲವ್ ಮಾಡ್ತಾ ಇದ್ದಳು, ಕೊಡಗಿನವಳು. ಅದು ಒನ್ ಸೈಡೆಡ್ ಲವ್. ಬಹಳ ಚೆಂದ ಇದ್ದಳಂತೆ. ಕುವೆಂಪು ಮದುವೆಯಾಗಲ್ಲ ಅಂತ ಇತ್ತಲ್ಲ, ಅವಳಿಗೆ ಹೋಗಿ ಕೇಳ್ಲಿಕ್ಕೆ ಧೈರ್ಯಾನೆ ಬರಲಿಲ್ಲ. ಆಕೆ ಗಾಂವಕರ್ ಹತ್ರ ಹೋಗಿ, 'ನಾನು ಅವರನ್ನ ಇಷ್ಟ ಪಟ್ಟಿದೀನಿ. ನೀವೇನಾದರೂ ಮಾಡಿ' ಅಂತ ಹೇಳಿದಾಗ, ಗಾಂವಕರರು ಕುವೆಂಪು ಅವರಿಗೆ ಪತ್ರ ಬರೆದಿದ್ದರಂತೆ. ಗಾಂವಕರ್‌ರು ಆ ಕಾಲದಲ್ಲಿ ಆರ್ಯ ಧರ್ಮದ ಪ್ರಚಾರಕರಾಗಿದ್ರು. ಕುವೆಂಪು ತಮ್ಮ ಜೀವನದ ತತ್ವಗಳ ಸಿದ್ಧಾಂತಗಳ ಬಗ್ಗೆ ಹೇಳ್ಕೊಂಡು, ಕೊನೆಗೆ 'ನನ್ನನ್ನು ಬಿಡಿ ನಿಮಗೆ ಈ ವಿಷಯದಲ್ಲಿ ಏನೂ ಹೇಳಬೇಕಾದ್ದಿಲ್ಲ' ಅಂತ, ಒಟ್ನಲ್ಲಿ ಮದುವೆ ಬಗ್ಗೆ ಯೋಚ್ನೆ ಮಾಡ್ತಾ ಇಲ್ಲ ಅನ್ನೋ ತರಹ, ಏನೋ ಬರೆದಿದ್ದರಂತೆ.

ಅದು ನನಗೆ ಆಮೇಲೆ ಊರಿಗೆ ಬಂದ ಮೇಲೆ ಗಾಂವಕರಿಂದ ಗೊತ್ತಾಯಿತು. ಗಾಂವಕರ್‌ರು ಭಾವಜೀವಿ. ಅಧ್ಯಾತ್ಮ ಹೇಳಿತಿದ್ದರಷ್ಟೇ ಅಲ್ಲ, ಅದನ್ನ ಬಾಳು ತ್ತಿದ್ದರು. ಹಾಗಾಗಿ ಕುವೆಂಪು, ಕುವೆಂಪು ಕಾವ್ಯ ಅಂದರೆ ಅವರಿಗೆ ಅಭಿಮಾನ.

ಸಂ: ಕುವೆಂಪು ನಿಮಗೆ ಓದುವಾಗ ಗುರುಗಳಾಗಿದ್ದರಾ?

ನಾಯಕ: ಇಲ್ಲ, ಅವರು ೧೯೫೫ ರಲ್ಲಿ ಮಹಾರಾಜಾ ಕಾಲೇಜಲ್ಲಿ ಪ್ರಿನ್ಸಿಪಾಲ್ ಆಗಿದ್ರೋರು ೧೯೫೬ರಲ್ಲಿ ನಾನು ಆ ಕಾಲೇಜಿಗೆ ಬರ್ತಾ ಇದ್ದಾಗೇನೆ, ವೈಸ್ ಛಾನ್ಸಲರಾಗಿ ಹೊರಟು ಹೋದರು. ಆಗ ತೀನಂಶ್ರೀ ಇನ್ನೂ ಬಂದಿರಲಿಲ್ಲ. ಅವರು ಕರ್ನಾಟಕ ಯೂನಿರ್ವಸಿಟಿಗೆ ಪ್ರೊಫೆಸರಾಗಿ ಹೋದವರು ಆಮೇಲೆ ಬಂದ್ರು. ಡಿ ಎಲ್ ನರಸಿಂಹಾಚಾರ್ ತೀನಂಶ್ರೀ - ಇವರಿಬ್ಬರೇ ನಮಗೆ ಗಟ್ಟಿಯಾದ ಪ್ರಾಧ್ಯಾಪಕರು. ಇವರ ಪಾಠದ ಬಗ್ಗೆ ವಿದ್ವತ್ತಿನ ಬಗ್ಗೆ ಬಹಳ ಗೌರವ ನಮಗೆ. ವ್ಯಕ್ತಿಯಾಗಿ ಡಿಎಲ್‌ಎನ್ ಹೆಚ್ಚು ಹತ್ತಿರಕ್ಕೆ ಬಂದೋರು. ಏಕ ವಚನದಲ್ಲೇ ಮಾತಾಡಿಸ್ತಿದ್ರೂ ಅವರ ಬಗ್ಗೆ ಪೇರೆಂಟಲ್ ಫೀಲಿಂಗ್ ಇರೋದು. ಜಾತಿ ಭಾವನೆಗಳು ಏನೂ ಸೋಕದೆ ಇದ್ದಂಥ ಮೇಷ್ಟ್ರು ಅವರು. ವಿದ್ವತ್ತಿಗಿಂತ ಅವರ ಸಮಭಾವ ಅಫೆಕ್ಷನ್ ಇತ್ತಲ್ಲ, ಅದು ಬಹಳ ಗೌರವ ತಂದದ್ದು. ಅವರ ಮುಗುಳು ನಗುವಿನದೇ ಒಂದು ಅಪರೂಪದ ಸೊಗಸು.

ಸಂ: ತೀನಂಶ್ರೀಯವರು ಸಾಮಾಜಿಕವಾಗಿ ಅಷ್ಟು ಉದಾರವಾಗಿರಲಿಲ್ಲ ಅಂತ ಅನೇಕರು ಕಾಮೆಂಟ್ ಮಾಡಿರೋದನ್ನ ನಾನು ಓದಿದ್ದೇನೆ.

ನಾಯಕ: ಅದೇನಂತ ನಾನು ಹತ್ತಿರದಿಂದ ವಿಶ್ಲೇಷಣೆ ಮಾಡಿ ಹೇಳಲಾರೆ. ನನಗೂ ಹಿತವಲ್ಲದ ಅನುಭವ ಒಂದೆರಡು ಸಂದರ್ಭಗಳಲ್ಲಿ ಆದದ್ದಿದೆ. ತರಗತಿಯಲ್ಲಿ ಮಾತ್ರ ಬಹಳ ಕ್ರಮಬದ್ಧತೆ ಶಿಸ್ತು ಅನುಕರಿಸೋ ಹಾಗಿತ್ತು. ನಮಗೆ ಸಲುಗೆ ಅಂತ ಮಾಡ್ಕೊಳ್ಳಿಕ್ಕೆ ಆಗಲಿಲ್ಲ. ಡಿಎಲ್‌ಎನ್ ಹತ್ತಿರಾನೂ ಸಲುಗೆ ಇರಲಿಲ್ಲ. ಆದರೆ ಅವರು ಸುಮ್ನೆ 'ಏನಯ್ಯಾ, ಚೆನಾಗಿದೀಯಾ?' ಅಂತ ಕೇಳಿದರೇನೇ ಹಿತವಾದ ಭಾವನೆ ಬರ್ತಾ ಇತ್ತು. ನನ್ನ ಕ್ಲಾಸ್‌ಮೇಟ್ ಮಿತ್ರ ಬಿ.ವಿ. ವೈಕುಂಠರಾಜುಗೆ ಡಿಎಲ್‌ಎನ್ ಬಗ್ಗೆ ಅಪಾರ ಗೌರವ, ಅಷ್ಟೇ ಸಲುಗೆ ಇತ್ತು. ಆರು ಜನ ಹೆಣ್ಮಕ್ಕಳ ತಂದೆಯಾಗಿದ್ದ ಡಿಎಲ್‌ಎಸ್ ಅವರು ವೈಕುಂಠರಾಜುವನ್ನ ಸ್ವಂತ ಮಗನೊ ಎಂಬಂಥ ಪ್ರೀತಿ ವಾತ್ಸಲ್ಯದಿಂದ ಕಾಣುತ್ತಿದ್ದರು. ಅವನ ತುಂಟತನಗಳನ್ನೆಲ್ಲ ಅವರು ಮುಗುಳು ನಗೆಯ ಲೇಪದಲ್ಲಿ ಲೇವಡಿ ಮಾಡುವ, ಛೇಡಿಸುವ ರೀತಿ ಅನನ್ಯವಾಗಿತ್ತು. ವೈಕುಂಠರಾಜು ಜಾತಿಯಿಂದ ಬ್ರಾಹ್ಮಣನಲ್ಲ. ಅದು ಅವರಿಗೂ ಗೊತ್ತಿತ್ತು. ಒಟ್ಟಿನಲ್ಲಿ ತೀನಂಶ್ರೀಗಿಂತ ಡಿಎಲ್‌ಎನ್ ನನಗೆ ಹೆಚ್ಚು ಪ್ರಿಯರಾಗಿದ್ದರು.

ಸಂ: ಜಿಎಸ್ ಎಸ್, ಪ್ರಭುಶಂಕರ್ ಕೂಡ ಆಗ ಮಹಾರಾಜಾಸ್‌ನಲ್ಲಿ ಇದ್ದರಲ್ವಾ?

ನಾಯಕ: ಹೌದು, ಇದ್ರು. ಶಿವರುದ್ರಪ್ಪನವರು ಎಳೆಯ ತಲೆಮಾರಿನವರಲ್ಲಿ ಸಮರ್ಥರು

ಅಂತ ಅನಿಸೋದು. ಆಗ ನನಗೆ ಇಷ್ಟವಾದ ವ್ಯಕ್ತಿ ಹಾಗೂ ಮೇಷ್ಟ್ರು ಅವರು. ತುಂಬ ಶ್ರದ್ಧೆಯಿಂದ ಪಾಠ ಮಾಡೋರು. ಸಾಹಿತ್ಯ ಸಂಬಂಧವಾದ ಎಷ್ಟೋ ಹೊಸ ವಿಷಯಗಳನ್ನು ಹೇಳೋರು. ಸ್ವತ: ಕವಿಬೇರೆ ಆಗಿದ್ದರಲ್ಲವಾ, ಅವರ ಬಗ್ಗೆ ನಮಗೆ ಕುತೂಹಲ ಆಸಕ್ತಿ ಇತ್ತು. ಆದರೆ ನಾನು, ಎಚ್ ಎಂ ಚನ್ನಯ್ಯ ನವ್ಯದ ಅಡಿಗರು ಅನಂತಮೂರ್ತಿಯವರ ಪ್ರಭಾವಕ್ಕೆ ಒಳಗಾಗಿ ಬಿಟ್ಟಿದ್ದೆವು. ಮುಂದೆ ಶಿವರುದ್ರಪ್ಪ ನವರು ಸಾಹಿತಿಯಾಗಿ, ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಮೌಲಿಕ ಸಾಧನೆ ಮಾಡಿದರು, ಅನೇಕ ಪ್ರತಿಭಾವಂತರನ್ನು ಗುರುತಿಸಿ ಪ್ರೋತ್ಸಾ ಹಿಸಿದರು. ೧೯೭೨ರಲ್ಲಿ ತಾವಾಗಿ ನನ್ನನ್ನು ಬೆಂಗಳೂರು ವಿ.ವಿ.ಗೆ 'ಬಾ' ಎಂದು ಕರೆಯುವಂಥ ಸದ್ಭಾವನೆಯನ್ನು ತೋರಿಸಿದ್ದರು. ನಾನು ಕಾರಣಾಂತರದಿಂದ ಒಪ್ಪಿಕೊಂಡಿರಲಿಲ್ಲ. ನಮಗೆ ಪ್ರಭುಶಂಕರ ಕೂಡ ಇದ್ದರು ಮೇಷ್ಟ್ರಾಗಿ. ಕುವೆಂಪು ಪ್ರಭಾವ ವಲಯದಿಂದ ಅವರಿನ್ನೂ ಬಿಡುಗಡೆ ಪಡ್ಕೊಂಡ ಹಾಗೆ ಕಾಣ್ತಿರಲಿಲ್ಲ. ನಮ್ಮ ಗುರುಗಳಲ್ಲೆಲ್ಲ ಅವರು ತುಂಬ ಉದಾರಿ, ಧೈರ್ಯಶಾಲಿ ಆಗಿದ್ದರು.

ಸಂ: ಹಳ್ಳಿಯಿಂದ ಬಂದ ನಿಮಗೆ ಈ ರೊಮ್ಯಾಂಟಿಕ್ ಕ...ಗಳು ಮೊದಲು ಸೆಳೀಬೇಕಾಗಿತ್ತು. ಬದಲಾಗಿ ನವ್ಯ ಲೇಖಕರಾದ ಅನಂತಮೂರ್ತಿ ನಿಮಗೆ ಸೆಳೆದರು. ಇದು ಹ್ಯಾಗೆ ಸಾಧ್ಯವಾಯ್ತು?

ನಾಯಕ: ನಾನು ಟಿ ಎಸ್ ಸುಬ್ಬಣ್ಣನವರ ಸಾರ್ವಜನಿಕ ಹಾಸ್ಟೆಲಿಗೆ ಹೋದಾಗ. ಅಲ್ಲಿ ಅನಂತಮೂರ್ತಿ ಓದ್ತಾ ಇದ್ದರು. ಅವರ ಪರಿಚಯ ಮೊದಲಾಗಿದ್ದು ಅಲ್ಲೆ. ಅವರು ಆನರ್ಸ್ ಆನರ್ಸಿನಲ್ಲಿ ಇದ್ದರು-ಥರ್ಡ್ ಅವರು ಹಾಸ್ಟಲಿನಲ್ಲಿ ನಡೆಯೋ ಅಗಸ್ಟ್ ೧೫ರ ಕಾರ್ಯಕ್ರಮದಲ್ಲಿ ಭಾಷಣ ಮಾಡಿದರು. ನನಗೆ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆ ಇದ್ದುದರಿಂದ ಉತ್ಸಾಹ ಇತ್ತಲ್ಲ, ನಾನೂ ಮಾಡಿದೆ. 'ಅನಂತಮೂರ್ತಿ ಎಷ್ಟು ಚೆನ್ನಾಗಿ ಮಾತಡ್ತಾರಪ್ಪ, ಮೈಸೂರು ಭಾಷೆ ಎಷ್ಟು ಚೆಂದ. ನಾನೂ ಹಂಗೆ ಕಲೀಬೇಕಲ್ಲಾ' ಅಂತ ಅನಿಸ್ತು. ನನಗೆ ಅದೇ ವರ್ಷ ಸಲ ಇಂಟರ್ ಹಾಸ್ಟೆಲಿನ ಡಿಬೇಟಿನಲ್ಲಿ ಫಸ್ಟ್ ಪ್ರೈಜ್ ಬಂತು ಸಿಲ್ವರ್ ಕಪ್ಪು. ಅನಂತಮೂರ್ತಿ ನನಗೆ ವಿಷಯ ಹೇಳಿಕೊಟ್ಟಿದ್ದರು. ಆಗ ನನಗೆ 'ಇವರೆಷ್ಟು ದೊಡ್ಡವರು' ಅಂತ ಭಾವನಾತ್ಮಕವಾಗಿ ಗೌರವ ಬಂತು. ಊಟ ಮಾಡುವಾಗ ಒಂದೊಂದು ದಿನಾ ನನ್ನ ಪಕ್ಕದಲ್ಲಿ ಕೂರೋರು. ಹಾಸ್ಟೆಲಲ್ಲಿ ಊಟಕ್ಕೆ ರಾಗಿ ಮುದ್ದೆ ಬೇಕಷ್ಟು ಹಾಕೋರು. ಅನ್ನಕ್ಕೆ ಮಾತ್ರ ಲಿಮಿಟ್. ಒಂದೇ ಅಳತೆ ಪ್ರಮಾಣ. ರಾಗಿ ಮುದ್ದೆ ಊಟ ಮಾಡ್ತಾರೆ ಎಂಬುದೇ ಗೊತ್ತಿಲ್ಲದ ಕಡೆಯಿಂದ ಬಂದಿದ್ದೋನು ನಾನು. ಮುದ್ದೆ ತಿನ್ನುವ ಅಭ್ಯಾಸ ಬೆಳೆಸಿಕೊಳ್ಳೋಕೆ ಸ್ವಲ್ಪ ಕಾಲ ಬೇಕಾಯ್ತು. ಹಾಗಾಗಿ ಹೊಟ್ಟೆ ತುಂಬ ಊಟ ಆಗ್ತಿರಲಿಲ್ಲ. ನನಗೆ ಹಸಿವೆ ಜಾಸ್ತಿ ಆಗ್ತಿತ್ತು. ಅನಂತಮೂರ್ತಿ ಎರಡೊ ಮೂರೊ ಸಲ ತಮ್ಮ ಅನ್ನವನ್ನು ತೆಗೆದು ಸ್ವಲ್ಪ ನನಗೆ ಹಾಕಿದ್ದರು.

ಭಾವನಾತ್ಮಕವಾಗಿ ಅನಂತಮೂರ್ತಿ ಹತ್ತಿರ ನನಗೆ ಆದದ್ದಕ್ಕೆ, ಅವರ ಮೇಲೆ ಇಂಟಿಮೇಟ್ ಭಾವನೆಗಳು ಬೆಳೆದಿದ್ದಕ್ಕೆ, ಇದೂ ಒಂದು ಕಾರಣ ಇರಬಹುದು. ಜೊತೆಗೆ, ಕಾಲೇಜಿಗೆ ಹೋಗುವ ಅವರ ಜೊತೆಯಲ್ಲಿಯೆ ಹೆಚ್ಚಾಗಿ ಹೋಗ್ತಿದ್ದೆ. ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ, ಅಡಿಗ ಎಂದು ಹೆಸರು ಹೇಳಬಹುದಾದಷ್ಟು ಆಸಕ್ತಿ ಇತ್ತು. ಒಂದಷ್ಟು ಸಾಹಿತ್ಯದ ಓದಿನ ಹಿನ್ನೆಲೆ ನನಗೆ ಆಗಲೇ ಇತ್ತು. ಸಾಹಿತ್ಯದ ಬಗ್ಗೆ ಅನಂತಮೂರ್ತಿ ಉತ್ಸಾಹದಿಂದ ಪರಿಣಾಮಕಾರಿಯಾಗಿ ಮಾತಾಡ್ತಿದ್ದರು. ಹೊಸ ಹೊಸ ವಿಚಾರಗಳನ್ನು ಹೇಳ್ತಾ ಇದ್ರು. ಪ್ರಬುದ್ಧ ಕರ್ನಾಟಕದಲ್ಲಿ, ಅಲ್ಲಿ ಇಲ್ಲಿ ಅವರ 'ಎಂದೆಂದೂ ಮುಗಿಯದ ಕಥೆ' ಸಂಕಲನದ ಕಥೆಗಳು ಒಂದೊಂದೇ ಪ್ರಕಟವಾಗ್ತಾ ಇದ್ದವು. ಓದ್ತಾ ಇದ್ದೆ. ಶಿವರುದ್ರಪ್ಪ, ಪ್ರಭುಶಂಕರ ಇವ್ರೆಲ್ಲ ನನಗೆ ಗುರುಗಳಾದದ್ದು ೧೯೫೬ ರಿಂದಲೇ ಅನಂತಮೂರ್ತಿ ಸಂಬಂಧ ೧೯೫೪ ರಿಂದ ಪ್ರಾರಂಭವಾದದ್ದು.

ಸಂ: ನೀವು ಪದ್ಯ ಬರೀತಾ ಇದ್ದೋರು ಅಂದ್ರಿ. ಅದನ್ನ ಯಾಕೆ ನಿಲ್ಲಿಸಿದಿರಿ?

ನಾಯಕ: ನಾನು ಕವನ ಬರೀತಿದ್ದದ್ದೇ ಛಂದೋಬದ್ಧವಾಗಿ, ನವೋದಯವರ ರೀತಿಯಲ್ಲಿ. "ನೂರು ಸೀರೆಯ ಒರೆನೋಟ ಕರೆಯುತ್ತಿಹುದು ಬಾರೋ ಬೃಂದಾವನಕೆ ಕೃಷ್ಣನಾಗು" "ಹೂವನು ಹೂವೇ ಕೊಯ್ಯುವುದೇನೊ ಏನೋ ಎಂಬಂತೆ. ಆ ಕಿರುಬೆರಳುಗಳೆಲ್ಲವು ಕಾಂಬವು ಸುಮದಾ ಎಸಳಂತೆ" - ಈ ತರಹ ಎಲ್ಲ ಕವನ ಬರೀತಿದ್ದೆ. ಒಂದ್ಸಲ 'ಕಿಂದರಿ ಜೋಗಿ' ಅಂತ ಒಂದು ಕವನ ಬರದು ಅನಂತಮೂರ್ತಿಗೆ ತೋರಿಸ್ದೆ. ಕುವೆಂಪು ಕವನದಲ್ಲಿ ಒಬ್ಬ ಕುಂಟ ಬರ್ತಾನಲ್ಲ, ನಾನೂ ಅವನ ತರಹ ಹೆಳವ ಅಂತಿಟ್ಕೊಂಡು ಏನೇನೊ ಆಧ್ಯಾತ್ಮಿಕವಾಗಿ ಬರೆದಿದ್ದೆ. ಅನಂತಮೂರ್ತಿ ಓದಿ 'ಚೆನ್ನಾಗಿದೆ. ಆದರೆ ನಾಯಕರೆ, ಈ ಅಧ್ಯಾತ್ಮ ಅನ್ನೋದಿದೆ ಯಲ್ಲ ಪ್ರಾಮಾಣಿಕ ಅನ್ನಿಸ್ತಾ ಇಲ್ಲ-ಈ ವಯಸ್ನಲ್ಲಿ' ಅಂದ್ರು. ನನಗೆ ಯೋಚ್ನೆ ಮಾಡೋ ಹಾಗೆ ಆಯ್ತು. ಮುಂದೆ ನನಗೆ ಕವನ ಬರೆಯೋದರಲ್ಲಿ ಉತ್ಸಾಹ ಕಡಿಮೆ ಆಯ್ತು. ಸ್ವಾರಸ್ಯ ಅಂದರೆ, ಆ ಕವನ ಮೊದಲೇ ನನ್ನ ಗುರುಗಳಾಗಿದ್ದ ಸುಜನಾ ಅವರಿಗೆ ತೋರಿಸಿದ್ದೆ. ಮೆಚ್ಚಿಕೊಂಡು ಅವರು ತೀನಂಶ್ರೀ ಅವರಿಗೂ ತೋರಿಸಿದರಂತೆ. ಚೆನ್ನಾಗಿದೆ ಅಂದ್ರಂತೆ. ತರಗತಿಯಲ್ಲಿಯೆ ಸುಜನಾ ಹಾಗೆ ಹೇಳಿದ್ರು. ಆದ್ರೂ ಯಾಕೊ ಅನಂತಮೂರ್ತಿ ಅಭಿಪ್ರಾಯವೇ ಮುಖ್ಯವಾಗಿ ಕಂಡಿತ್ತು. 'ಅಲ್ಲಮ' , 'ಗೆಳೆಯ', 'ಬೀಟ್ ಪೋಲಿಸ್', 'ಎದೆಯಾಳ', 'ದಿಲ್ಲಿಯಿಂದ ದೇವಗಿರಿಗೆ' ಕವನಗಳನ್ನು ಆಮೇಲೆಯೂ ಪ್ರಕಟಿಸಿದ್ದೆ.

ಸಂ: ನೀವು ವಿಮರ್ಶೆ ಬರೆಯೋಕೆ ಶುರುಮಾಡಿದ್ದು ಯಾವಾಗ? ನಿಮ್ಮ ಮೊದಲ ವಿಮರ್ಶೆ ಬರಹ ಯಾವುದು?

ನಾಯಕ: ೧೯೫೮-೫೯ ರಲ್ಲಿ ಮೂರನೆ ಆನರ್ಸ್ ವಿದ್ಯಾರ್ಥಿಯಾಗಿದ್ದಾಗ 'ಮಾಸ್ತಿಯವರ

ಕಾವ್ಯ' ಕುರಿತು ಕನ್ನಡ ವಿಭಾಗದವರ ಸಾಹಿತ್ಯ ಗೋಷ್ಠಿಯಲ್ಲಿ ಮಂಡಿಸಲೆಂದು ಒಂದು ಪ್ರಬಂಧ ಬರೆದಿದ್ದೆ. ಅದೇ ನಾನು ಬರೆದ ಮೊದಲ ವಿಮರ್ಶನ ಲೇಖನ. ಗೋಷ್ಠಿ ನಿರ್ವಾಹಕ ಮೇಷ್ಟ್ರು. ಜಿ ಎಸ್ ಶಿವರುದ್ರಪ್ಪನವರು ಪರಿಶೀಲಿಸಿ 'ಎ-೧' ಎಂದು ಶರಾ ಬರೆದಿದ್ರು. ಮಂಡಿಸಿದಾಗ ತೀನಂಶ್ರೀ, ಡಿಎಲ್‌ಎನ್ ಮೆಚ್ಚಿಕೆ ಸೂಚಿಸಿದರು. ಅದರಿಂದಾಗಿ ಪ್ರಬಂಧಕ್ಕೆ ಹೆಚ್ಚಿನ ಪ್ರಚಾರ ಸಿಕ್ಕಿತು. 'ಪ್ರಬುದ್ಧ ಕರ್ಣಾಟಕ'ಕ್ಕೆ ಕೊಡುವುದಕ್ಕೆ ತೀನಂಶ್ರೀನೇ ಹೇಳಿದ್ದರಿಂದ ಕೊಟ್ಟೆ. ದೊಡ್ಡ ಲೇಖಕರ ಬಗ್ಗೆ ಹೆಚ್ಚು ವಿಮರ್ಶಾತ್ಮಕವಾಗಿದೆ ಎಂಬ ಕಾರಣದಿಂದಾಗಿ ಪ್ರಕಟಿಸಲಿಲ್ಲ. ಆಗ ಸುಜನಾ ಸಂಪಾದಕರೆಂದು ನೆನಪು. ಲೇಖನ ಇಸಕೊಂಡೆ. ಅದೇ ಒಂದು ಸುದ್ದಿಯಾಯಿತು. ಆಗ ಇಂಗ್ಲೀಷ್ ಎಂ.ಎ. ವಿದ್ಯಾರ್ಥಿಯಾಗಿದ್ದ ಪಿ. ಲಂಕೇಶ್, ಆ ಲೇಖನದ ಬಗ್ಗೆ ಆಸಕ್ತಿ ತಾಳಿ ಓದಿ ಚರ್ಚಿಸಿ ಒಂದೊ ಎರಡೊ ಚಿಕ್ಕ ಬದಲಾವಣೆ ಸೂಚಿಸಿದರು. ಅವರೊ ಯಾರೊ ಆಸಕ್ತಿ ತೋರಿದ್ದರಿಂದಲೊ ಏನೊ ಮಹಾರಾಜ ಕಾಲೇಜಿನ ಕರ್ನಾಟಕ ಸಂಘದವರು ಅಲ್ಲಿ ನಾನು ಆ ಪ್ರಬಂಧ ಓದಬೇಕೆಂದು ಕರೆದರು. ಡಾ.ಸಿ ಡಿ ಗೋವಿಂದರಾವ್ ಇಂಗ್ಲೀಷ್ ಮೇಷ್ಟ್ರು-ಸಭಾಧ್ಯಕ್ಷರು. ದೊಡ್ಡ ಸಾಹಿತಿ ಬಗ್ಗೆ ವಿಮರ್ಶೆ ಮಾಡಿದ ನನ್ನ ಧಾರ್ಷ್ಟ್ಯಕ್ಕೆ ಚೆನ್ನಾಗಿ ಬೈದರು. ಲಂಕೇಶ್ ಸೂಚಿಸಿದ್ದ ಸೇರ್ಪಡೆಗಳಿಗೆ ಸಂಬಂಧಪಟ್ಟಂತೆಯೇ-ಹೆಚ್ಚಾಗಿ ಬೈಸಿಕೊಂಡೆ. ಮಧ್ಯೆ ಎಲ್ಲಿಯೊ 'ಸದ್ಗೃಹಸ್ಥ ದನಿ ಕೇಳಿಸುತ್ತದೆ' ಎಂದು ನಾನು ಮೊದಲು ಬರೆದಿದ್ದೆ. ಲಂಕೇಶ್ 'ನಿವೃತ್ತಿ ಅಧಿಕಾರಿಯ ದನಿ ಕೇಳಿಸುತ್ತದೆ ಅಂತ ಬರಿ' ಎಂದು ಸೂಚಿಸಿದ್ದರು. 'ನಿವೃತ್ತಿ ಅಧಿಕಾರಿ' ಎಂದು ಮಾತು ಬಳಸಿದ್ದಕ್ಕೂ ಡಾ. ಗೋವಿಂದರಾವ್ ಜೋರಾಗಿ ಬೈದರು. ಸಭೆ ಮುಗಿಸಿ ಹೊರಗೆ ಬಂದಾಗ ಬಿ ದಾಮೋದರರಾವ್ ಅವರು-ಲಂಕೇಶರ ಕ್ಲಾಸ್‌ಮೇಟ್ ಆಗಿದ್ದರು 'ಈ ಬೈಗುಳ ಲಂಕೇಶಪ್ಪನವರ ಕಾಣಿಕೆ, ಪ್ರಸಾದ' ಎಂದು ತಮಾಷೆಯಾಗಿ ಮೇಲುದನಿಯಲ್ಲಿ ಹೇಳಿ ನಸುನಕ್ಕರು. ಲಂಕೇಶ್ ಸಭೆಯಿಂದ ಹೊರ ಬಂದವರು ನನ್ನ ಹತ್ತಿರ ಬಂದು 'ಬೇಜಾರ ಮಾಡಿಕೊಳ್ಳಬೇಡಯ್ಯಾ ಆ ಗಲ್ಲಿ ಗೋವಿಂದರಾಯಗೆ ಲಿಟರೇಚರ್ ಏನ್ ಗೊತ್ತಾಗ್ತದೆ? ಕುಡುಬಿ ಬ್ರಾಹ್ಮಣ ಬೊಡ್ಡೀಮಗ' ಎಂದು ಗಟ್ಟಿಯಾಗಿಯೇ ಹೇಳಿದರು. ತಮ್ಮ ಮೇಷ್ಟ್ರು ಬಗ್ಗೆಯೇ ಲಂಕೇಶ್ ಹೀಗೆ ಹೇಳ್ತಾರಲ್ಲಪ್ಪಾ ಅನಿಸ್ತು. ಮೊದಲೇ ನರ್ವಸ್ ಆಗಿದ್ದ ನಾನು ಇನ್ನೂ ನರ್ವಸ್ ಆದೆ.

ಇದೆಲ್ಲದರ ಪ್ರಸ್ತಾಪ ಕಾಫಿ ಹೌಸಿನಲ್ಲಿ ಬಂತು. ಹತ್ತಿರದಲ್ಲೇ ಇದ್ದ 'ಹೊಟೆಲ್ ದಾಸ್ ಪ್ರಕಾಶ್'ನಲ್ಲಿ ನವ್ಯಸಾಹಿತಿಗಳನ್ನೆಲ್ಲ ಸೇರಿಸಿ ಓದುವುದೆಂದು ತೀರ್ಮಾನ ಆಯ್ತು. ಅಡಿಗರೂ ಇದ್ರು. ಅಲ್ಲಿ ಓದಿದೆ. ಹೆಚ್ಚು ಜನ ಮೆಚ್ಚಿಕೆ ಸೂಚಿಸಿದರು. ಅಡಿಗರು 'ಸಾಕ್ಷಿ' ಮೊದಲ ಸಂಚಿಕೆ ತರುವಾಗ ಇಸಗೊಂಡು ಮತ್ತೆ ಓದಿದರು. ಪ್ರಕಟಿಸುವುದು ಬೇಡ ಎಂದು ತೀರ್ಮಾನಿಸಿದ ಅವರು 'ಲೇಖನ ಒಟ್ಟಿನಲ್ಲಿ

ಚೆನ್ನಾಗಿದ್ದರೂ ಕೈ ಇನ್ನೂ ಸ್ವಲ್ಪ ಪಳಗಬೇಕು. ಮಾಸ್ತಿ ಕಾವ್ಯ ಇನ್ನೂ ಒಮ್ಮೆ ಓದಿ ನೋಡಿ' ಎಂದೇನೊ ಹೇಳಿ ಹಿಂದಕ್ಕೆ ಕೊಟ್ಟರು. ಆಗಿನ್ನೂ ತೇಜಸ್ವಿ ನಿಕಟ ಪರಿಚಯ ಇರಲಿಲ್ಲ. ಆದ್ರೂ ಆ ಲೇಖನದ ಬಗ್ಗೆ ಯಾರೊ ಹೇಳಿದ್ದನ್ನು ಕೇಳಿ ಬಂದು ಇಸಕೊಂಡ್ರು. ಆ ಲೇಖನ ಹೇಗೊ ಅವರ ಕೈಯಲ್ಲಿ ಕಳೆದು ಹೋಯಿತು. ಬೇರೆ ಪ್ರತಿ ಇರಲಿಲ್ಲ. ಇಷ್ಟೆಲ್ಲ ಚರಿತ್ರೆ ಆ ಲೇಖನದ್ದು. ಆ ಲೇಖನ ಈಗ ನೋಡುವುದಕ್ಕೆ ಸಿಕ್ಕುವಂತಿದ್ದರೆ ನನಗೇ ಏನನಿಸುತ್ತಿತ್ತೊ?

ಸಂ: ನವ್ಯಪಂಥವನ್ನು ರೂಪಿಸಿದ ಜಾಗಗಳಲ್ಲಿ ಮೈಸೂರಿನ 'ಕಾಫಿಹೌಸ್' ಪ್ರಸ್ತಾಪ ಬಹಳ ಬರುತ್ತೆ. ಅದರ ಚಟುವಟಿಕೆ ಬಗ್ಗೆ ಹೇಳಿ ಸಾರ್.

ನಾಯಕ: ಕಾಫಿಹೌಸ್ ಪ್ರಭಾ ಟಾಕೀಸಿನ ಬಲ ಪಕ್ಕದಲ್ಲಿತ್ತು. ಮಂದಣ್ಣ ಎಂಬವರು ಮಾಲೀಕರು. ಈಗ ಅದು ಹೊಟೆಲ್ಲಾಗಿ ಇಲ್ಲ. ಬದಲಾವಣೆ ಆಗಿದೆ. ಅಲ್ಲಿ ಅಡಿಗರು, ಡಿ ವಿ ಅರಸು, ಅನಂತಮೂರ್ತಿ, ಕೆ ಸದಾಶಿವ, ಪಿ ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ರಾಜೀವ ತಾರಾನಾಥ, ಎಚ್ ಎಂ ಚನ್ನಯ್ಯ, ಬಿ ವಿ ವೈಕುಂಠರಾಜು, ಬಿ ದಾಮೋದರರಾವ್, ಗಿರಿ ಹೆಗ್ಡೆ, ಜಿ.ಎಸ್. ಸದಾಶಿವ, ಎಂ ಎಸ್ ತಿಮ್ಮಪ್ಪ, ವಿ ಕೆ ನಟರಾಜ, ಕೆ ಎಚ್ ಶ್ರೀನಿವಾಸ, ಎಂ ಡಿ ನಂಜುಂಡಸ್ವಾಮಿ, ಬಿ ಎಸ್ ಆಚಾರ್, ಬಿ ಕೆ ಚಂದ್ರಶೇಖರ್, ಬಿ ಎನ್ ರಾಮು, ಕಡಿದಾಳ ಶಾಮಣ್ಣ, ಎನ್ ಡಿ ಸುಂದರೇಶ್, ನಾರಾಯಣ ಹೆಗ್ಡೆ, ಪೋಲಂಕಿ ರಾಮಮೂರ್ತಿ, ಕೃಷ್ಣಮೂರ್ತಿ ಐತಾಳ, ತುಮರಿ ಪ್ರಭಾಕರ-ಇವರೆಲ್ಲ ಬರ್ತಿದ್ರು. ಪ್ರತಿ ದಿವಸ ಎಲ್ಲಾ ಬರ್ತಿದ್ರಂತಲ್ಲ. ಒಂದೇ ವರ್ಷದಲ್ಲಿ ಇವ್ರೆಲ್ಲ ಬರ್ತಿದ್ರಂತಲೂ ಅಲ್ಲ. ಎಂಟು-ಹತ್ತು ವರ್ಷಗಳ ಕಾಲಾವಧಿ ಯಲ್ಲಿ ಬಂದು-ಹೋಗಿದ್ದವರ ಹೆಸರನ್ನೂ ನೆನಪಿಗೆ ಬಂದಷ್ಟನ್ನು ಹೇಳಿದ್ದೇನೆ. ಈ ಎಲ್ಲರೂ 'ನವ್ಯ' ಸಾಹಿತಿಗಳೇ ಅಲ್ಲ. ತಂತಮ್ಮ ವಿಷಯದಲ್ಲಿ, ಆಸಕ್ತಿ ಕ್ಷೇತ್ರದಲ್ಲಿ ಹೊಸ ಚಿಂತನೆಗಳಿಗೆ ಮನಸ್ಸು ತೆರೆದುಕೊಂಡಿದ್ದವರು. ಇವ್ರಲ್ಲಿ ಅನೇಕರು ಬೇರೆ ಬೇರೆ ಕ್ಷೇತ್ರದಲ್ಲಿ ಹೆಸರು ಮಾಡಿದರೆಂಬುದು ಈಗ ಇತಿಹಾಸ. ಸುಮತೀಂದ್ರ ನಾಡಿಗರು ಅಪರೂಪಕ್ಕೆ ಬೆಂಗಳೂರಿಂದ ಬಂದು ಹೋಗ್ತಿದ್ದರೆಂದು ನೆನಪು. ಎ ಕೆ ರಾಮಾನುಜನ್, ಗಂಗಾಧರ ಚಿತ್ತಾಲ, ಎಂ ಜಿ ಕೃಷ್ಣಮೂರ್ತಿ ಮೈಸೂರಿಗೆ ಬಂದ್ರೆ ಅಲ್ಲಿಗೆ ಬರ್ತಿದ್ರು.

ನಾನು ಕಾಫಿ ಹೌಸಿಗೆ ರೆಗ್ಯುಲರ್ ಆಗಿ ಹೋಗೋದಕ್ಕೆ ಪ್ರಾರಂಭಿಸಿದ್ದು ಮೂರನೆ ಬಿ ಎ ಆನರ್ಸ್‌ನಲ್ಲಿದ್ದಾಗ. ೧೯೫೮ರ ದಸರಾ ರಜೆ ನಂತರ ಹಾಸ್ಟೆಲ್ ಬಿಟ್ಟ ಮೇಲೆ. ಸಾರ್ವಜನಿಕ ಹಾಸ್ಟೆಲಿನಲ್ಲಿ ಸಂಜೆ ಏಳು ಘಂಟೆಗೆ ಪ್ರಾರ್ಥನೆಗೆ ಹಾಜರಾಗ ಬೇಕಾಗಿದ್ದು ಕಂಪಲ್ಸರಿ. ಅನಂತಮೂರ್ತಿ ಬೇರೆ ಕಡೆ ರೂಂ ಮಾಡಿ ಕೊಂಡು ಊಟಕ್ಕೆ ಮಾತ್ರ ಬರ್ತಿದ್ರು. ಆದ್ದರಿಂದಲೊ ಏನೊ ರಿಯಾಯಿತಿ ಪಡ್ಕೊಂಡಿದ್ರು. ನಮ್ಗೆಲ್ಲ ಪ್ರಾರ್ಥನೆ ತಪ್ಪಿಸಿಕೊಂಡರೆ ಊಟ ನಿಲ್ಲಿಸ್ತಿದ್ರು. ಒಂದ್ಸಲ ನಾನು ಕುವೆಂಪು

ಸೈಕಾಲಜಿ ಡಿಪಾರ್ಟಮೆಂಟಿನಲ್ಲಿ ಸೈಕಾಲಜಿ ಮೇಲೆ ಭಾಷಣ ಕೇಳೋದಿಕ್ಕೆ ಹೋಗಿದ್ದೆ. ಅದು ಮುಗಿದ ಮೇಲೆ ಪ್ರಾರ್ಥನೆಗೆ ಹೋಗಿ ತಲುಪಲು ಸ್ವಲ್ಪ ತಡವಾಯ್ತು. ಮುಂದಿನ ಊಟ ನಿಲ್ಲಿಸಿದ್ರು. ಹಸಿವಿನ ಬಾಧೆ ಅನುಭವಿಸಿದೆ. ಹಾಗಾಗಿ ಅಪರೂಪಕ್ಕೆ ಪರ್ಮಿಷನ್ ಪಡೆದು ಒಂದೆರಡು ಸಲ ಕಾಫಿಹೌಸಿಗೆ ಹೋಗಿದ್ದಿತ್ತು ಅಷ್ಟೆ. ಆಗಾಗ ಹೋಗೋಣ ಅಂತ ಆಸೆ ಆದ್ರೂ, ಒಂದಿನವಾದ್ರೂ 'ಬಿಲ್ ನಾನು ಕೊಡ್ತೇನೆ' ಎಂದು ಹೇಳುವ ಶಕ್ತಿ ಇಲ್ಲದಿದ್ದ ನನಗೆ ಹೋಗೋದಕ್ಕೆ ಮನಸ್ಸು ಬೇರೆ ಹಿಂಜರಿತಿತ್ತು.

ಕಾಫಿಹೌಸಿನಲ್ಲಿ ಸಂಜೆ ಆರು ಘಂಟೆ ಮೇಲೆ ಸೇರೋದು. ಅಡಿಗರು ಬರೋದಿಕ್ಕೆ ತಡವಾದರೆ ಡಿ ವಿ ಅರಸು ಸುತ್ತ ಕುಳಿತು ಕೊಳ್ತಿದ್ದೆವು. ಅರಸು ಇರುವಾಗ ರಾಷ್ಟ್ರೀಯ ಅಂತಾರಾಷ್ಟ್ರೀಯ ವಿದ್ಯಮಾನಗಳ ಬಗ್ಗೆ ಮಾತು, ಚರ್ಚೆ. ಅಡಿಗರು ಇರುವಾಗ ಅಂಥ ಚರ್ಚೆಗಳೂ ಇರುತ್ತಿದ್ದರೂ ಸಾಹಿತ್ಯ ಚರ್ಚೆ ಮುಖ್ಯವಾಗಿರುತ್ತಿತ್ತು. ರಾಜಕೀಯ ವಿದ್ಯಮಾನಗಳ ಚರ್ಚೆ, ಮಾತೂ ಇರುತ್ತಿತು. ಅಡಿಗರು, ಅರಸರು ಎರಡು 'ಪ್ರಿಸೈಡಿಂಗ್ ಡೇಟಿ' ಅಂತಾರಲ್ಲಾ ಆ ಥರ ಇದ್ರು. ಸಾಗರದ ಲಾಲ್ ಬಹದ್ದೂರ್ ಕಾಲೇಜ್ ಪ್ರಾರಂಭವಾದಾಗ ಅಡಿಗರು ಪ್ರಿನ್ಸಿಪಾಲರಾಗಿ ಅಲ್ಲಿಗೆ ಹೋದ್ರು- ೧೯೬೪-೬೫ ಸುಮಾರಿಗೆ. ಅರಸು ಮೈಸೂರು ವಿಶ್ವವಿದ್ಯಾಲಯದ ಆಡಳಿತದಲ್ಲಿ ಸೇರಿಕೊಂಡ ಮೇಲೆ ಅವರೂ ಬರುವುದು ನಿಂತಿತು. ಆ ಮೇಲೆಯೂ ನಾವು ಕೆಲವರು ಮೈಸೂರಿನಲ್ಲಿದ್ದವು, ಆಗೀಗ ಕಾಫಿಹೌಸಿಗೆ ಹೋಗಿ ಬಂದದ್ದುಂಟು. ಹೆಚ್ಚು ಕಾಲ ಅಲ್ಲ. ಅಡಿಗರ 'ಸಾಕ್ಷಿ', ಅರಸರ 'ಕೌಟಿಲ್ಯ' ಎಂಬ ಇಂಗ್ಲಿಷ್ ಪತ್ರಿಕೆ ಕಾಫಿ ಹೌಸ್ ದಿನಗಳಲ್ಲೇ ಬಂದಿದ್ದು. ಆ ಪತ್ರಿಕೆಗಳಲ್ಲಿಯೂ ಕಾಫಿಹೌಸ್ ಸ್ನೇಹಿತರ ಪಾತ್ರ ಇತ್ತು. 'ಕೌಟಿಲ್ಯ'ದ ಧ್ಯೇಯ ವಾಕ್ಯಗಳ ಪ್ರಾಸ್ತಾವಿಕ ಟಿಪ್ಪಣಿಯನ್ನು ಬಿ. ದಾಮೋದರರಾವ್ ಬರೆದಿದ್ದು. 'ಸಾಕ್ಷಿ' ಪ್ರೂಫ್ ನಾನು, ಎಚ್ ಎಂ ಚನ್ನಯ್ಯ ತಿದ್ದಿದೆವು. 'ಕೌಟಿಲ್ಯ'ದ ಎರಡೆ ಸಂಪುಟಗಳು ಬಂದದ್ದು. ಮೊದಲದರ ಬಿಡುಗಡೆ ಡಾ.ಎಸ್ ರಾಧಾಕೃಷ್ಣನ್-ರಾಷ್ಟ್ರಪತಿ-ಮಾಡಿದ್ದರು. ಅದರದೇ ಒಂದು ದೊಡ್ಡ ಕಥೆ. ಬಿ.ಎನ್. ಶ್ರೀರಾಮ ಸಂಪಾದಕತ್ವದ 'ಲಹರಿ' ಪತ್ರಿಕೆ ಬಳಗದ ಹತ್ತು ಜನರೂ ಕಾಫಿಹೌಸ್ ಗೆಳೆಯರೇ ಆಗಿದ್ದೆವು. ಅಡಿಗರ ಅಧ್ಯಕ್ಷತೆಯ ಸಾಹಿತ್ಯ ಸಂಘ ಒಂದಿತ್ತು. ನಾನು ಖಜಾಂಚಿ. ಟೌನ್‌ಹಾಲಿನಲ್ಲಿ ಟಿಕೆಟ್ ಇಟ್ಟು ಕವಿಗೋಷ್ಠಿ ಮಾಡಿದ್ದೆವು.

ಸಂ: ಅಡಿಗರು ನಿಮ್ಮ ಮೇಲೆ ಇಷ್ಟೊಂದು ಗಾಢ ಪ್ರಭಾವ ಬೀರೋಕೆ ಕಾರಣ ಏನು?

ನಾಯಕ: ಇವತ್ತಿಗೂ ಅಡಿಗರ ಬಗ್ಗೆ ನನ್ನಲ್ಲಿ ತುಂಬಾ ಗೌರವ ಭಾವನೆ ಇದೆ. ಅವರು ನನ್ನ ವಿಷಯದಲ್ಲಿ ತುಂಬ ಪ್ರಾಮಾಣಿಕವಾದ ಪ್ರೀತಿ ತೋರಿಸಿದವ್ರು. ಬೆಚ್ಚಗಿನ ಆತ್ಮೀಯ ಭಾವನೆಯನ್ನು ಉಳಿಸಿಹೋದವ್ರು. ಮೈಸೂರಿಗೆ ಬಂದಾಗ ನನ್ನ ಮನೆಗೆ ಬರುತ್ತಿದ್ದರು, ಉಳಿಯುತ್ತಿದ್ದರು. ನನ್ನ ಹೆಂಡತಿ ಮಗಳಿಗೂ ಅವರ ವಿಷಯದಲ್ಲಿ ಪ್ರೀತಿ,

ಗೌರವ. ಮನೆಗೆ ಬಂದ ಹಿರಿಯರೆಂದು ನಾವೆಲ್ಲ ಅವರನ್ನು ಕಾಣುತ್ತಿದ್ದೆವು. ಹಿಂದೇನೆ ಅವರು ಕುಮಟೆಯಲ್ಲಿದ್ದಾಗ ಏನೋ ಒಂದು ಒಲವು-ಅರ್ಥ- ಗೊತ್ತಿದ್ದಲ್ಲ ಇತ್ತು. ಅವರು ನನ್ನ ಪದ್ಯ ಚೆನ್ನಾಗಿದೆ ಅಂದಿದ್ದಕ್ಕೆ ಬಹುಶಃ ಆ ವಯಸ್ಸಿನಲ್ಲಿ ಪ್ರೀತಿ ಬೆಳೆದಿರಬಹುದು. ಮೈಸೂರಿಗೆ ಬಂದಾಗ ಅನಂತಮೂರ್ತಿಯವರೂ ಅಡಿಗರ ಹೆಸರು ಹೇಳ್ತಾ ಇದ್ರಲ್ಲ, ಆದ್ದರಿಂದ ಆಕಡೆ ಹೋಯಿತು. ಅವರ ಸಾಹಿತ್ಯಕ ಚಿಂತನೆ ಆ ಕಾಲದಲ್ಲಿ ಹೊಸದು ಅನ್ನೊ ಕಾರಣಕ್ಕೂ ನಾನು ಒಪ್ಪಿಕೊಂಡಿರಬಹುದು. ಅವರಲ್ಲಿ ಹೊಸ ಬಗೆಯ ಆಲೋಚನೆ ಮಾಡೋ ಶಿಸ್ತನ್ನು ಮೆಚ್ಚಿದೀನಿ. ಅದಕ್ಕಿಂತ ಹೆಚ್ಚಾಗಿ ನನ್ನ ವ್ಯಕ್ತಿತ್ವದಲ್ಲಿ ಬಹಳ ಪ್ರಭಾವ ಮಾಡಿದರು ಅನ್ಸುತ್ತೆ. ಮೊದಲನೆಯದಾಗಿ ಅವರಿಗೆ ಏನಾದರೂ ಅನಿಸಿದರೆ, ಅದನ್ನು ನೇರವಾಗಿ ಸ್ಪಷ್ಟವಾಗಿ ಹೇಳ್ತಿದ್ದರೇ ಹೊರತು, ಆಡಿಯನ್ಸ್ ಕಾನ್‌ಶಿಯಸ್ ಆಗಿ ಮುಚ್ಚು ಮರೆಮಾಡಿ ಮಾತಾಡಿದ್ದು ನನಗೆ ನೆನಪೇ ಬರೋಲ್ಲ. ಎರಡನೇದು ಅಡಿಗರು ಎಂದೂ ತಮ್ಮ ಕಾವ್ಯದ ಬಗ್ಗೆ ಮಾತಾಡ್ತಿರಲಿಲ್ಲ. ಅವರು ಬಹಳ ಸೂಕ್ಷ್ಮ. ತಮ್ಮ ಸಾಹಿತ್ಯದ ಬಗ್ಗೆ ಹೇಳೋವಾಗ ಮುಜಗರ ಪಡ್ತಿದ್ರು. 'ಸಾರ್ ಇದರ ಅರ್ಥ ಏನು' ಅಂತ ಕೇಳಿದರೆ ನಕ್ಕುಬಿಡೋರು. ಬೇರೆಯವರ ಬಗ್ಗೆ ಎಂಥಾ ಚರ್ಚೆಯಾದ್ರೂ ಮಾಡೋರು. ತಮ್ಮ ಕಾವ್ಯದ ಬಗ್ಗೆ ಈ ಅರ್ಥ ಇಟ್ಕಂಡು ಬರದಿದೀನಿ, ಅಂತ ಯಾವ ಕಾಲದಲ್ಲೂ ಹೇಳಲಿಲ್ಲ. ಅವರ ಮೌಲ್ಯದ ಕಲ್ಪನೆ, ಸಾಮಾಜಿಕ ರಾಜಕೀಯ ಚಿಂತನೆಯ ದೃಷ್ಟಿಕೋನ, ಎಲ್ಲ ಈ ಹೊತ್ತು ನಾವು ಪ್ರಶ್ನೆ ಮಾಡಬಹುದು. ನಾನು ಎಷ್ಟೋ ಸಲ 'ಇದನ್ನು ಒಪ್ಪೋಕಾಗಲ್ಲ' ಅಂತ ನೇರವಾಗಿ ಹೇಳತಾ ಇದ್ದೆ. ಒಂದ್ಸಲ "ನೀವು ಬರೆಯೋ ಹೊತ್ತಿಗೆ ದ್ವಂದ್ವಗಳು ಏನೆಲ್ಲ ಸೂಕ್ಷ್ಮಗಳು ಅನುಭವದಲ್ಲಿರುತ್ತೆ ಅಂತ ನಿಮಗೆ ಗೊತ್ತಾಗುತ್ತೆ. ಮಾತಾಡುವಾಗ ಯಾಕೆ ದುಡುಕು ಮಾಡ್ತಿರಿ?" ಅಂತ ಕೇಳಿದೆ.

ಸಂ: ಶೂದ್ರ ನೆಲೆಯಿಂದ ಬಂದ ನಿಮ್ಮ ಮೇಲೆ ಕುವೆಂಪು ಬದಲಾಗಿ ಅಡಿಗರು ಆವರಿಸಿ ಕೊಂಡ್ರು. ಅವರ ಚಿಂತನೆಯಲ್ಲಿದ್ದ ಬ್ರಾಹ್ಮಣಪ್ರಜ್ಞೆ ತಾತ್ವಿಕವಾಗಿ ನಿಮಗೆ ಯಾವುದಾದರೂ ತೊಡಕು ಉಂಟು ಮಾಡಿತಾ?

ನಾಯಕ: ಒಂದಂಶ ಗಮನಿಸಬೇಕು. ಅದು ಸಾಂಸ್ಕೃತಿಕ, ಚಾರಿತ್ರಿಕ ಸಂದರ್ಭಕ್ಕೆ, ಕಾಲಮಾನಕ್ಕೆ ಸಂಬಂಧಿಸಿದ್ದು. ಬ್ರಾಹ್ಮನೈಜೇಶನ್‌ನ ಪ್ರೊಸೆಸ್‌ನಲ್ಲಿ ಬೆಳೆಯೋದೆ ಪ್ರಗತಿ ಅಂತ ಕಲ್ಪನೆ ಇದ್ದ ಕಾಲ ಅದು. ನಮ್ಮ ಎದುರುಗಡೆ ಆದರ್ಶ ಅವರೇ ತಾನೇ? ನಾನು ಹಂಗೆ ಬಂದವನಾದ್ದರಿಂದ, ಸಾಮಾನ್ಯವಾಗಿ ಅವೈದಿಕ ವೈದಿಕ ವಿಶ್ಲೇಷಣೆ ಮಾಡಿ ವಿಮರ್ಶೆ ಮಾಡಬೇಕು ಅಂತನ್ನೋದು ಆ ವಯಸ್ಸಿಗೆ ಬಂದಿರಲಿಲ್ಲ. ಕೊನೆಗೆ ನಿಧಾನವಾಗಿ ಬೆಳೆಸ್ಕೋಂತ ಹೋದಾಗ ಆ ಎಚ್ಚರ ಬಂತಷ್ಟೆ. ಅಡಿಗರು ಜನಸಂಘದ ಅಭ್ಯರ್ಥಿಯಾಗಿ ಲೋಕಸಭೆಗೆ ನಿಂತಾಗ ನಾನು 'ಅದು ಸರಿಯಲ್ಲ' ಎಂದಿದ್ದೆ. ಲಂಕೇಶ್ ಮೈಸೂರಿಗೆ ಬಂದು ಅಡಿಗರ ಪರ ಪ್ರಚಾರಕ್ಕೆ ಕರೆದಾಗ ನಾನು

ಒಪ್ಪಿರಲಿಲ್ಲ; ಅನಂತಮೂರ್ತಿಯವರೂ ಒಪ್ಪಿರಲಿಲ್ಲ. ಲಂಕೇಶ್ ಅಡಿಗರ ಪರ ಹಗಲೂ ರಾತ್ರಿ ಆರ್‌ಎಸ್‌ಎಸ್ ಹುಡುಗರ ಜೊತೆ ದುಡಿದಿದ್ರು. ಆದ್ರೂ ಲಂಕೇಶ, ಅನಂತಮೂರ್ತಿ ಇವರೆಲ್ಲ ಲೋಹಿಯಾವಾದಿಗಳೂ ಆಗಿದ್ದರಲ್ಲವೇ? ನಾನು ಬೆಳೆದ ಪರಿಸರದಲ್ಲಿ ಕಾಲೇಜು ಶಿಕ್ಷಣ ಪಡೆದ ಮೊದಲ ತಲೆಮಾರಿಗೆ ನಾನು ಸೇರಿದವನಾಗಿದ್ದೆ. ನಾನು ಹುಟ್ಟಿದ ಜಾತಿಯವರಲ್ಲಿ ಅಂಕೋಲಾ ಸೀಮೆಗೇ ನಾನು ಮೊತ್ತ ಮೊದಲ ಕಾಲೇಜ್ ಅಧ್ಯಾಪಕನಾದವನು. ನಾನು ನನಗಿಂತ ಹೆಚ್ಚು ವಿದ್ಯಾವಂತರಾದವರನ್ನು ನೋಡಿ, ಅವರೊಡನೆ ಒಡನಾಡಿ, ನನ್ನ ತಿಳಿವಳಿಕೆ ಜ್ಞಾನ ಆಸಕ್ತಿಯ ವಿಸ್ತರಣೆ ಮಾಡಿಕೊಳ್ಳೋದು ಬಹುಶಃ ಅನಿವಾರ್ಯವಾಗಿತ್ತೇನೊ! ನಾನು ಮೈಸೂರಿಗೆ ಬಂದ ಹೊಸತರಲ್ಲಿಯೆ ಅನಂತಮೂರ್ತಿಯವರ ಸಂಪರ್ಕಕ್ಕೆ ಬಂದುಬಿಟ್ಟಿದ್ದೆ. ಅವರಿಗೆ ಅಡಿಗರು ಆದರ್ಶವಾಗಿದ್ರು. ಅಡಿಗರ ಬಗ್ಗೆ ಹಿಂದೆಯೇ ಆಕರ್ಷಣೆ ಒಲವು ಉಂಟಾಗಿತ್ತಲ್ಲ? ಅವರಿಬ್ಬರೂ ಬ್ರಾಹ್ಮಣರಾಗಿದ್ರು ಎಂಬುದು ಆಕಸ್ಮಿಕ; ಮುಖ್ಯ ಅಲ್ಲ. ಅವರಿಬ್ಬರೂ ನನ್ನಂಥವನ ಮೇಲೆ ಪ್ರಭಾವ ಬೀರಬಲ್ಲಂಥ ಪ್ರತಿಭಾಶಾಲಿಗಳಾಗಿದ್ದರು ಎಂಬೋದು ಮುಖ್ಯ ಮಾತು. ಆ ಕಾಲದಲ್ಲಿ ನಮ್ಮ ಕಣ್ಣ ಮುಂದಿನ ಪ್ರತಿಭಾಶಾಲಿ ವಿದ್ಯಾವಂತರೆಲ್ಲ ಸಾಮಾನ್ಯವಾಗಿ ಬ್ರಾಹ್ಮಣರೆ ಆಗಿದ್ದರಲ್ಲ? ಕುವೆಂಪು ನನಗೆ ಕಾವ್ಯ ಗುರುವಾಗಲು ಒಪ್ಪಿಗೆ ಸೂಚಿಸಿ ಬಳಿಗೆ ಕರೆದಿದ್ದರೆ ಏನಾಗುತ್ತಿದ್ದೆನೊ, ಹೇಗಾಗುತ್ತಿದ್ದೆನೊ! ಜವರೇಗೌಡರ ರೀತಿಯ ತಳಿಗೆ ಸೇರುತ್ತಿದ್ದೆನೊ, ಶಿವರುದ್ರಪ್ಪನವರ ರೀತಿಯ ಸಾಹಿತ್ಯ ಸಂಸ್ಕಾರ ಪಡೆಯುತ್ತಿದ್ದೆನೊ! ಈಗ ಹೇಗೆ ಹೇಳಲಿ?

ಆದರೆ ಅಡಿಗರದು ಬ್ರಾಹ್ಮಣ ಪ್ರಜ್ಞೆ' ಎಂದು ಸರಳಗೊಳಿಸಿ ಗುಂಡುಸುತ್ತಿ ಹೇಳೋದನ್ನು ನಾನು ಒಪ್ಪೋದಿಲ್ಲ. ಅಡಿಗರು ಕುವೆಂಪು ಕಾವ್ಯವನ್ನು ಕಟುವಾಗಿ ಟೀಕಿಸಿದ್ದು, ವಿಮರ್ಶಿಸಿದ್ದು ನಿಜ. ಅದು ಮೂಲತಃ ಅವರಿಗೆ ಬ್ರಾಹ್ಮಣಿಕೆಯ ಆಗತ್ಯ ಆಗಿರ್ಲಿಲ್ಲ. ಸೃಜನಶೀಲ ದಾರಿಯನ್ನು ಅನ್ವೇಷಿಸಿಕೊಳ್ಳುವ ಪ್ರಕ್ರಿಯೆಯ ಭಾಗವಾಗಿತ್ತು. ಕುವೆಂಪು ಕಾವ್ಯ ರೀತಿಗೆ ತೀರಾ ಭಿನ್ನವಾದಂಥ ಹೊಸ ಕಾವ್ಯ ರೀತಿಯನ್ನು ಅಡಿಗರು ಕನ್ನಡದಲ್ಲಿ ರೂಢಿಸಿದರೆಂಬುದೂ ನಿಜವಲ್ಲವೆ? ನವೋದಯ ದವರಲ್ಲಿ ಕುವೆಂಪು ಬಿಟ್ಟರೆ ಎಲ್ಲ ಬ್ರಾಹ್ಮಣರೇ. ಹಾಗೆಂದು ಅಡಿಗರು ಆ ಬ್ರಾಹ್ಮಣ ಸಾಹಿತಿಗಳ ಸಾಹಿತ್ಯ, ಸಾಹಿತ್ಯ ಪರಿಕಲ್ಪನೆಗಳನ್ನೂ ಒಪ್ಪಿದವರಲ್ಲ. ಕುವೆಂಪು ಜೊತೆ ಮಾಸ್ತಿಯವರಿಗೇ ಸಾಹಿತ್ಯಕ ಭಿನ್ನಾಭಿಪ್ರಾಯ ಇತ್ತಲ್ಲವೆ? ಅಡಿಗರ ಮತ್ತೆ 'ಮೊಳಗಲಿ ಪಾಂಚಜನ್ಯ' 'ನಾನು ಹಿಂದೂ, ನಾನು ಬ್ರಾಹ್ಮಣ' ಇಂಥ ಕವನಗಳನ್ನು ಓದಿದಾಗ ಸಹಜವಾಗಿಯೆ ಹಾಗೆನಿಸುವಂತಿದೆ ನಿಜ. ಆದರೂ ಭಾರತದ ಆಧುನಿಕ ಚರಿತ್ರೆಯ ಸಂಕೀರ್ಣ ಸಂದರ್ಭದ ಪರಿವೆಯಲ್ಲಿ ಇಂಥ ಪ್ರಶ್ನೆಗಳನ್ನು ಚರ್ಚಿಸಿದರೆ, ತುಂಬ ಗಂಭೀರವಾದ ಉತ್ತರಗಳು ಸಿಗಬಹುದು ಎಂಬೋದು ನನ್ನ ಅನಿಸಿಕೆ. ಬ್ರಾಹ್ಮಣ

ಪ್ರಜ್ಞೆ ಮಾತ್ರ ಉಳ್ಳವರಿಗೆ 'ಭೂಮಿಗೀತ' 'ಭೂತ', ಕೂಪಮಂಡೂಕ 'ಶ್ರೀ ರಾಮನವಮಿಯ ದಿವಸ' 'ವರ್ಧಮಾನ'ದಂಥ ಕವನಗಳನ್ನು ಬರೆಯುವುದು ಸಾಧ್ಯವೇ? ಶೂದ್ರಪ್ರಜ್ಞೆ ಮಾತ್ರ ಇದ್ದವರಿಗೆ ಕುವೆಂಪು ಅವರ ಅಧ್ಯಾತ್ಮ ವಿಚಾರವಾದ ಸಾಧ್ಯವೆ? 'ಶ್ರೀ ರಾಮಾಯಣ ದರ್ಶನಂ', 'ಬೆರಳ್ಗೆ ಕೊರಳ್' 'ಶೂದ್ರ ತಪಸ್ವಿ' ಬರೆಯಲು ಸಾಧ್ಯವೆ? ಪ್ರಾರಂಭ ಹಂತದಲ್ಲಿ ನಾನು ಮಾತ್ರ ಅಲ್ಲ, ಲಂಕೇಶ, ತೇಜಸ್ವಿ, ಪಾಟೀಲ, ಚನ್ನಯ್ಯ, ಗಿರಡ್ಡಿ, ಕಂಬಾರ ಇಂಥ ಬ್ರಾಹ್ಮಣೇತರರೂ ನವ್ಯದ, ಅಡಿಗರ ಆಕರ್ಷಣೆಗೆ ಒಳಗಾದದ್ದು ಯಾಕೆ, ಹೇಗೆ? ಅನಂತಮೂರ್ತಿ, ಲಂಕೇಶ, ತೇಜಸ್ವಿ-ಶಿವಮೊಗ್ಗ ಕಡೆಯ ಈ ಸಾಹಿತಿಗಳೆಲ್ಲ ಅಡಿಗರ ಹತ್ತಿರ ಮಾತ್ರ ಹೋದವರಲ್ಲ, ಲೋಹಿಯಾ, ಗೋಪಾಲಗೌಡರಿಂದಲೂ ಆಕರ್ಷಿತರಾಗಿದ್ದವರು. ತೀನಂಶ್ರೀ, ಡಿಎಲ್‌ಎನ್‌ರಂಥ ಘನ ವಿದ್ವಾಂಸರ, ಅಡಿಗ, ಅನಂತಮೂರ್ತಿಯವರಂಥ ಪ್ರತಿಭಾಶಾಲಿಗಳ ಸಂಪರ್ಕಕಕ್ಕೆ ಆ ವಯಸ್ಸಿನಲ್ಲಿ ಬರುವಂತಾದದ್ದರ ಬಗ್ಗೆ ಇಂದೂ ನಾನು ಅಭಿಮಾನ ಪಟ್ಟುಕೊಳ್ಳುತ್ತೇನೆ.

ಸಂ: ನಿಮ್ಮ ಕಾಲದಲ್ಲಿ ಮೈಸೂರಲ್ಲಿ ಸಮಾಜವಾದಿ ಯುವಜನ ಸಭೆಯ ಚಟುವಟಿಕೆಗಳೂ ಇದ್ದವು. ತೇಜಸ್ವಿ, ನಂಜುಂಡಸ್ವಾಮಿ, ಶಾಮಣ್ಣ ಅವರೆಲ್ಲಾ ಅದರಲ್ಲಿದ್ರು. ಅವರ ಸಂಪರ್ಕ ನಿಮಗೆ ಬರಲಿಲ್ಲವಾ?

ನಾಯಕ: ನನಗೆ ಮೊದಲಿಂದಲೂ ಒಂದು ಸ್ವಭಾವ, ಈಗಲೂ ಇದೆ ಅಂತ ಅನ್ಕೊಂಡಿದ್ದೀನಿ. ಸೊಶಿಯಲಿಸ್ಟ್ ಅಂತಲೊ ಕಮ್ಯುನಿಸ್ಟ್ ಅಂತಲೋ ನಿರ್ದಿಷ್ಟವಾಗಿ ನನ್ನನ್ನ ಗುರುತಿಸಲಾರಿರಿ. ಎಷ್ಟೇ ಬಗೆಯ ಸಾಮಾಜಿಕ ಚಿಂತನೆಗಳು ಸಾಹಿತ್ಯ ಚಿಂತನೆಗಳು ಇದ್ದರೂ ಕೂಡ, ನನ್ನ ನೆಲೆಯಿಂದಲೇ ನಾನು ಅಭಿಪ್ರಾಯ ರೂಪಿಸಿಕೊಳ್ಳೋನು. ಆದ್ದರಿಂದ ಸುಲಭವಾಗಿ ಗುಂಪಿನ ಜೊತೆಯಲ್ಲಿ ಜೈ ಹಾಕಲಿಕ್ಕೆ ಈಗಲೂ ಮನಸ್ಸು ಒಪ್ಪೋದಿಲ್ಲ. ಸಮಾಜವಾದಿ ಯುವಜನ ಸಭಾದವರು ಶ್ರೀಲಂಕಾದ ಅಬ್ರಾಹಂ ಕೋವೂರರನ್ನ ಮೈಸೂರಿಗೆ ಕರಸಿದ್ರು. ೧೯೭೦ಳರಲ್ಲಿ ಸಾಯಿಬಾಬಾನ ಬೂದಿಮಂತ್ರ ಕೊಡೋದು ಬೂಟಾಟಿಕೆ ಅಂತ ತೋರಿಸಿದ್ರು. ನಾನು ಆ ಸಭೆಯ ಅಧ್ಯಕ್ಷತೆ ವಹಿಸಿದ್ದೆ. ಅಷ್ಟೊತ್ತಿಗಾಗಲೇ ಅವುಗಳ ಬಗ್ಗೆ ನನಗೆ ನಂಬಿಕೆ ಹೊರಟೋಗಿತ್ತು. ಎಷ್ಟೋ ರಾತ್ರಿಗಳಲ್ಲಿ ಶ್ಮಶಾನ-ಗಿಶಾನ ಎಲ್ಲ ಒಬ್ಬನೇ ತಿರುಗಿ ದೇವರು, ದೆವ್ವ ಎಲ್ಲಾ ಇಲ್ಲ ಎಂಬುದನ್ನು ದೃಢಪಡಿಸಿಕೊಂಡಿದ್ದೆ. ಆದ್ದರಿಂದ ದೇವರ ಭಯವೊ, ದೆವ್ವದ ಭಯವೊ, ಬಾಬಾಗಳ ಭಯವೊ ನನಗೆ ಇರಲಿಲ್ಲ. ೧೯೬೦ರಲ್ಲಿ ನಾನು ಲೆಕ್ಚರರ್ ಆಗಿ ಸೇರಿಕೊಂಡಿದ್ದು ಗ್ರಹಣದ ದಿನ. ರಾಷನಾಲಿಸ್ಟ್ ಎನ್ನಬಹುದಾದಂಥ ಮನೋಧರ್ಮ ಆಗಲೇ ಬೆಳೆದಿತ್ತು. ಸಮಾಜವಾದಿ ಮಿತ್ರರ ಜಾತಿವಿನಾಶ ಸಮ್ಮೇಳನದ ಬಗ್ಗೆ ನನಗೆ ಸಹಮತ ಇತ್ತು. ಆದರೆ ಬರಹಗಾರರ ಮತ್ತು ಕಲಾವಿದರ ಒಕ್ಕೂಟದ ಧೋರಣೆ ಬಗ್ಗೆ ಸಹಮತವಿರಲಿಲ್ಲ. ಅವರ ಜೊತೆ ನಾನು ಸೇರಲಿಲ್ಲ.

ಪರಿಚಯ ಇತ್ತಾದರೂ ತೇಜಸ್ವಿ ಸ್ನೇಹ ಉಂಟಾದದ್ದು ೧೯೬೪ರಲ್ಲಿ. 'ಲಹರಿ' ಪತ್ರಿಕೆ ಪ್ರಾರಂಭ ಕಾಲದಲ್ಲಿ. ಆ ವರ್ಷವೇ 'ಯಮಳ ಪ್ರಶ್ನೆ' ನಾಟಕಕ್ಕೆ ನನ್ನಿಂದ ಮುನ್ನುಡಿ ಬರೆಸಿದ್ರು. ಎಂ ಡಿ ನಂಜುಂಡಸ್ವಾಮಿ ಪರಿಚಯ ಆದದ್ದು ಕಾಫಿ ಹೌಸಿನಲ್ಲಿ. ಫೋಟೋ ಜರ್ನಲಿಸ್ಟ್ ಬಿ ಎಸ್ ಆಚಾರ್ ಜೊತೆಗೆ ಬರುತ್ತಿದ್ದರು. ಆಗ ತಾನೆ ಜರ್ಮನಿಯಿಂದ ತಿರುಗಿ ಬಂದಿದ್ರು. ತ್ರೀಪೀಸ್ ಸೂಟ್ ಧರಿಸಿ 'ಬೋ' ಹಾಕುತ್ತಿದ್ದರು. ಮಾತು ಬಹಳ ಕಡಿಮೆ ಆಡುತ್ತಿದ್ದರು. ಅವರ ತಂದೆ ಮಹಾಂತ ದೇವರು ಅಂತ. ಶ್ರೀಮಂತರು, ಆಢ್ಯರು, ಲಾಯರು, ಮೈ.ವಿ.ವಿ. ಸಿಂಡಿಕೇಟ್ ಸದಸ್ಯರಾಗಿದ್ದರೆಂದು ನೆನಪು. ತೇಜಸ್ವಿಯಂತೆ ಇವರೂ ದೊಡ್ಡವರ ಮಗ. ತೇಜಸ್ವಿ ನೇರ, ಸರಳ. ತೇಜಸ್ವಿಗಿಲ್ಲದ ಅಥವಾ ತೇಜಸ್ವಿ ತೋರಿಸದ ಗಾಂಭೀರ್ಯ ಆಗ ನಂಜುಂಡಸ್ವಾಮಿಯವರದು. ಮುಂದೆ ಬೆಳೆವ ಧೀಮಂತ ರೈತನಾಯಕ ಅವರ ವ್ಯಕ್ತಿತ್ವದಲ್ಲಿ ಅಡಗಿ ಕುಳಿತಿದ್ದಾನೆ ಎಂದು ಅನಿಸುವುದಕ್ಕೆ ಆಗ ಸಾಧ್ಯವೇ ಇರಲಿಲ್ಲ. ಎನ್ ಡಿ ಸುಂದರೇಶ್‌ರಲ್ಲಿಯೂ ಅಂಥ ರೈತ ನಾಯಕ ಅಡಗಿರಬಹುದೆಂದು ಅನಿಸಿರಲೇ ಇಲ್ಲ. ಈಗಲೂ ಆ ಇಬ್ಬರ ನೆನಪಾದಾಗ ನನ್ನಲ್ಲಿ ವಿಸ್ಮಯ, ಪ್ರಶಂಸೆ. ಟಿ ಎನ್ ನಾಗರಾಜ್‌ರಂಥ ಸಂಭಾವಿತ ವಕೀಲರು ಹಿರಿಯ ಸಮಾಜವಾದಿ ಯಾಗಿದ್ದರು. ಅವರ ನಿಕಟ ಪರಿಚಯ ನನಗೆ ಇತ್ತು. ೧೯೬೪ರಲ್ಲಿ ಲಾಲ್ ಬಹದ್ದೂರ್ ಶಾಸ್ತ್ರಿ ಕಾಲದಲ್ಲಿ ಹಿಂದೀ ವಿರೋಧಿ ಚಳುವಳಿ ತೀವ್ರವಾಗಿದ್ದ ಕಾಲದಲ್ಲಿ 'ಇಂಗ್ಲಿಷ್ ಇಳಿಸಿ, ಕನ್ನಡ ಬೆಳೆಸಿ' ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದೆ. ಟೌನ್‌ಹಾಲಿನಲ್ಲಿ ಭಾಷಣವನ್ನೂ ಮಾಡಿದ್ದೆ. ಅದು ಡಾ. ಲೋಹಿಯಾ ಅವರ ಕರೆಯಂತೆ ಸಮಾಜವಾದಿ ಯುವಜನ ಸಭಾದವರು ಏರ್ಪಡಿಸಿದ ಮೆರವಣಿಗೆ ಸಭೆ ಆಗಿತ್ತು.

ಸಂ: ನವ್ಯದ ಮುಖ್ಯ ತಾತ್ವಿಕ ಪರಿಕಲ್ಪನೆಗಳಲ್ಲಿ ಒಂದು ವ್ಯಕ್ತಿ ವಿಶಿಷ್ಟತೆ. ಸಮಾಜವಾದಿ ಚಳುವಳಿ ಇದಕ್ಕೆ ಪೂರಕವಾಗಿಲ್ಲ ಅನಿಸಿತಾ?

ನಾಯಕ: ವ್ಯಕ್ತಿ ವಿಶಿಷ್ಟತೆ ಅಂದರೆ ಏಕಾಕಿತನ, ವಿಕ್ಷಿಪ್ತತೆ ಎಂದಾದರೆ ಇವನ್ನೆಲ್ಲ ನಾನು ಎಂದೂ ಒಪ್ಪಿಲ್ಲ. ಲೆಕ್ಚರರ್ ಆದ ಮೇಲೆ ಸಾಮಾಜಿಕ ಜವಾಬ್ದಾರಿ ನನಗೂ ಇದೆ ಅಂತ, ರಜೆ ದಿನಗಳಲ್ಲಿ ನಾನು ನಮ್ಮೂರಿಗೆ ಹೋಗಿದ್ದಾಗ ಊರೂರಿಗೆ ಹೋಗಿ ಭಾಷಣಗಳ ವ್ಯವಸ್ಥೆ ಮಾಡತಿದ್ದೆ. ಬಡ ವಿದ್ಯಾರ್ಥಿಗಳನ್ನು ಓದಿಸುತ್ತಿದ್ದೆ. ನನಗೆ ಯಾವಾಗಲೂ ನನ್ನಷ್ಟಕ್ಕೆ ನಾನು ಇರಬೇಕು ಅಂತ ಅನ್ನಿಸಲಿಲ್ಲ. ಚಿಕ್ಕಂದಿನಿಂದಲೂ ಬಂದ ಗುಣ ಅದು. ಆಮಟ್ಟಿಗೆ ನಾನು ವ್ಯಕ್ತಿವಾದಿ ಅಲ್ಲ. ಆದರೆ ನಿಲುವು ತಾಳಬೇಕಾದಾಗ ಯಾವುದೇ ಸಂದರ್ಭ ನನಗೆ ಸರಿ ಅನಿಸೋದಿದ್ರೆ, ಬಹಳ ಗಟ್ಟಿ ಯಾದ ನಿಲುವನ್ನು ತಳೀತೀನಿ. ಪ್ರಶ್ನೆ ಎತ್ತೋ ಸ್ವಭಾವ ಚಿಕ್ಕ ವಯಸ್ಸಿನಲ್ಲೇ ಇತ್ತು. ನಾನು ನಮ್ಮ ಅಪ್ಪನನ್ನು ವಿರೋಧಿಸಿದ್ದು ಇದೆ. ಒಮ್ಮೆ ೧೯೫೭ರಲ್ಲಿ

ಅವನು ಸಭೆಯ ಅಧ್ಯಕ್ಷನಾಗಿದ್ದೋನು ಸಭಾತ್ಯಾಗ ಮಾಡಬೇಕಾಯಿತು, ನಾನು ವಿರೋಧಿಸಿದ್ದರಿಂದ. ಅದು ನಮ್ಮೂರಿನ ಹಿತಾಹಿತಕ್ಕೆ ಸಂಬಂಧಿಸಿದ ವಿಷಯದ ಚರ್ಚೆ ನಡೆಯುತ್ತಿದ್ದ ಸಭೆಯಾಗಿತ್ತು. ನನ್ನಲ್ಲಿ ಸ್ವಲ್ಪ ಹಠಪ್ರವೃತ್ತಿ ಇತ್ತು ಅಂತ ಅನ್ಸುತ್ತೆ.

ಸಂ: ನವ್ಯದ ಇಂಡಿವಿಜುಯಲಿಸಂನಲ್ಲೂ ಒಂದು ಬಗೆಯ ರ್‍ಯಾಶನಾಲಿಟಿ ಗುಣ ಇತ್ತು, ನಿಜ. ಆದರೆ ಅದಕ್ಕೆ ವಿಶಾಲವಾದ ಸಾಮಾಜಿಕ ಆಯಾಮಗಳು ಇರಲಿಲ್ಲ.

ನಾಯಕ: ಇಂಡಿವಿಜುಯಾಲಿಟಿ ಬಗ್ಗೆ ನನ್ನ ಅನುಭವದಲ್ಲಿ ಹೇಳ್ತೀನಿ. ಮೊದಲು ಒಂದು ನಿಲುವು ತಳೆಯೋ ಹೊತ್ತಿಗೆ, ನನಗೆ ಒಂದು ಪ್ರಶ್ನೆ ಯಾವಾಗಲೂ ಇರೋದು. ನಾನು ಹೆಚ್ಚು ಓದ್ತಾ ಇದ್ದೆ ಮತ್ತು ಸ್ವತಂತ್ರವಾಗಿ ಯೋಚನೆ ಮಾಡ್ತಾ ಇದ್ದೆ. ನಾನು ವಿಚಾರಗಳಲ್ಲಿ ಜೀವನ ದೃಷ್ಟಿಯಲ್ಲಿ ಬದಲಾಗ್ತಾ ಇದ್ದೆ. ಅದು ನಮ್ಮನೆಯವರಿಗೆ ತಿಳೀತಾ ಇರಲಿಲ್ಲ. ಆದರೆ ಅವರು ಯಾಕೆ ಹಂಗೆ ಪ್ರತಿಕ್ರಿಯೆ ತೋರಿಸ್ತಾರೆ ಅಂತ ನನಗೆ ಗೊತ್ತಾಗುತ್ತಿತ್ತು. ನನ್ನ ಅಪ್ಪ ೧೯೫೫ರಲ್ಲಿ ತೀರಿಹೋದ. ನನ್ನ ಅವ್ವ ನಿರಕ್ಷರಿ. ನನ್ನ ನಿಲುವು, ನೋಟಗಳನ್ನು ಅವಳಿಗೆ ಅರ್ಥಮಾಡಿಸೋದು ಸುಲಭ ಆಗ್ತಿರಲಿಲ್ಲ. ಅಣ್ಣ ತಿಳುವಳಿಕಸ್ಥನಾದರೂ, ಅವನಿಗೂ ಅರ್ಥಮಾಡಿಕೊಳ್ಳೋದಕ್ಕೆ ಮೊದಲಮೊದಲು ಕಷ್ಟವೇ ಆಗ್ತಿತ್ತು. ಅವರ ಬಗ್ಗೆ ನನಗೆ ಗಾಢವಾದ ಪ್ರೀತಿ ಇತ್ತು. ಅವರಿಗೂ ನನ್ನ ಬಗ್ಗೆ ಗಾಢವಾದ ಪ್ರೀತಿ ನಂಬಿಕೆ ಅಭಿಮಾನ ಎಲ್ಲಾ ಇತ್ತು. ನನ್ನ ನಿಲವು ನೋಟ ಅರ್ಥವಾಗದಿದ್ದಾಗ ಅವರು ನೊಂದುಕೊಳ್ಳುತ್ತಿದ್ರು. ಅದರಿಂದ ನನಗೆ ಸಂಕಟವಾಗ್ತಿತ್ತು. ನನ್ನ ಅವ್ವನೊಂದುಕೊಂಡಾಗ ನನ್ನ ಕರುಳು ಹಿಂಡಿದ ಹಾಗೆ ಆಗ್ತಿತ್ತು. ನನ್ನ ಕಣ್ಣುಗಳಿಂದ ನೀರು ಉಕ್ಕಿದ ಸಂದರ್ಭಗಳೂ ಇದ್ದವು. ಧೃತಿಗೆಡಿಸುವಂಥ ಸಂದರ್ಭಗಳೂ ಇದ್ದವು. ಇಂಗ್ಲಿಷ್ ಶಿಕ್ಷಣ, ಪ್ರಜಾಪ್ರಭುತ್ವದ ಹೊಸ ಕಾಲ, ಹೊಸ ಮೌಲ್ಯಗಳ ಬಗೆಗಿನ ಅರಿವು ಕಾರಣವಾಗಿ ನನ್ನ ತಲೆಮಾರಿನ ನನ್ನಂಥವರು ಎದುರಿಸಿದ ನೈತಿಕ ಬಿಕ್ಕಟ್ಟು, ಆ ದ್ವಂದ್ವ ಇದೆಯಲ್ಲ, ಅದನ್ನು ಅರ್ಥಮಾಡಿಕೊಳ್ಳುವುದಕ್ಕೆ ನವ್ಯ ಸಾಹಿತ್ಯದಿಂದ ಸಹಾಯವಾಯಿತು. ನವ್ಯದ ಬರವಣಿಗೆ ಕಡೆ ನನ್ನ ಒಲವನ್ನು ಹೆಚ್ಚು ದೃಢಗೊಳಿಸುವುದಕ್ಕೆ ಇದೂ ಒಂದು ಕಾರಣ ಆಗಿರಬಹುದು. ಅಡಿಗರ ಕಾವ್ಯ, ಅನಂತಮೂರ್ತಿಯವರ 'ಕಾರ್ತೀಕ', 'ಪ್ರಶ್ನೆ', 'ಪ್ರಕೃತಿ' ಅಂಥ ಕಥೆಗಳು, 'ಸಂಸ್ಕಾರ'ದಂಥ ಕಾದಂಬರಿ ಇತ್ಯಾದಿ ನವ್ಯರ ಬರವಣಿಗೆಗಳು ನನ್ನ ಅರಿವನ್ನು ಆ ಕಾಲಘಟ್ಟದಲ್ಲಿ ಸೋಸಿಕೊಳ್ಳುವುದಕ್ಕೆ ನೆರವಾದವು. ನನ್ನ ಸಂವೇದನೆಯನ್ನು ಸೂಕ್ಷ್ಮಗೊಳಿಸಿದವು. ಅವನ್ನೆಲ್ಲ ಇಂಡಿವಿಜ್ಯುವಲಿಸಂನ ಬರವಣಿಗೆಗಳೆಂದು ಸರಳಗೊಳಿಸಿ ನಾನು ಹೇಳಲಾರೆ. ಹೊಸ ಹೊರಳುವಿಕೆಯ ಕಾಲಘಟ್ಟದಲ್ಲಿ ಸಮಾಜದ ಸಂವೇದನ ಶೀಲ ಮನಸ್ಸುಗಳ ಅನುಭವಗಳ ಲಯವಿನ್ಯಾಸವನ್ನು ಶೋಧಿಸುವಂಥ ಬರವಣಿಗೆಗಳಿಗೂ ಸಾಮಾಜಿಕ

ಆಯಾಮ, ಸಾಮಾಜಿಕ ರೆಲೆವೆನ್ಸಿ ಇರುತ್ತದೆ. ಐಡಿಯಾಲಜಿ ಬದ್ಧ ಬರವಣಿಗೆಗಳ ಸಾಮಾಜಿಕ ಆಯಾಮ ಸಾಮಾಜಿಕ ರೆಲೆವೆನ್ಸಿಗಳಿಗೂ, ಇದಕ್ಕೂ ಸ್ವರೂಪ ವ್ಯತ್ಯಾಸ ಇದೆ. ಅದನ್ನು ಸಾಹಿತ್ಯ ವಿಮರ್ಶೆ ಗುರುತಿಸಿಕೊಳ್ಳ ಬೇಕಾಗ್ತದೆ.

ಸಂ: ನೀವು ರೂಢಿಸಿಕೊಳ್ತಿದ್ದ ಈ ಆಲೋಚನ ಕ್ರಮ, ನೀವು ಹುಟ್ಟಿ ಬಂದ ಸಮುದಾಯ ಮಧ್ಯೆ ಬೇರೆ ಎಂಥ ಬಿಕ್ಕಟ್ಟು ನಿರ್ಮಿಸಿತು?

ನಾಯಕ: ಆಶ್ಚರ್ಯ ಅಂದರೆ ಇವತ್ತಿಗೂ ನಿರ್ಮಿಸಿಲ್ಲ. ನನ್ನ ಅಪ್ರೋಚ್ ಇದೆಯಲ್ಲ ಅದು ಎಂದೂ ಉಢಾಫೆಯದಲ್ಲ ಅಂತ ಅನ್ಕೊಂಡಿದೀನಿ. ನನ್ನ ನಿಲುವಿನಲ್ಲಿ ರಾಜಿ ಮಾಡ್ಕೊಳ್ಳಿಕ್ಕೆ ಹೋಗಲ್ಲ ಸಾಮಾನ್ಯವಾಗಿ. ಆದರೆ ಜನರನ್ನ ಅರ್ಥ ಮಾಡಿ ಕೊಳ್ಳೋಕೆ ಬೇಕಾದಂಥ ಸಹಾನುಭೂತಿ ಪರವಾದ ಮನಸ್ಸು ಯಾವಾಗಲೂ ಇದ್ದೇ ಇರುತ್ತೆ. ನನ್ನ ಜೊತೇಲಿ ಚಿಕ್ಕಂದಿನಲ್ಲಿ ಓದಿದವರು ನನ್ನನ್ನು ಚಿಕ್ಕಂದಿನಿಂದ ಬಲ್ಲವರು ಇದಾರಲ್ಲ, ಅವರು ನಾನು ಊರಿಗೆ ಹೋದರೆ ಆ ಪ್ರೀತಿ ವಿಶ್ವಾಸದಲ್ಲೇ ಅಷ್ಟೇ ಸಲಿಗೆಯಿಂದಲೆ ಈಗಲೂ ನನ್ನ ಜೊತೆಯಲ್ಲಿ ಇರಬಲ್ಲರು. ನಮ್ಮ ತಾಯಿ ವಿಷಯದಲ್ಲಿ ಸ್ವಲ್ಪ ಸಮಸ್ಯೆ ಇತ್ತು. ೧೯೬೫ರಲ್ಲಿ ನಾನು ವರದಕ್ಷಿಣೆ, ಊಟ, ವಾದ್ಯ, ಗರ್ನಾಲು ಇತ್ಯಾದಿಗಳಿಲ್ಲದ ಸರಳ ಮದುವೆ ಮಾಡಿಕೊಳ್ಳಲು ತೀರ್ಮಾನಿಸಿದಾಗ, ಎದುರುಗಡೆ ಕೂಡಿಸಿಕೊಂಡು ಹೇಳ್ತಾ ಇದ್ರೂ ಅವಳಿಗೆ ಅರ್ಥ ಆಗಲಿಲ್ಲ. ನಾನು ಇಷ್ಟು ಸರಳವಾಗಿ ಮದುವೆ ಆಗುವುದು ಮನೆ ಮರ್ಯಾದೆಗೆ ಕಡಿಮೆ ಎಂದಳು. ಆವರೆಗೆ ಮೂಗುತಿ ಹಾಕಿಕೊಂಡಿರದ ವಧುವಿಗೆ, ಮೂಗುತಿ ಕಾಲುಂಗುರ ಹಾಕಿಸುವುದು ಬೇಡ ಎಂದದ್ದಕ್ಕೆ, ಅದು ದೊಡ್ಡ ಅಪಶಕುನ ಎಂದು ಬೆದರಿದಳು. ಅದು ಲಾಲ್‌ಬಹದ್ದೂರ್ ಶಾಸ್ತ್ರಿ ಕಾಲ. 'ಕಾನೂನಿಗೆ ವಿರುದ್ಧವಾಗಿ ಇಪ್ಪತ್ತೆರಡು ಕೆರೆಟ್ಟಿನ ಚಿನ್ನದ್ದೇನನ್ನೂ ನಾನು ವಧುವಿಗೆ ಹಾಕುವುದಿಲ್ಲ. ೧೪ ಕೆರೆಟ್ಟಿನ ಮಣಿ ಮಾತ್ರ ಹಾಕಿ ಕರಿಮಣಿಸರದ ತಾಳಿ ಕಟ್ಟುತ್ತೇನೆ' ಅಂದಾಗ ಹೌಹಾರಿದ್ದಳು. ನಾನೇನೊ ಹೇಳಿದಂತೆಯೇ ಮಾಡಿದೆ. ನನ್ನನ್ನೂ ಡಿಫೈನ್ ಮಾಡ್ಕೋಬೇಕಾದಾಗ, ನಿಲುವು ತಳೆಯೋ ಹೊತ್ತಿಗೆ ಸ್ವಬರ್ನಾಗಿ ನಾನು ನಿಂತ್ಕೊಂಡಾಗ, ತಕ್ಷಣ ಕಮ್ಯುನಿಕೇಟ್ ಆಗ್ತಾ ಇರಲಿಲ್ಲ. ಆದರೆ ನನ್ನ ವ್ಯಕ್ತಿತ್ವದ ಬಗ್ಗೆ ನಮ್ಮ ಪರಿಸರದಲ್ಲಿ ಯಾವಾಗಲೂ ಅಗೌರವ ಇರಲಿಲ್ಲ. ನಮ್ಮ ತಾಯಿಗೆ ನನ್ನ ವಿಷಯದಲ್ಲಿ ಒಂದು ಪ್ರಾಬ್ಲಂ ಇತ್ತು. ನಾನು ದೇವರು ಇಲ್ಲ, ದೆವ್ವ ಇಲ್ಲ ಅಂತ ಹೇಳ್ಲಿಕ್ಕೆ ಶುರು ಮಾಡಿದೆನಲ್ಲ, ಅವಳಿಗಿದ್ದ ಭಯ ಏನೆಂದರೆ, ನಮ್ಮದು ಪೂರ್ಣ ಧಾರ್ಮಿಕವಾದ ದೇವರು ದೆವ್ವಗಳ ಮೇಲೆ ನಂಬಿಕೆಯಿದ್ದ ಮನೆ. ಅವಳಿಗೂ ನನ್ನ ಅಕ್ಕಂದಿರಿಗೂ ಮೈಮೇಲೆ ದೈವ್ವ ಬರ್ತಿತ್ತು. 'ಇಂಗ್ಲಿಷ್ ಕಲಿತ ಇವನೊಬ್ಬನಿಗೇ ಎಲ್ಲಾ ಗೊತ್ತಾಗುತ್ತಾ? ಇವನ ಹಿರಿಯರಿಗೆಲ್ಲಾ ಏನೂ ಗೂತ್ತಾಗ್ತಿರಲಿಲ್ಲವಾ?' ಎಂಬುದು ಅವಳ ಪ್ರಶ್ನೆ. ಎರಡನೇ ದೊಡ್ಡ ಆತಂಕ ಅಂದರೆ, 'ಇವನು ಎಷ್ಟಿದ್ದರೂ ಹುಡುಗ. ದೇವರು ದೆವ್ವ ಇಲ್ಲ

ಅಂದ ಮೇಲೆ ನೀತಿ ಮೌಲ್ಯ ಎಂಬುದು ಇವನಿಗೆ ಇದೆಯಾ?' ಇದು ಅವಳನ್ನು ಕಾಡ್ತಿತ್ತು. ನನಗೆ ಬಹಳ ದಿವಸ ಬೇಕಾಯಿತು ಅದನ್ನು ತಿಳ್ಕೊಳ್ಳಿಕ್ಕೆ. ನನ್ನ ನಡವಳಿಕೆಯನ್ನು ಗಮನಿಸ್ತಾ ಬಂದ ಅವಳಿಗೆ ನನ್ನ ಶೀಲ, ನೀತಿ ನಿಷ್ಠೆ ಬಗ್ಗೆ ಆಮೇಲೆ ತುಂಬ ಭರವಸೆ ಬಂತು. ಆ ವಿಷಯದಲ್ಲಿ ಇದ್ದ ದೂರದ ಭಯ ಹೋಯ್ತು. ನನ್ನ ಮದುವೆಗಿಂತ ಸರಳವಾಗಿ ನಮ್ಮ ಒಬ್ಬಳೇ ಮಗಳ ಮದುವೆ ಯನ್ನು ನಾವು ೧೯೮೮ರಲ್ಲಿ ಮಾಡಿಸಿದಾಗ ಅವ್ವನಿಗೆ ೮೮ ವರ್ಷ. ಅವಳ ಎದುರಿನಲ್ಲಿ ಮದುಮಕ್ಕಳ ಹಾರ ವಿನಿಮಯ ಆಯ್ತು. ತುಂಬ ಸಂತೋಷ ವ್ಯಕ್ತಪಡಿಸಿದ್ದಳು. ನಾನು ಹುಟ್ಟಿ ಬೆಳೆದ ಪರಿಸರದ ಜನ ನನ್ನನ್ನು ಯಾವಾಗಲೂ ಪ್ರೀತಿ, ವಾತ್ಸಲ್ಯ, ಗೌರವಗಳಿಂದ ಕಂಡಿದ್ದಾರೆ.

ಸಂ: ನಮ್ಮ ಸಮುದಾಯಗಳ ಸಾಂಸ್ಕೃತಿಕ ಲೋಕಾನ ಅರ್ಥ ಮಾಡಿಕೊಳ್ಳೋ ವಿಷಯದಲ್ಲಿ, ಯೂರೋಪಿನ ವಿಚಾರವಾದ ಮಾದರಿಗಳು ನಿರ್ಮಿಸಿದ ಬಿಕ್ಕಟ್ಟುಗಳ ಬಗ್ಗೆ ನಾವಿನ್ನೂ ಶೋಧಿಸಬೇಕಾದ್ದು ಬಹಳ ಇದೆ ಅಂತ ಅನಿಸುತ್ತೆ.

ನಾಯಕ: ಅಂದರೆ ಒಂದಾಯಿತು. ನಾವು ಇಂಗ್ಲೀಷ್ ಎಜುಕೇಶನ್ ಸಿಸ್ಟಮ್ ನಿಂದ ಒಂದು ರೀತೀಲಿ ನಮ್ಮ ಜನರಿಂದ ಪೂರ್ತ ಅಲ್ಲದೆ ಇರಹುದು, ತನ್ನಿಂದ ತಾನೆ ಬೇರೆ ಆಗ್ತಿದ್ದೋರು. ಬೇರೇದೇನನ್ನೋ ಕಲೀಲಿಕ್ಕೆ ಹೋಗ್ತಾ ಇದೀವಿ, ಹೊಸ ಕಾಲದ ಹೊಸ ತಿಳುವಳಿಕೆಗೆ ಹೋಗ್ತಾ ಇದೀವಿ ಅನ್ನೋದು ನಮಗೆ ಇತ್ತು. ಆದರೆ ನಮಗೆ ಇನ್ನೊಂದು ಅನುಕೂಲ ಆಯ್ತು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಮಡಿಮೈಲಿಗೆ ಎಲ್ಲಾ ಹೊರಟೋಗಿತ್ತು. ನಮ್ಮ ಮನೇಲಿ ಪೋಲಿಸರು ಯಾವಾಗ ಬೂಟುಗಾಲಲ್ಲಿ ಬಂದರು, ಯಾವತ್ತಿಗೆ ಏನನ್ನು ಮಾಡತ್ತಿದರು ಲೆಕ್ಕಿಲ್ಲ. ಜೈಲಿಗೆ ಹೋದವರು ಯಾರ ಜೊತೇಲಿ ಏನು ತಿಂದಿದ್ದಾರೆ ಉಂಡಿದ್ದಾರೆ ಗೊತ್ತಿಲ್ಲ. ಹೀಗಾಗಿ ಮಡಿ ಮೈಲಿಗೆ ಪ್ರಶ್ನೇನೇ ಹೊರಟೋಯ್ತು. ದೊಡ್ಡದೊಡ್ಡವರ ಜತೆ ಜೈಲಲ್ಲಿ ಇದ್ದರಲ್ಲಾ, ಜೈಲಿಂದ ಬರೋವಾಗಲೇ ಎಲ್ಲರಿಗೂ ಮೇನ್ ಸ್ಟ್ರೀಮಿನ ಕಲ್ಪನೆಗಳು ಬರಲೀಕ್ಕೆ ಶುರುಮಾಡಿತ್ತು. ನಮ್ಮಲ್ಲಿ ಅದು ಎಷ್ಟು ವೇಗದಲ್ಲಿ ಎಜುಕೇಶನ್ ಶುರುವಾಯಿತು ಅಂದ್ರೆ, ಗಂಡುಮಕ್ಕಳು ಹೆಣ್ಣುಮಕ್ಕಳು ಎಸ್ಸೆಲ್ಸಿಯವರೆಗೆ ಓದದೆ ಇದ್ದವರು ಸಿಗುವುದೇ ಇಲ್ಲ. ಒಂಥರ ಬಿಡುಗಡೆಯ ಪರಿಸರದಲ್ಲಿ ನಾವು ಬೆಳದಿವಿ.

ಸಂ: ಸಮುದಾಯದ ಸಂಸ್ಕೃತಿಗಳ ಜತೆ ಇನ್ನೂ ಆಪ್ತವಾಗಿ ಒಡನಾಡಲು ಬೇಕಾದ ಹಾಗೆ ನಮ್ಮ ರ್‍ಯಾಶನಲಿಸ್ಟ್ ಚಿಂತನಕ್ರಮಾನ ಬದಲಿಸಿಕೊಳ್ಳೋ ಅಗತ್ಯ ಇದೆ ಅನಿಸುತ್ತಾ?

ನಾಯಕ: ನಂಗೆ ಹಾಗೆ ಅನಿಸಿಲ್ಲ. ಉದಾಹರಣೆಗೆ ವರದಕ್ಷಿಣೆ ಮದುವೆಗೆ ಹೋಗೋದಿಲ್ಲ ಅಂತ ನಾನೂ ನನ್ನ ಹೆಂಡತಿ ಮೀರಾ ಬಹಿಷ್ಕಾರ ಹಾಕ್ತಿದೆವುಮೊದಲು. ಅಣ್ಣನ ಮಕ್ಕಳದೇ ಆಗಲಿ, ಅಕ್ಕನ ಮಕ್ಕಳದೇ ಆಗಲಿ ಹೋಗೋದು ಇಲ್ಲಾಂತ ಗಟ್ಟಿಯಾಗಿ

ನಾನು ನನ್ನ ಮಡದಿ ಮಕ್ಕಳು ಯಾರೂ ಹೋಗಲೇ ಇಲ್ಲ. ನಂತರ ಧಾರ್ಮಿಕ ಮದುವೆಗಳಿಗೂ ಹೋಗೋಲ್ಲ ಅಂತ ತೀರ್ಮಾನ ಮಾಡಿದೆವು. ಸರಳ ಮತ್ತು ಧಾರ್ಮಿಕವಲ್ಲದ ಮದುವೆಗಳಿಗೆ ಮಾತ್ರ ನಾವು ಹೋಗ್ತೇವೆ. ನನಗೆ ಗೊತ್ತಿದೆ, ಅಷ್ಟೊಂದು ಎಕ್ಸ್‌ಟ್ರೀಮಲ್ಲಿ ನಿಲುವು ತಳಿಬೇಕಾಗಿರಲಿಲ್ಲ ಅಂತ. ಆದರೆ ಈ ನಿಲುವನ್ನು ತಳೆಯೋದು ಅಗತ್ಯ ಅಂತ ಯಾಕೆ ಮಾಡ್ತಾ ಇದೀನಿ ಅಂದ್ರೆ, ನನ್ನಂಥೋನು ಮಾಡದಾಗ ಇವನು 'ಯಾಕೆ ಮದುವೆಗೆ ಬರಲ್ಲ' ಅಂತ ಕೆಲವರಿಗಾದ್ರೂ ಯೋಚನೆ ಮಾಡೋಕೆ ಹಚ್ಚೇಹಚ್ಚುತ್ತೆ. ಬಯ್ಯೋಕಾದ್ರೂ ಚರ್ಚೆ ಮಾಡತಾರೆ. ಬೇರೆ ತರಹ ಅವರಿಗೆ ಕಮ್ಯುನಿಕೇಟ್ ಮಾಡಕಾಗಲ್ಲ. ಈಗ ವರದಕ್ಷಿಣೆ ಅನ್ನೋದು ಹೇಗಾಗಿದೆ ಅಂದ್ರೆ, ಅದಕ್ಕೆ ಸ್ಟ್ರಾಂಗ್ ಡಿಸೆಂಟ್ ಹಾಕಲೇಬೇಕು. ಅಂಥ ಮದುವೆಗೆ ಹೋದರೆ ಕಾನೂನನ್ನು ಧಿಕ್ಕರಿಸಿದಂತೆಯೂ ಆಗ್ತದೆ. ವರದಕ್ಷಿಣೆ ವಿರೋಧಿ ಮಾತನಾಡ್ತಾ, ವರದಕ್ಷಿಣೆ ವ್ಯವಹಾರ ಇರುವ ಮದುವೆಗೆ ಹೋಗಿ ಉಂಡು ಬರುವವರೂ ಅಪರಾಧ ಮಾಡಿದವರೇ ಆಗ್ತಾರೆ ಎಂಬುದು ನನ್ನ ಮತ್ತು ನನ್ನ ಹೆಂಡತಿಯ ಅಭಿಪ್ರಾಯ. ನಮ್ಮ ಊರಿನ ಬೀರ ದೇವಸ್ಥಾನವನ್ನು ನವೀಕರಿಸಲು ದೇಣಿಗೆ ಎತ್ತಿದ್ರು. ನಮ್ಮನ್ನೂ ಕೇಳಿದ್ರು. ನಾವು ಅದಕ್ಕೆ ದೇಣಿಗೆ ಕೊಡ್ಲಿಲ್ಲ. ಊರಿನಲ್ಲಿ ಬಸ್ ತಂಗುಮನೆ ಇರ್ಲಿಲ್ಲ. ಅದನ್ನು ಕಟ್ಟಿಸಿ ಕೊಟ್ಟೆವು. ನನ್ನ ಅಕ್ಕ ದೇವರು, ದೈವ ಅಂತ ನಂಬಿಕೆ ಇರುವವಳು. ಅವಳೇನೊ ಒಂದಷ್ಟು ಹಣ ಕೊಟ್ಟಳು. ಅವಳಿಗೆ ತಿಳಿಸಿ ಹೇಳಿ, ಅವಳು ದಾನ ಮಾಡಬೇಕೆಂದಿದ್ದ ಎರಡು ಲಕ್ಷ ರೂ. ಹಣವನ್ನು ದೇವಸ್ಥಾನದ ನವೀಕರಣದ ಕೆಲಸಕ್ಕೂ ಕೊಡಿಸ್ಲಿಲ್ಲ; ಕಲ್ಯಾಣ ಮಂಟಪ ಕಟ್ಟಿಸುವವರಿಗೂ ಕೊಡಿಸ್ಲಿಲ್ಲ; ಅಂಕೋಲೆಯ ಪಿ ಎಂ ಜ್ಯೂನಿಯರ್ ಕಾಲೇಜಿಗೆ ಕೊಡಿಸಿದೆವು. ಸಮುದಾಯದ ಸಂಸ್ಕೃತಿಗಳ ಜೊತೆ ಆಪ್ತವಾಗಿ ಒಡನಾಡಬೇಕೆಂಬ ಪರಿಕಲ್ಪನೆಯಲ್ಲಿ ಕೂಡ ಬದಲಾಗಬೇಕಾದ ಅಗತ್ಯ ಇದ್ದೆ. ಸಮುದಾಯದ ಸಂಸ್ಕೃತಿ ಜೊತೆ ಎಂಬ ಬದಲು ಸಮುದಾಯದ ಬದುಕಿನ ಜೊತೆ ಎಂದು ತಿದ್ದುಪಡಿ ಮಾಡಿಕೊಳ್ಳೋದು ಅಗತ್ಯ. ಜಾತಿ, ಮತಧರ್ಮ, ಮಂದಿರ ಮಸೀದಿ, ಚರ್ಚ್ ಗುರುದ್ವಾರಗಳು ಇವೆಲ್ಲ ಸಮುದಾಯ ಸಂಸ್ಕೃತಿಯ ಅರ್ಥ ವ್ಯಾಖ್ಯಾನಗಳಲ್ಲಿ ಕಲಸಿ ಹೋಗುತ್ತಿವೆ. ಅಂಥ ಈ ಕಾಲದಲ್ಲಿ ಸಮುದಾಯದ ಸಂಸ್ಕೃತಿಯ ಪರಿಕಲ್ಪನೆ ಭಾರತದ ಸಮಗ್ರ ಜನತೆಯ ಸಂಸ್ಕೃತಿ ಕಟ್ಟೋಣದ ಪರಿಕಲ್ಪನೆಯದಾಗಬೇಕು. ತುಂಡು ತುಂಡು ಸಮುದಾಯಗಳ ವ್ಯಾಪ್ತಿಗೇ ನಿಲ್ಲಬಾರದು. ಜಾತಿ, ಮತ ಧರ್ಮ ಸಂಬಂಧವಾದ ನಂಬಿಕೆಯು, ನಂಬುವವರ ಸ್ವಂತದ ಮತ್ತು ಖಾಸಗಿ ವ್ಯವಹಾರ ಮಾತ್ರ ಆಗಬೇಕು. ದೇಶದ ಮನುಷ್ಯ ಮನುಷ್ಯರ ನಡುವಿನ ಸಂಬಂಧದ ನಡುವೆ ಅದು ತಲೆಹಾಕು ವಂತೆಯೊ ಮೂಗು ತೂರಿಸುವಂತೆಯೊ ಇರಬಾರದು. ಜಾತಿ ಮತಧರ್ಮ ನಿರಪೇಕ್ಷವಾದ ಸಮಾಜವಾದೀ ಸಮಾಜ, ಸಂಸ್ಕೃತಿಯನ್ನು ಕಟ್ಟುವ ಭಾರತದ ಸಂವಿಧಾನ ಪ್ರಣೀತ

ಕನಸನ್ನು ಭಗ್ನಗೊಳಿಸುತ್ತಲೇ ಇರುವ, ಜಾತಿ-ಮತ-ಧಾರ್ಮಿಕ ಚಟುವಟಿಕೆ ಮನೋಧರ್ಮಗಳನ್ನು, ನಮ್ಮ ನಮ್ಮ ವೈಯಕ್ತಿಕ ಮಟ್ಟದಲ್ಲಿಯಾದರೂ ವಿರೋಧಿಸಲೇ ಬೇಕಾಗಿದೆ. ಆದ್ದರಿಂದ ನಾವು ಧಾರ್ಮಿಕ ಆಚಾರ ವಿಧಿಗಳಂತೆ ನಡೆಯುವ ಮದುವೆಗಳಿಗೂ ಹೋಗೋದಿಲ್ಲ. ಮನೆಯಲ್ಲಿ ಮತಧಾರ್ಮಿಕ ಹಬ್ಬಗಳನ್ನು ಆಚರಿಸೋದಿಲ್ಲ. ರಾಷ್ಟ್ರೀಯ ದಿನಗಳೇ ನಮ್ಮ ಮನೆಯಲ್ಲಿ ಹಬ್ಬದ ದಿನಗಳು. ಜನವರಿ ೨೬, ಆಗಸ್ಟ್ ೧೫, ಅಕ್ಟೋಬರ್ ೨, ನವೆಂಬರ್ ೧- ಹೀಗೆ. ನಾನು ಹುಟ್ಟಿದ ಜಾತಿಯವರ ಸಂಘ ಸಂಘಟನೆಗಳ ಜೊತೆಗೆ ಯಾವ ವಿಧವಾದ ಸಂಬಂಧವನ್ನು ನಾವು ಇಟ್ಟುಕೊಂಡಿಲ್ಲ. ನನ್ನ ಹೆಂಡತಿ ಮೀರಾ ೨೫ ವರ್ಷಗಳಿಂದ ಸಮತಾ ವೇದಿಕೆ ಎಂಬ ಮಹಿಳಾ ಸಮಾನತೆಗಾಗಿ ಹೋರಾಡುವ ಮಹಿಳಾ ವೇದಿಕೆಯ ಸ್ಥಾಪಕ ಸದಸ್ಯರಲ್ಲಿ ಒಬ್ಬಳಾಗಿದ್ದು ಈವರೆಗೂ ಕ್ರಿಯಾಶೀಲಳಾಗಿದ್ದಾಳೆ. ೧೯೮೨ ರಿಂದ ನಮ್ಮ ಮನೆಯಲ್ಲಿಯೆ ಸಮತಾವೇದಿಕೆ-ಆಫೀಸಾಗಿ ನಡೆಯುತ್ತಾ ಬರುತ್ತಿದೆ. ವೇದಿಕೆಯವರು ನೂರಾರು ಹೆಣ್ಣು ಮಕ್ಕಳ ಸಮಸ್ಯೆಗಳಿಗೆ ಸ್ಪಂದಿಸ್ತಾ, ಪರಿಹಾರ ಮಾಡಲು ನೆರವು ನೀಡ್ತಾ ಬಂದಿದ್ದಾರೆ. ಸರ್ಕಾರದಿಂದಾಗ್ಲಿ ಬೇರೆ ಯಾವ್ದೇ ಸಂಸ್ಥೆಯಿಂದಾಗ್ಲಿ ಗ್ರಾಂಟೊ, ಆರ್ಥಿಕ ನೆರವೊ ಪಡೆಯದೆ ಸ್ವಂತದ ಹಣ, ಬಿಡುವಿನ ಕಾಲ, ಶ್ರಮದಿಂದ ಸಮತಾದವ್ರು ಈ ಕೆಲ್ಸ ಮಾಡ್ತಿದ್ದಾರೆ. ರ್‍ಯಾಶನಲಿಸ್ಟ್ ಧೋರಣೆ ನನ್ನ ಹೆಂಡತಿಯಲ್ಲಿ ಬೆಳೆಯದೆ ಇದ್ದಿದ್ರೆ ಇಷ್ಟು ಜನ ಸಂಪರ್ಕ, ಈ ರೀತಿ ಆಸಕ್ತಿ, ಸಮಾಜದ ಬಗೆಗಿನ ಇಂಥ ಕಾಳಜಿ ಅವಳಲ್ಲಿ ಬೆಳೀತಾ ಇರ್‍ಲಿಲ್ಲ ಅಂತ ನಾನು ತಿಳಿದಿದ್ದೀನಿ. **ಸಮುದಾಯದ ಬದುಕಿನ** ಜೊತೆ ಆಪ್ತವಾಗಿ ಒಡನಾಡುವುದಕ್ಕೆ ರ್‍ಯಾಶನಲಿಸಂ ಚಿಂತನಕ್ರಮ ತೊಡಕಾಗಬೇಕಿಲ್ಲ. ಬದಲಾಗಿ ಅದೊಂದು ಶಕ್ತಿಯಾಗ ಬಲ್ಲದು. ಆ ವಿಷಯದಲ್ಲಿ ಕಾರಂತರಿಗಿಂತ ಬೇರೆ ಉದಾಹರಣೆ ಬೇಕೆ?

ಸಂ: ಕನ್ನಡದಲ್ಲಿ ಸಮುದಾಯಗಳ ಬದುಕಿನ ಜೊತೆ ಅರ್ಥಪೂರ್ಣವಾಗಿ ಒಡನಾಡುವಂತೆ ಹೊಸ ಚಿಂತನಕ್ರಮದ ಹುಡುಕಾಟ ನಡೀತಿದೆ ಅಂತ ನಾನು ತಿಳೀತೇನೆ. ಈಚಿನ ಅನೇಕ ಸಾಂಸ್ಕೃತಿಕ ಅಧ್ಯಯನಗಳು ಇದಕ್ಕೆ ಸಾಕ್ಷಿ. ಸಾಹಿತ್ಯ ಸೃಷ್ಟಿಯಲ್ಲೂ ಇದು ಶುರುವಾಗಿದೆ. ಉದಾಹರಣೆಗೆ 'ಕುಸುಮಬಾಲೆ'.

ನಾಯಕ: ನಾವು ಹೊಸದಾಗಿ ಕಲ್ತುಕೊಳ್ಳಬೇಕಾದ್ದು ಪಡೀಬೇಕಾದ್ದು ಇಲ್ಲೂ ಇದೆ ಇಲ್ಲಿದೆ ಅಂತ ಅನಿಸಿದಾಗ, ನಾವು ಬೆಳೆದ ಪರಿಸರದ ಸಂಸ್ಕೃತಿ ಸಂದರ್ಭದ ಲಯ ಇದೆಯಲ್ಲ, ಅದರಲ್ಲಿ ಆಸಕ್ತಿ ಮೂಡುತ್ತೆ. ಆದರೆ ಅನಂತಮೂರ್ತಿಯವರ ಆಸಕ್ತಿಗೂ ನಮ್ಮಂಥವರ ಆಸಕ್ತಿಗೂ ವ್ಯತ್ಯಾಸ ಇದೆ.ಅನಂತಮೂರ್ತಿಯವರು 'ದಿವ್ಯ'ದಲ್ಲಿ ಅಗೀತಾ ಇರುವಂಥದ್ದು, ಅವರು ಮೊದಲು ಯಾವುದು ಸಲ್ಲದು ಅಂತ ತಿಳಕೊಂಡು ಬರೀತಾ ಇದ್ದರೊ ಅದೇ. ಅದನ್ನ ಈಗ ಸಲ್ಲುವಂಥದ್ದು ಅಂತ ಸ್ಥಾಪನೆ ಮಾಡುವ ಧೋರಣೆ ಕಾಣಿಸ್ತಿದೆ. ಅದು ತಲೆಕೆಳಗಾಗಿ ಹೋಗುವ ದಿಕ್ಕಿನಲ್ಲಿದೆ. ನನ್ನ ಪ್ರಶ್ನೆ

ಏನಂದರೆ,ನೀವು ಆ ಬದುಕಿನ ಲಯ ವಿನ್ಯಾಸಗಳನ್ನು ರ್‍ಯಾಶನಲಿಸ್ಟ್ ಆಗಿಯೇ ಅರ್ಥಮಾಡಿಕೊಳ್ಳುವ ಒತ್ತಡಗಳಿಂದ ಒಳಹೊಕ್ಕು ನೋಡೋದಾದಾಗ, ಬಹಳ ಹ್ಯೂಮನ್ ಆಗಿರಬಹುದು-ಮನುಷ್ಯ ಮನುಷ್ಯ ಸಂದರ್ಭದಲ್ಲಿ ವ್ಯಾಲ್ಯೂಸ್ ದೃಷ್ಟಿಯಿಂದ. ನಮಗೆ ಜನಸಮುದಾಯಗಳ ಮೇಲೆ ಕನ್ಸರ್ನ್ ಇದೇ ಅಂತ ತಾನೇ ಈ ಬಗ್ಗೆ ನಾವು ಯೋಚನೆ ಮಾಡ್ತಾ ಇರೋದು? ಆದ್ದರಿಂದ ನಾವು ಬೆಳೆದು ಬಂದ ಪರಿಸರಾನ್ನ ವಿಚಾರವಾದದಿಂದ ತಿರುಗಿ ನಾವೀಗ ನೋಡ್ತಾ ಇರೋ ರೀತಿ ಇದೆಯಲ್ಲ, ಅದರಲ್ಲಿ ಒಂದು ಡಿಸ್ಟೆನ್ಸ್ ಸಾಧ್ಯವಾಗಿದೆ. ನಮ್ಮ ತಿಳುವಳಿಕೆ ನೆಲೆಯಿದ ಮೌಲ್ಯಮಾಪನ ಮಾಡಿ, ಸಲ್ಲುವ ಸಲ್ಲದೇ ಇರುವ ಬಗ್ಗೆ ಒಂದು ಡಿಸ್ಕ್ರಿಮಿನೇಟಿವ್ ನೋಟ ಸಾಧ್ಯ ಆಗಿದೆ. ಅದು ಅವರ ಜತೇಲೇ ಬದುಕ್ತಾ ಇದ್ದಾಗ ಸಾಧ್ಯವಾಗ್ತಿರಲಿಲ್ಲ. 'ಕುಸುಮಬಾಲೆ' ಮಾಡ್ತಾ ಇರೋದು ಇದೇ. ಅಲ್ಲಿ ಕಲೆಯ ಸಂದರ್ಭದಲ್ಲಿ ಆಗಿದೆ.

ಸಂ: ಅಡಿಗರು ಅನಂತಮೂರ್ತಿ ಬಿಟ್ರೆ, ನಿಮ್ಮ ವಿಮರ್ಶೆ ಮೇಲೆ ಪ್ರಭಾವ ಬೀರದೋರು ಯಾರು ಸಾರ್?

ನಾಯಕ: ಕುರ್ತಕೋಟಿ ಅನ್ಸುತ್ತೆ. ೧೯೬೨ನೇ ಇಸ್ವಿಯಲ್ಲಿ 'ಯುಗಧರ್ಮ ಮತ್ತು ಸಾಹಿತ್ಯ ದರ್ಶನ' ಬಂತಲ್ಲ, ಆಗ ಒಂದು ಸಲ ಅವರ ವಿಮರ್ಶೆ ನನಗೆ ಹೊಸ ಅನುಭವ ಕೊಡ್ತು. ನನ್ನಲ್ಲಿ ಒಂದು ತಿರುವು ಬೇರೆ ಸ್ಪರ್ಶ ಬಂದದ್ದು ಆಗ. ಆದರೆ ಒಂದು ಮೊದಲಿಂದಲೂ ನನ್ನ ಸ್ವಭಾವದಲ್ಲೇ ಇದೆ. ಅಡಿಗರೇ ಇರಲಿ ಯಾರೇ ಇರಲಿ, ಯಾರಿಂದಲೂ ನಾನು ಪೂರ್ತಾ ಪ್ರಭಾವಿತನಾಗಲ್ಲ. ಯಾರದೇ ಭಕ್ತಾದಿಗಳಲ್ಲಿ ಬರೋದಿಕ್ಕೆ ಸಾಧ್ಯನೇ ಇಲ್ಲ. ಇಲ್ಲೂ ಅಷ್ಟೆ. ಕುರ್ತಕೋಟೀದು ಒಂದ್ಸಲ ನನಗೆ ಬರೆಯೋಕೆ ಹೊಸ ಸಾಧ್ಯತೆಗಳ ಬಗ್ಗೆ ಸೂಚನೆ ಕೊಡ್ತು. ಒಂದು ದಿಕ್ಕು ಹುಡುಕೋಕೆ ಪ್ರೇರಣೆ ಕೊಡ್ತು. ಆದರೆ ಅವರದು ಕೂಡ ಪೂರ್ತಿಯಾಗಿ ಒಪ್ಪಿಗೆಯಾಗಲಿಲ್ಲ. ಆಮೇಲೆ ಎಂ ಜಿ ಕೃಷ್ಣಮೂರ್ತಿಯವರ ಪ್ರಾಯೋಗಿಕ ವಿಮರ್ಶೆ ಇತ್ತಲ್ಲ, ಅದು ಒಂದು ಕೃತಿ ಅಧ್ಯಯನ ಮಾಡುವಾಗ ಸೂಕ್ಷ್ಮಗಳನ್ನು ಅರಿಯುವ ಪರಿಯನ್ನು ಕಲಿಸಿ ಕೊಡ್ತು. ಇದನ್ನ ಹೇಳ್ಲೇಬೇಕು. ಆದರೆ ಎಂಜಿಕೆ ಕೂಡ ಬಹಳ ಫ್ಯಾಸಿನೇಟ್ ಮಾಡ್ಲಿಲ್ಲ. ಕೃತಿಯನ್ನು ಅರ್ಥಮಾಡ್ಕೊಳ್ಳೋದಿಕ್ಕೆ ಸಂಬಂಧಿಸಿದಂಥ ಒಂದು ಶಿಸ್ತಿಗೆ ಅವರು ಪ್ರಭಾವ ಮಾಡಿದರು ಅಂತ ಹೇಳಬಹುದು. ಅನಂತಮೂರ್ತಿ ಮಟ್ಟಿಗೆ ಬಂದಾಗ, ಅವರು ಸಂಪನ್ನತೆ ಹೊಳಹುಗಳನ್ನು ಚೆಲ್ತಾ ಇದ್ರಲ್ಲ, ಅದರ ಮೇಲೆ ಫಾಸಿನೇಶನ್ ಇತ್ತು. ಆದರೆ ಇದು ಕೂಡ, ಒಂದು ಮಟ್ಟದವರೆಗೆ ಮಾತ್ರ. ಆದರೆ ಥಟ್ಟನೆ ಹೊಳೆಯಿಸುವ, ನಮಗೆ ಬೆರಗುಗೊಳಿಸಬಹುದಾದ ಶಕ್ತಿಯನ್ನು ನಾನು ಅವರಲ್ಲಿ ಬಹಳಸಲ ಕಂಡಿದ್ದೀನಿ. ವಿಮರ್ಶೆಗೆ ಈ ಮೂರೇ ಜನ ನನ್ನನ್ನು ಆ ಕಾಲದಲ್ಲಿ ಸೆಳೆದವರು.

ಸಂ: ನಿಮ್ಮದು ಒಂದು ಬಗೆಯಲ್ಲಿ ನೈತಿಕ ಆದರ್ಶವಾದಿ ವ್ಯಕ್ತಿತ್ವ. ಈ ವಿಷಯದಲ್ಲಿ ಅನಂತಮೂರ್ತಿಯವರು ಚಂಚಲ. ಸಾಹಿತ್ಯ ಬಿಟ್ರೆ ಇತರೆ ವಿಷಯಗಳಲ್ಲಿ ಅವರ ನಿಮ್ಮ ಸಂಬಂಧ ಹೇಗಿತ್ತು?

ನಾಯಕ: ಯಾವಾಗಲೂ ಜೊತೇಲಿ ಸಾಹಿತ್ಯ ಅದೂ ಇದೂ ಅಂತಮಾತಾಡ್ತಾನೇ ಇದ್ದೆವಲ್ಲ, ಹೀಗಾಗಿ ಅವರ ಬಗ್ಗೆ ಹೆಚ್ಚು ಒಲವು ಬಂತು. ಭಾವುಕವಾಗದೇನೇ ನಾನು, ಒಂದು ಅಂತರದಲ್ಲಿದ್ದು ಸಾಹಿತ್ಯದ ಬಗ್ಗೆ ಕಲಿಸಬಹುದಾದೋರು ಇವರು ಅಂತ ನೋಡಿದೇನೆ. ಅವರು ಸಂಚಾರಿಯಾಗಿ ಹೆಚ್ಚು ಒಳನೋಟಗಳನ್ನು ಕೊಡಬಲ್ಲರು ಅಂತ ಬಲ್ಲೆ. ಆದರೆ ವ್ಯಕ್ತಿತ್ವ ಕಟ್ಟಿಕೊಳ್ಳೋ ವಿಷಯ ಬಂದಾಗ, ಕೊಡಬಹುದಾದೋರು ಅಂತ ಅನಿಸಲಿಲ್ಲ. ಅವರ ವ್ಯಕ್ತಿತ್ವ ನಾನು ಅನುಸರಿಸ ಬೇಕಾದ್ದು ಎಂಬ ಭಾವವನ್ನ ಯಾವ ಕಾಲದಲ್ಲೂ ಕೊಡಲಿಲ್ಲ. ಆದರೆ ಅಡಿಗರಲ್ಲಿ ಹಾಗಲ್ಲ. 'ಪ್ರಶ್ನೆ' ಸಂಕಲನದ ಕಥೆಗಳಿಂದ ಹಿಡಿದು ಮುಂದಿನ ಅವರ ಎಷ್ಟೋ ಕಥೆಗಳನ್ನು ಹಾಗೂ 'ಭಾರತೀಪುರ' ಕಾದಂಬರಿಯನ್ನು ಪ್ರಕಟನೆಗೆ ಮೊದಲೇ ಕೈಬರಹದಲ್ಲಿರುವಾಗಲೇ ನನಗೆ ಅವರಾಗಿಯೆ ಕೊಟ್ಟು ಓದಿಸುವಷ್ಟು ಅನಂತಮೂರ್ತಿಯವರ ಒಡನಾಟ ನಿಕಟವಾಗಿತ್ತು. 'ಭಾರತೀಪುರ'ವನ್ನಂತೂ ಪ್ರತಿ ಚಾಪ್ಟರ್ ಬರೆದಂತೆಲ್ಲ ಕೊಟ್ಟು ಓದಿಸಿದ್ದರು. ಎನ್‌ಬಿಟಿಗೆ 'ಆಧುನಿಕ ಕನ್ನಡ ಕಾವ್ಯ ಸಂಚಯ', ಸಿಐಐಎಲ್‌ಗೆ ಕನ್ನಡ ಸಾಹಿತ್ಯ ಭಾಗಗಳ ಆಯ್ದ ಸಂಚಯ ಸಿದ್ಧಪಡಿಸುವಾಗಲೂ ಅನಂತಮೂರ್ತಿ ನನ್ನಿಂದ ಗಣನೀಯದ ನೆರವು ಪಡೆದಿದ್ದರು. ಮುರಳೀಧರ ಉಪಾಧ್ಯ ಅವರು ತಂದ 'ಯು ಆರ್ ಅನಂತಮೂರ್ತಿ' ಎಂಬ ಪುಸ್ತಕ ಓದಿದರೆ ನನಗೂ ಅವರಿಗೂ ವೈಯಕ್ತಿಕ ಮಟ್ಟದಲ್ಲಿ ಯಾವುದೇ ಬಗೆಯ ಪರಿಚಯವೊ ಸಂಬಂಧವೊ ಇದ್ದಿರಬಹುದೆಂಬುದು ಕೂಡ ಗೊತ್ತಾಗದಂತೆ ಇದೆ. 'ಭಾರತೀಪುರ' ಬರೆಯುತ್ತಿರುವಾಗ ಆಲನಹಳ್ಳಿ ಶ್ರೀಕೃಷ್ಣ ಅವರಿಗೆ ಮಾತ್ರ ಗೊತ್ತಿತ್ತು ಎಂದು ಸಂಪಾದಕೀಯದಲ್ಲಿ ಬೇರೆ ಇದೆ. ನೋಡಿ ಆಶ್ಚರ್ಯವಾಗಿತ್ತು. 'ದಿವ್ಯ' ಕಾದಂಬರೀನ ಕೂಡ ಅದು ಪ್ರಕಟವಾಗೋ ಕ್ಕಿಂತ ಮುಂಚೆ ನಾನು ಓದ್ಬೇಕು ಅಂತ ಹೇಳಿ ಡಾ. ಪಂಡಿತಾರಾಧ್ಯರಿಗೆ ಇಂಗ್ಲೆಂಡಿ ನಿಂದ ಅನಂತಮೂರ್ತಿಯವರು ಇ-ಮೇಲ್ ಕಳಿಸಿದ್ರು. ನಾನು ಓದುವ ಉತ್ಸಾಹ ತೋರಿಸಲಿಲ್ಲ. ಪ್ರಕಟವಾದ ಮೇಲೆ ಓದಿದೆ. ೧೯೮೧ರಲ್ಲಿ 'ರುಜುವಾತು' ಪತ್ರಿಕೆ ಹೊರಬಂದ ಕಾಲದಿಂದ ದೂರ ಆಗದಿದ್ದರೂ, ಮೊದಲಿನಷ್ಟು ಹತ್ತಿರದ ಒಡನಾಟವನ್ನು ವೈಯಕ್ತಿಕ ಮಟ್ಟದಲ್ಲಿ ಮುಂದುವರಿಸುವ ಉತ್ಸಾಹ ನನ್ನಲ್ಲಿ ಕಾರಣಾಂತರಗಳಿಂದ ಉಳಿದಿರಲಿಲ್ಲ.

ಸಂ: ಸಾರ್, ವಿಶೇಷ ಎಂದರೆ ನಿಮ್ಮನ್ನೂ ಪ್ರಭಾವಿಸಿದ ಅಡಿಗರು ಅನಂತಮೂರ್ತಿ ಇವರೆಲ್ಲ ಇಂಗ್ಲಿಷ್ ಸಾಹಿತ್ಯದ ಹಿನ್ನೆಲೆಯವರು. ನೀವು ಕನ್ನಡ ಅಧ್ಯಾಪಕರು. ಕನ್ನಡ ವಿಭಾಗಗಳ ಚಟುವಟಿಕೆಗಳು ನಿಮ್ಮ ವಿಮರ್ಶೆ ಕೆಲಸಕ್ಕೆ ಯಾವ ಪ್ರೇರ

ಣೇನೂ ಕೊಡಲಿಲ್ಲವಾ?

ನಾಯಕ: ಒಂದು ಚಾರಿತ್ರಿಕ ಸಂದರ್ಭದಲ್ಲಿ ಗಮನಿಸಬೇಕಾದ್ದು ಮೈಸೂರಿನ ಕನ್ನಡ ಡಿಪಾರ್ಟ್‌ಮೆಂಟಿನ ಪರಿಸ್ಥಿತಿ. ಪ್ರೊ ಸಿ ಡಿ ನರಸಿಂಹಯ್ಯನವರು ಕೇಂಬ್ರಿಜ್‌ನಲ್ಲಿ ಓದಿ ಬಂದವರಾಗಿದ್ರು. ತೆಲುಗು ಮಾತೃಭಾಷೆಯವರು ಬೇರೆ. ಇಂಗ್ಲೆಂಡಿನ ಮಾಡರ್ನ್ ಲಿಟರೇಚರ್ ಅಧ್ಯಯನದಿಂದ ಆ ಬಗೆಯ ಸಾಹಿತ್ಯಕ್ಕೆ ಒಲಿದಿದ್ರು. ಟಿ ಎಸ್ ಎಲಿಯಟ್, ಎಫ್ ಆರ್ ಲೀವಿಸ್, ಎ ಐ ರಿಚರ್ಡ್ಸ್‌ರ ಪ್ರಭಾವಕ್ಕೆ ಒಳಗಾಗಿದ್ರು. ಅವರು ಲೀವಿಸ್ ವಿದ್ಯಾರ್ಥಿ ಕೂಡ ಆಗಿದ್ರು. ರಿಚರ್ಡ್ಸ್‌ರನ್ನು ಅವರು ಮಹಾರಾಜಾ ಈ ಕಾಲೇಜಿನ ಪ್ರಿನ್ಸಿಪಾಲ್ ಆಗಿದ್ದಾಗ ಕರೆಸಿ ಭಾಷಣ ಮಾಡಿದ್ರು. ಬಿಎಂಶ್ರೀ ಕಾಲದಿಂದ ಕನ್ನಡ ಇಂಗ್ಲಿಷ್ ಡಿಪಾರ್ಟಮೆಂಟಿನವರಿಗೆ ಸಾಹಿತ್ಯ ಕುರಿತಂತೆ ಇದ್ದ ಸಮಾನ ಅಭಿರುಚಿ ಸಂಬಂಧದ ಕೊಂಡಿ, ಸಿಡಿಎನ್ ಕಾಲದಲ್ಲಿ ಕಳಚುವಂತಾಯ್ತು. ಸಿಡಿಎನ್ ಸಾಹಿತ್ಯ ಅಧ್ಯಯನದ ಪಠ್ಯಕ್ರಮವನ್ನು ನವೀಕರಿಸಿದ್ರು. ಕುವೆಂಪು, ಆ ಮೇಲೆ ತೀನಂಶ್ರೀ ಅವರು ಸಿಡಿಎನ್ ಕಾಲದಲ್ಲಿಯೆ ಕನ್ನಡ ಡಿರ್ಪಾಟ್‌ಮೆಂಟಿನ ಹೆಡ್‌ಗಳಾಗಿದ್ರು. ಅವರಿಬ್ಬರನ್ನೂ ದೊಡ್ಡವ್ರು ಅಂತ ವ್ಯಕ್ತಿಮಟ್ಟದಲ್ಲಿ ಸಿಡಿಎನ್. ಸಜ್ಜನಿಕೆ, ಗೌರವದಿಂದ ಕಾಣ್ತಿದ್ರು. ಸಾಹಿತ್ಯಕ್ಕೆ ಸಂಬಂಧಿಸಿದಂತೆ ಬೇರೆ ನೋಟ, ನಿಲವು ಅವರ್‍ದಾಗಿತ್ತು. ಕುವೆಂಪು, ಆಮೇಲೆ ತೀನಂ ಶ್ರೀ ಮಹಾರಾಜ ಕಾಲೇಜಿನ ಒಂದು ಕೊಠಡಿಯಲ್ಲಿ ಕನ್ನಡದ ನವೋದಯದ ರೀತಿಯ ಪಾಠ ಹೇಳ್ತಿದ್ರೆ ಸಿಡಿಎನ್ ಪಕ್ಕದ ಕೊಠಡಿಯಲ್ಲೇ ಇಂಗ್ಲಿಷ್ ಮಾಡರ್ನ್ ಲಿಟರೇಚರ್ ಪಾಠ ಹೇಳ್ತಿದ್ರು. ಎಂ ಜಿ ಕೆ, ಅನಂತಮೂರ್ತಿ, ಲಂಕೇಶ್ ಪೋಲಂಕಿ ರಾಮಮೂರ್ತಿ, ಬಿ ದಾಮೋದರ ರಾವ್, ರಾಜೀವ ತಾರಾನಾಥ ಇಂಥವ್ರೆಲ್ಲ ಇಂಗ್ಲಿಷ್ ಡಿಪಾರ್ಟಮೆಂಟಿನಲ್ಲಿ ತಯಾರಾಗ್ತಾ ಇದ್ರು. ಅವ್ರ ಸ್ನೇಹ, ಒಡನಾಟ ನನಗೆ, ಎಚ್ ಎಂ ಚನ್ನಯ್ಯನವರಿಗೆ ಉಂಟಾಗಿತ್ತು. ಹೊರಗಡೆಯಿಂದ ಅಡಿಗರು. ಕಾಫಿಹೌಸಿನಲ್ಲಿ ಕನ್ನಡದ ನವ್ಯಕಾವ್ಯ ಕುರಿತ ಚಿಂತನೆ ಚರ್ಚೆಗಳಲ್ಲಿ ನಾನು, ಚನ್ನಯ್ಯ ಭಾಗವಹಿಸ್ತಿದ್ದೆವು. ಅಡಿಗರ ನವ್ಯಕಾವ್ಯ, ಅನಂತಮೂರ್ತಿ ಕಥೆಗಳನ್ನು ಓದ್ತಾ ಇದ್ದೆವು. ರಾಮಚಂದ್ರ ಶರ್ಮರ ಕಾವ್ಯ ಓದ್ತಿದ್ದೆವು.

ಪ್ರೊ. ಜವರೇಗೌಡರು ಕನ್ನಡ ಡಿಪಾರ್ಟಮೆಂಟಿನ ಹೆಡ್ ಆಗುವ ಹೊತ್ತಿಗೇ ಇಂಥ ಹಿನ್ನೆಲೆಯೊಂದು ನಿರ್ಮಾಣವಾಗಿ ಬಿಟ್ಟಿತ್ತು. ಸಿಡಿಎನ್ ಮತ್ತು ಜವರೇಗೌಡ್ರು ಒಂದೇ ವಯೋಮಾನದವ್ರು ಬೇರೆ. ದೇಜಗೌ ಅವರ ಸಾಹಿತ್ಯಾಸಕ್ತಿ ಮಟ್ಟವೂ ಕಡಿಮೆ. ಸಿಡಿಎನ್ ಅವ್ರ ಮಟ್ಟದ ಜೊತೆ ಹೋಲಿಕೆಯ ಇರಲಿಲ್ಲ. ಇಬ್ರೂ ಬ್ರಾಹ್ಮಣೇತರರು. ಸಿಡಿಎನ್ ಚಿಕ್ಕ ವಯಸ್ಸಿನಲ್ಲಿಯೇ ಪ್ರೊಫೆಸರ್ ಆಗಿದ್ದರು. ಅವ್ರ ಅರ್ಹತೆ ಜೊತೆಗೆ ಆದ್ರೂ ಜಾತಿ ಅನುಕೂಲವೂ ಇತ್ತು. ಆದ್ರೆ ಅವರು ಮಾತ್ರ ಜಾತಿವಾದಿಯಾಗಿರಲಿಲ್ಲ. ಆದ್ದರಿಂದ ಸಿಡಿಎನ್ ಬೇಗನೆ ವೈಸ್ ಛಾನ್ಸ್‌ಲರ್

ಆಗಬಹುದಾಗಿದ್ದ ಚಾನ್ಸ್ ಇತ್ತು. ಆ ಸ್ಥಾನದ ಮೇಲೆ ದೇಜಗೌ ಕೂಡ ಕಣ್ಣಿಟ್ಟವ್ರಾಗಿದ್ರು. ಅದರಿಂದಾಗಿ ಒಂದು ಥರದ ರೈವಲ್ರಿ ಬೇರೆ ಬೆಳೆದಿತ್ತು. ಜೊತೆಗೆ ಅಡಿಗರು ಬೇರೆ 'ಕುವೆಂಪು ಕವಿಯೇ ಅಲ್ಲ; ರಾಮಾಯಾಣ ದರ್ಶನಂ ಗಾತ್ರದಲ್ಲಿ ಮಹಾಕಾವ್ಯವೇ ಹೊರತು ಸತ್ವದಲ್ಲಿ ಅಲ್ಲ' ಎಂದು ೧೯೫೫ಳರಲ್ಲಿ ನವ್ಯ ಕವಿ ರಾಮಚಂದ್ರ ಶರ್ಮರಿಗೆ ನೀಡಿದ ಸಂದರ್ಶನದಲ್ಲಿ ಗರ್ಜಿಸಿದ್ದರು. ಹಾಗಿರುವಾಗ ಕನ್ನಡ ವಿದ್ಯಾರ್ಥಿಗಳಾಗಿದ್ದ ನಾನು, ಎಚ್ ಎಂ ಚನ್ನಯ್ಯನವ್ರು ದೇಜಗೌ ಅವರಿಗೆ ಶತ್ರುಪಕ್ಷದವರ ಥರ ಕಂಡಿರಬೇಕು. ಹಾಗೇ ನಡೆಸಿಕೊಂಡ್ರು. ನನ್ನ ಮಟ್ಟಿಗೆ ಇನ್ನೂ ಹೆಚ್ಚಿನ ಅಸಹನೆ ತೋರ್ಸಿದ್ರು. ನಾನು ಅವ್ರ ಜಾತಿಯವನಾಗಿರ್ಲಿಲ್ಲ; ಮೈಸೂರು ಪ್ರದೇಶವನೂ ಆಗಿರ್ಲಿಲ್ಲ; ಎಲ್ಲಿಂದ್ಲೋ ಬಂದವನು. ಜೊತೆಗೆ ಡೊಗ್ಗು ಸಲಾಮು ಹಾಕೋದಕ್ಕೆ ಎಂದೂ ತಯಾರಿದ್ದವನಾಗಿರ್ಲಿಲ್ಲ. ಕುವೆಂಪು ಸಾಹಿತ್ಯದ ಬಗ್ಗೆ ವಿಮರ್ಶೆಯ ಮಾತುಗಳನ್ನು ಆಡುವುದಕ್ಕೆ ಬೇರೆ ನಾನು ಶುರುಮಾಡಿದ್ದೆ. ಕನ್ನಡ ಡಿಪಾರ್ಟಮೆಂಟಿನ ಒಳಗಿಂದ ಕುವೆಂಪು ಸಾಹಿತ್ಯದ ಕುರಿತಂತೆ ವಿಮರ್ಶಾತ್ಮಕ ದನಿ ಎದ್ದದ್ದು ನಾನು ತಿಳಿದಿರುವಂತೆ ಅದೇ ಮೊದಲು. ಹೀಗಿರುವಾಗ ನನ್ನ ವಿಮರ್ಶೆಯ ಕೆಲಸಕ್ಕೆ ಪ್ರೋತ್ಸಾಹಿಸುವುದೆಲ್ಲಿ ಬಂತು? ಜವರೇಗೌಡರ ಪ್ರಾಬಲ್ಯದಲ್ಲಿ ಕನ್ನಡ ವಿಭಾಗವು ಕುವೆಂಪು ಭಜನಾ ಮಂಡಳಿಯ ರೂಪ ಪಡಕೊಂಡು ಬಿಟ್ಟಿತ್ತು. ಶಿವರುದ್ರಪ್ಪ, ಪ್ರಭುಶಂಕರ್, ಇವರೆಲ್ಲ ಜಾತಿವಾದಿಗಳಾಗಿರಲಿಲ್ಲ. ವಿದ್ಯಾರ್ಥಿಗಳ ಬಗ್ಗೆ ಸಣ್ಣತನ ತೋರಿಸೋರಾಗಿರಲಿಲ್ಲ. ನಾವು ಯಾವುದೇ ರೀತಿಲೂ ಒಪ್ಪಬಹುದಾದ ಮೇಷ್ಟ್ರುಗಳು. ಅವರಲ್ಲಿ ಕುವೆಂಪು ಬಗ್ಗೆ ಆರಾಧನಾ ಭಾವ ಇತ್ತಲ್ಲ, ಹೀಗಾಗಿ ಜವರೇಗೌಡರು ಅಧಿಕಾರದ ಬಲದಿಂದ ಅವರನ್ನು ನ್ಯೂಟ್ರಲೈಜ್ ಮಾಡಿಬಿಟ್ರು. ಅವರಿಗೆ ಯಾವುದೇ ರೀತಿಯಲ್ಲಿ ಕುವೆಂಪು ಅವರ ಸಮರ್ಥನೆ ಮಾಡ್ತಾ ಇದ್ದಂತಹ ಸಂದರ್ಭದ ಒಂದು ಅಬದ್ಧ ಇತ್ತಲ್ಲ, ಅದನ್ನು ಸರಿಪಡಿಸೋಕೆ ಆಗಲೇ ಇಲ್ಲ.

ಸಂ: ಸಾಹಿತ್ಯ ವಿಮರ್ಶೆಯಲ್ಲಿ ನೀವು ತಳೆದ ನಿಲುವುಗಳಿಗೆ, ಈ ಕುವೆಂಪು ಆರಾಧನ ವಾತಾವರಣ ಏನಿತ್ತು, ಅದಕ್ಕೆ ಪ್ರತಿರೋಧ ಮಾಡಬೇಕು ಅನ್ನೋದು ಕಾರಣವಾಗಿರಬಹುದು. ಆದರೆ ಈ ಪ್ರತಿರೋಧವೆ ಕುವೆಂಪು ಸಾಹಿತ್ಯದ ಬಗ್ಗೆ ಮೌಲ್ಯಮಾಪನ ಮಾಡಲು ಒಂದು ನೆಗಟೀವ್ ಧೋರಣೆಯನ್ನು ಬೆಳೆಸಿಬಿಡ್ತಾ ಅಂತ?

ನಾಯಕ: ಅಲ್ಲಲ್ಲ, ನವ್ಯದಲ್ಲಿ ಪ್ರಾಯೋಗಿಕ ವಿಧಾನ ಬಂತಲ್ಲ, ಆಗ ಕೃತಿಯನ್ನು ಪದವನ್ನು ಸೂಕ್ಷ್ಮವಾಗಿ ಅದು ಸಾರ್ಥಕವಾಗಿದೆಯಾ ಅಂತಾ ನೋಡುವ ಒಂದು ಶಿಸ್ತು ಬಂತಲ್ಲ, ಆರೀತಿಯ ಪರಿಶೀಲನೆ ಮಾಡಿದಾಗ,ಕುವೆಂಪುದು ಹೇಳಿಕೆಯ ಕಾವ್ಯವಾಗಿ ನಮಗೆ ಕಂಡದ್ದು ಹೌದು. ನಾನು ಅಲ್ಲಿ ಕಾವ್ಯದ ಬಗೆಗಿರುವ ನವ್ಯದ ಅಧ್ಯಯನ ಶಿಸ್ತನ್ನು ಹೆಚ್ಚಾಗಿ ಬಳಸಿದ್ದೀನಿ. ಅವರ ಕಾದಂಬರಿಗಳ ಬಗ್ಗೆ ಇನ್ನೂ ಹೆಚ್ಚು ಮುಕ್ತವಾಗಿರಬಹುದಾಗಿತ್ತು ಎಂದು ಗೊತ್ತಾದದ್ದು ಆಮೇಲೆ. ಕುವೆಂಪು ಸಾಹಿತ್ಯದ

ಬಗ್ಗೆ ಅತಿ ಭಾವಾನಾತ್ಮಕವಾಗಿ ಹೋಗೋದಿದೆಯಲ್ಲ, ಅದು ನನಗೆ ಆಗಲಿಲ್ಲ. ನಾನು ಮೊದಲಿಂದಲೂ ಆದರ್ಶವಾದಿಯೇ. ಹಾಗೆಂದು ಅದನ್ನು ಭಾವುಕವಾಗಿ ನೋಡೋಕೆ ನಾನು ಸಿದ್ಧನಿಲ್ಲ. ಕುವೆಂಪುರವರ ಆದರ್ಶವಾದದ ದಾರಿ ದಿಕ್ಕು ಇದೆಯಲ್ಲ ಅದು ಅಂಥ ಅಟ್ರಾಕ್ಷನ್ ಮಾಡಿರಲಿಲ್ಲ ನನಗೆ. ಇನ್ನೊಂದು ಸಮಸ್ಯೆ ಎಲ್ಲಿ ಅಂದರೆ, ನಾನು ಮೊದಲು ಸಾಹಿತ್ಯದ ಬಗ್ಗೆ ಬರೀಲೇ ಇಲ್ಲ. ಹೆಚ್ಚು ವೇದಿಕೆಗಳಲ್ಲಿ ಸಾಹಿತ್ಯದ ಬಗ್ಗೆ ಭಾಷಣಗಳನ್ನೇ ಮಾಡ್ತಿದ್ದೆ. ವಿಮರ್ಶೆ ಬರಿಲೀಕ್ಕೆ ಶುರು ಮಾಡಿದ್ದು ಬಹಳ ಲೇಟಾಗಿ. ನನ್ನ ಮೊದಲ ಪುಸ್ತಕ 'ಸಮಕಾಲೀನ' ಬಂದಿದ್ದು ೩೮ನೇ ವಯಸ್ನಲ್ಲಿ.

ಸಂ: ನಿಜ ಸಾರ್, 'ಸಮಕಾಲೀನ' ಓದುವಾಗ ಅದು ನೀವು ನಿಮ್ಮ ಪ್ರಾಯದಲ್ಲಿ ಬರದಿದ್ದು ಅನಿಸೋದಿಲ್ಲ. ಯಾಕಿಷ್ಟು ಅತಿ ಎಚ್ಚರದಲ್ಲಿ ವಿಮರ್ಶೆ ಬರಿಯೋಕೆ ಶುರು ಮಾಡಿದಿರಿ?

ನಾಯಕ: ಮೊದಲಿನಿಂದಲೂ ನನ್ನ ವ್ಯಕ್ತಿತ್ವದಲ್ಲಿ ಕಾನ್‌ಶಿಯಸ್ ಎಲಿಮೆಂಟ್ ಇತ್ತು, ಈಗಲೂ ಆ ಎಲಿಮೆಂಟ್ ಇರಬಹುದು. ನಾನು ಉಡಾಫೆಯ ಧ್ವನಿಯನ್ನು ಕೊಡಲಿಕ್ಕೆ ತಯಾರಿರಲಿಲ್ಲ. ನನ್ನ ಮೊದಲ ಬರವಣಿಗೆಯಲ್ಲೂ ಎಳೆತನದ ನೆಲೆ ಕಾಣ್ಸೋಲ್ಲ, ಆ ಭಾಷೆಯ ಬಿಗಿ ಹೊಸತಾಗಿ ಬರದೋನ ತರಹ ಕಾಣ್ಸೋಲ್ಲ ಅಂತ ನಿಮಗೆ ಅನ್ನಿಸ್ರೋದು ಅದಕ್ಕೇ. ಇದು ಕಾದದ್ದರಿಂದ ಬಂದದ್ದು. ನನಗೆ ನನ್ನ ಬರವಣಿಗೆ ಜತೆ ಪೂರ್ಣಪ್ರಮಾಣದ ಸಂಬಂಧ ಇರಬೇಕು. ಸರಿಯಾದದ್ದು ಹೇಳಬೇಕು. ಬೇರೆಯವರು ಒಪ್ಪಲಿ ಬಿಡಲಿ, ನನಗೆ ಮೊದಲು ಕನ್‌ವಿನ್ಸ್ ಆಗಬೇಕು. ಯಾರನ್ನೋ ಪ್ಲೀಸ್ ಮಾಡೋದಿಕ್ಕೆ ಹೇಳಬೇಕಾದ್ದಿಲ್ಲ, ಇದು ಆಗ್ಲೂ ಇತ್ತು, ಈಗಲೂ ಇದೆ.

ಸಂ: ನಿಮಗೆ ಕೆಲವರು 'ಕನ್ನಡದ ಎಫ್ ಆರ್ ಲಿವೀಸ್' ಅಂತ ಕರಿದಿದಾರೆ. ಆಗೆಲ್ಲ ಏನನ್ನಿಸಿದೆ?

ನಾಯಕ: ಆಶ್ಚರ್ಯ ಏನು ಅಂದರೆ, ನನ್ನ ಇಂಗ್ಲೀಶಿನ ಓದು ಬಹಳ ಕಡಿಮೆ. ನಿಜವಾದ ಅರ್ಥದಲ್ಲಿ ಹೇಳಬೇಕು ಅಂದರೆ, ಲಿವೀಸನ್ನ ನಾನು ಸರಿಯಾಗಿ ಓದೇ ಇಲ್ಲ. ಓದಿದ್ದು ಪಾಠಮಾಡೊಕೆ ಬಂದಾಗೇನೆ. ಕನ್ನಡದಲ್ಲೆ ನವ್ಯ ಬೇಳೀತಾ ಇತ್ತಲ್ಲ, ಅದರ ಶ್ರದ್ಧಾವಂತ ವಿದ್ಯಾರ್ಥಿಯಾಗಿದ್ದೆ ನಾನು. ಸೃಜನಶೀಲ ಸಾಹಿತ್ಯ ಬರ್ತಾಯಿತ್ತು, ಕಾದಂಬರಿ ಸಣ್ಣಕತೆ ನಾಟಕ ಆಗಬಹುದು, ವಿಮರ್ಶೆ ಆಗಬಹುದು, ಬರ್ತಾಇತ್ತಲ್ಲ, ಅದನ್ನು ಶ್ರದ್ದೆಯಿಂದ ಅಧ್ಯಯನ ಮಾಡಕೊಂಡು, ಸ್ವಾಧೀನ ಪಡಿಸಿಕೊಳ್ಳೋಕೆ ಪ್ರಯತ್ನಿಸ್ತಿದ್ದೆ. ಇದರ ಫಲವಾಗಿ ನವ್ಯದ ಚಿಂತನೆಯಲ್ಲಿ ಕ್ರೋಢೀಕರಿಸಿಕೊಳ್ಳುವಾಗ ಲೀವೀಸ್ ಬಗೆಯ ಚಿಂತನೆ ಬಂದಿರಬಹುದು. ಆದರೆ ಪ್ರತ್ಯೇಕವಾಗಿ ಲೀವೀಸ್ ನನಗೆ ಪ್ರಭಾವ ಬೀರಿಲ್ಲ.

ಸಂ: ಸಾರ್, 'ಕರ್ವಾಲೊ'ಗೆ ನೀವು ಬರೆದ ಹಿನ್ನುಡಿ ಈಗಲೂ ಓದೋಕೆ ಕಷ್ಟವಾಗುತ್ತೆ.

ಅದೊಂದು ಜಟಿಲವಾದ ವಿಮರ್ಶೆಯ ಬರೆಹ ಅನಿಸುತ್ತೆ. ಈಗ ಅದನ್ನು ನೋಡು ವಾಗ ನಿಮಗೆ ಏನನಿಸುತ್ತೆ ?

ನಾಯಕ: ನನಗೆ ವಿಮರ್ಶೆಯಲ್ಲಿ ಸ್ಟೇಟ್ ಮೆಂಟ್ ಮಾಡೋದಕ್ಕಿಂತ ಹೆಚ್ಚಾಗಿ ಅಧ್ಯಯನದ ವಿಧಾನ ಇದೆ ಅಂತ್ಕೊಂಡಿದೀನಿ. ಎಲ್ಲಾ ಸೂಕ್ಷ್ಮಗಳಲ್ಲಿ ಪರಿವೆಗಳನ್ನು ಪದರಗಳನ್ನ ಹುಡುಕೋವಂಥ ಮನೋಧರ್ಮ ಅದು. ಅದು ಮೂಲತಃ ಪ್ರಾಯೋಗಿಕ ವಿಮರ್ಶೆಯ ಶಿಸ್ತಿನಿಂದ ಬಂದಿದ್ದಿರಬಹುದು. ಈಗಲೂ ನಾನು ಏನಾದರೂ ಹೇಳುವಾಗ, ಸಾಕಷ್ಟು ಎವಿಡೆನ್ಸ್ ಆಧಾರ ಸಿಗದ ಹೊರತು ಹೇಳಿಕೆ ಮಾಡೋಕೆ ಇಷ್ಟಪಡೋದಿಲ್ಲ. ಪುರುಷೋತ್ತಮ ಬಿಳಿಮಲೆ ನನ್ನ ವಿಮರ್ಶೆ 'ಯಕ್ಷಗಾನದ ತಾಳಮದ್ದಲೆಯಲ್ಲಿ ಅರ್ಥ ಹೇಳೋತರಹ ಕಾಣುತ್ತೆ' ಅಂತ ಬರೆದಿದ್ದರು. ಒಂದು ಮಟ್ಟಿಗೆ ಇದು ನಿಜಾನೂ ಇರಬಹುದು.

ಸಂ: ಆಧಾರ ಇಲ್ಲದೆ ಏನೂ ಹೇಳೋಲ್ಲ ಅನ್ನೋದು ವಿಮರ್ಶೆಯ ಶಿಸ್ತಾಗಿ ಸರಿ. ಆದರೆ ಇದು ವಿಮರ್ಶೆಯನ್ನ ಚಿಂತನೆಯನ್ನ ನ್ಯಾಯಾಲಯದ ಪರಿಭಾಷೆಗೆ ಒಯ್ಯುಬಹುದು ಅನಿಸುತ್ತೆ. ಕೆಲವು ಸಾಂಸ್ಕೃತಿಕ ಸಂದರ್ಭದಲ್ಲಿ ಒಂದು ಚರ್ಚೆ ಚಲನೆ ಹುಟ್ಟಿಸೋದಕ್ಕಾದರೂ ಸ್ಟೇಟ್ ಮೆಂಟುಗಳ ಅಗತ್ಯ ಇದೆಯಲ್ಲವಾ ?

ನಾಯಕ: ಅದಿದ್ದೇ ಇದೆ. ನಾವು ಸಾಮಾಜಿಕ ಕೆಲಸ ಮಾಡುವಾಗ ನಿಲುವು ತಳೆದೇ ತಳೀತಿವಿ ಆಗ ಸ್ಟೇಟ್‌ಮೆಂಟ್ ಬರುತ್ತೆ. ಇಲ್ಲ ಅಂತಲ್ಲ. ಆದರೆ ಅನುಭವಗಳನ್ನು ಅಭಿಪ್ರಾಯಗಳನ್ನು ನಾವು ದಾಖಲೆಯಾಗಿ ಇಡುವಾಗ ಹೆಚ್ಚಿನ ಹೊಣೆಗಾರಿಕೆ ಬರುತ್ತೆ. ಮಾತಾಡ್ತಾ ಇರುವಾಗ ನಾವು ಕಂಡದ್ದೇ ಇರ್ತದೆ, ಇಲ್ಲ ಅಂತಲ್ಲ. ಆದರೆ ಕಂಡದ್ದಕ್ಕೆ ಇನ್ನೂ ಒಂದು ಸರಿಯಾದ ಆಕಾರ ಬಂದಿರಲ್ಲ. ಅದು ಸಂಚಾರಿ ಆಗಿರ್ತದೆ. ಈಗ ಕಾವ್ಯ ಬರಿಯೋ ಹೊತ್ತಿಗೆ ಭಾಷೇಲಿ ಒಂದು ಆಕಾರ ಕೊಡೋ ಪ್ರಯತ್ನ ಇರುತ್ತೆ ಅಂತೀವಿ. ವಿಮರ್ಶೆಲೂ ಈ ಆಕಾರ ಕೊಡೋ ಕಲ್ಪನೆ ಯಾಕಿರಬಾರದು?

ಸಂ: ಹೇಳಿಕೆ ಮಾಡೋಕೆ ತೋರಿಸೋ ಹಿಂಜರಿಕೆ ಅತಿ ಎಚ್ಚರಗಳು, ವಿಮರ್ಶೆಯಲ್ಲಿ ಮಿತಿ ಉಂಟುಮಾಡ್ತವೆ ಅಂತನ್ನೋದು ನನ್ನ ಗುಮಾನಿ.

ನಾಯಕ: ಆಕ್ಚುವಲಿ ಅವನ್ನ ನಾನು ಹಿಂಜರಿಕೆ ಅನ್ನಲಾರೆ. ಸೆನ್ಸ್ ಆಫ್ ರೆಸ್ಪಾನ್ಸಿಬಿಲಿಟಿ ಅಂತೀನಿ. ನೀವು ವಿಮರ್ಶೆ ಯಾಕೆ ಬರೀತಾ ಇದೀರಿ? ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ನೀವು ಭಾಗವಹಿಸ್ತಿದೀರಿ ಅಂತ ತಾನೇ? ಸಂಸ್ಕೃತಿ ಕಟ್ಟುವ ಒಂದು ಕ್ರಿಯೆಯಲ್ಲಿ ಪಾಲ್ಗೊಳ್ತಿರುವಾಗ, ಸಾಂಸ್ಕೃತಿಕ ಹೊಣೆಗಾರಿಕೆ ಇದೆಯಲ್ಲ, ಅದಕ್ಕೆ ಏನು ಹೇಳಿದರೂ ಸಲ್ಲುತ್ತೆ ಅನ್ನೋ ತರಹ ಆಗಬಾರದು. ಅದಕ್ಕೇ ಪದಗಳನ್ನ ಭಾಷೇನ ಬಳಸುವಾಗ ನಾನು ಬಹಳ ಎಚ್ಚರವಾಗಿರ್ತೀನಿ. ನಾನು ಒಪ್ಪದೇ ಇರೋದಿಕ್ಕೆ 'ಮೂರ್ಖತನವಾದೀತು' ಅಂತ ಎಂದೂ ಹೇಳಲಾರೆ. ನಿಮ್ಮನ್ನು ನಾನು ಒಪ್ಪದೇ ಇದ್ದರೂ ಕೂಡ ಸಹಿಸೋ ಸಂಸ್ಕಾರ ಇರಬೇಕು. ಆದರೆ ನಾನು ಒಪ್ಪೋದಿಲ್ಲ

ಅಂತ ಹೇಳೋದಿಕ್ಕೆ ಹಿಂಜರೀಬಾರದು ಅಷ್ಟೇ.

ಸಂ: ಕೃತಿಗೆ ಗೌರವ ಸಲ್ಲಬೇಕು ನಿಜ, ಆದರೆ ಅದಕ್ಕೆ ಅತಿಯಾದ ನಿಷ್ಠೆ ಕೊಟ್ಟಿದ್ದರಿಂದ ನವ್ಯವಿಮರ್ಶೆ ಒಂದು ಬಗೆಯ ಸಾಹಿತ್ಯಕ್ಕೆ ಅಧೀನ ಚಟುವಟಿಕೆಯಾಗೇ ಉಳೀತು. ಬೇರೆಬೇರೆ ಜಗತ್ತುಗಳನ್ನು ಒಳಗೊಳ್ಳೋಕೆ ಆಗಲಿಲ್ಲ?

ನಾಯಕ: ಹೌದು, ಹಾಗೆ ನೋಡಿದರೆ, ಕುವೆಂಪುರವರಲ್ಲಿ ಒಂಥರ ಋಷಿಸಂಸ್ಕೃತಿಯ ಆದರ್ಶ ಸಂಕಲ್ಪ ಸೇರಿಕೊಂಡಿದ್ದರಿಂದ, ಲಿಟರರಿ ಆದದ್ದನ್ನೂ ಒಂದು ಬದುಕಿನ ದರ್ಶನಕ್ಕೆ ಅಧ್ಯಾತ್ಮ ನೆಲೆಗೆ ಅವರು ವಿಸ್ತರಿಸಿಕೊಂಡ್ರು. ಇಡೀ ಕೃತಿಗೆ ಒಂದು ಪ್ರಬಂಧ ಧ್ವನಿ ಇರೋ ಹಾಗೆ, ಒಬ್ಬ ಲೇಖಕನ ಇಡೀ ಬರವಣಿಗೆಯಲ್ಲೂ ಒಂದು ಪ್ರಬಂಧ ಧ್ವನಿ ಹುಟ್ಟಿಕೊಳ್ಳುತ್ತೆ. ಕುವೆಂಪು ಅಂಥವರಲ್ಲಿ ಇಡೀ ಕೃತಿಗಳಿಗೆ ಒಂದು ತಾತ್ವಿಕ ಚೌಕಟ್ಟು ಕಟ್ಟೋದು ಇದೆ, ಒಂದು ಪ್ರಬಂಧ ಧ್ವನಿಒಟ್ಟಾಗಿ ರೂಪಿಸೋದು ಇದೆ. ಅಡಿಗರಲ್ಲೂ ಇದಿದೆ. ಈ ತರಹದಲ್ಲಿ ಒಂದನ್ನ ಕಟ್ಟೋಕೆ ಹೋದವರ ಪ್ರೀ ಆಕ್ಯುಪೇಶನ್ ಇದೆಯಲ್ಲ, ಇಟೀಜ್ ನಾಟ್ ಮಿಯರ್ ಲಿಟರರಿ. ಒಟ್ಟು ಕಲ್ಚರ್‌ನ ಚೌಕಟ್ಟಿನಲ್ಲಿ ನಾನು ಇವರನ್ನ ಈಗ ನೋಡತೀನಿ.

ಸಂ: ಬೇಂದ್ರೆ?

ನಾಯಕ: ಬೇಂದ್ರೆ ಲಿಟರರೀನೆ. ಒಂದೊಂದು ಕವನ ನೋಡುವಾಗಲೂ ಬೇಂದ್ರೆಯವರು, ಕುವೆಂಪುರವರಿಗಿಂತ ಬಹಳ ಸಾರ್ಥಕ ಕವನಗಳನ್ನ ಕೊಟ್ಟಿದ್ದಾರೆ ಅಂತನ್ನಿಸುತ್ತೆ. ಆದರೆ ಅವರ ಇಡೀ ಕಾವ್ಯದಲ್ಲಿ ಪ್ರಬಂಧಧ್ವನಿ ಅಂತ ನೋಡುವಾಗ, ಬೇಂದ್ರೆ ಎಮಾರ್ಫಸ್ ಆಗಿ ಚಂಚಲವಾಗಿ ಕಾಣ್ತಾರೆ. ಹಿಡಿತಕ್ಕೆ ಸಿಗೋದಿಲ್ಲ. ಹಿಡಿತಕ್ಕೆ ಸಿಗದೇ ಇರೋದು ಕಳಪೆಯಾ ಅಲ್ಲವಾ, ಈ ಚರ್ಚೆ ಬೇರೆ ಮಾಡೋಣ. ಆಧುನಿಕ ಕನ್ನಡದ ಸಾಹಿತ್ಯದ ಸಂದರ್ಭವನ್ನು ಒಟ್ಟಾಗಿ ನೋಡಿದಾಗ, ಬಿಎಂಶ್ರೀ 'ಲಿಟರರಿ' ಅನ್ನೋ ನೆಲೆಯಿಂದ ಬಂದೋರು. ಕೆಎಸ್ ನರಸಿಂಹಸ್ವಾಮಿ, ಯಶವಂತ ಚಿತ್ತಾಲ, ಎಕ್ಕುಂಡಿ, ಕಣವಿ ಕೂಡ ಬರೇ ಲಿಟರರಿ. ಅವರ ಪ್ರತಿಭೆ ಕಡಿಮೆ ಅಂತಲ್ಲ. ಆದರೆ ಕಲ್ಚರಲಿ ಬಹಳ ದೊಡ್ಡ ಮಾತುಗಳನ್ನು ಅವರ ಬಗ್ಗೆ ಹೇಳೋಕೆ ಆಗೋಲ್ಲ. ಇವರೆಲ್ಲ ಟ್ಯಾಲೆಂಟೆಡ್, ಆದರೆ ಕಲ್ಚರಲಿ ಸಂಕೀರ್ಣ ನೆಲೆಗಳಲ್ಲಿ ನಮ್ಮ ಮನಸ್ಸುಗಳನ್ನ ತೊಡಗಿಸಿಕೊಳ್ಳಬಹುದಾದಷ್ಟು ಶಕ್ತರಲ್ಲ.

ಸಂ: ಸಾಹಿತ್ಯಕ ಪ್ರತಿಭೆ ಮತ್ತು ಸಾಂಸ್ಕೃತಿಕ ಮಹತ್ವದ ನಡುವಿನ ಸಂಬಂಧಗಳನ್ನು ಹೇಗೆ ರಿಲೇಟ್ ಮಾಡಬೇಕು ಅಂತ ಹೇಳತಿದೀರಿ?

ನಾಯಕ: ಸಾಹಿತ್ಯ ವಿಮರ್ಶೆಯ ಮೊದಲ ಪ್ರಶ್ನೆ ಏನು? ಅಭಿವ್ಯಕ್ತಿ ಹೇಗಾಗಿದೆ ಅನ್ನೋದು. ಅಭಿವ್ಯಕ್ತಿ ಅನುಭವದಷ್ಟೇ ಗಂಭೀರ. ಭಾಷೆಯ ಬಳಕೆಗೆ ಸಂಬಂಧಿಸಿದಂತೆ ನವೋದಯದವರು ಮತ್ತು ಪ್ರಗತಿಶೀಲರು ಹೆಚ್ಚು ಮಹತ್ವ ಕೊಡಲಿಲ್ಲ. ಸಾಹಿತ್ಯ ಅನ್ನೋದು ಒಂದು ಕಲೆ. ಅದು ಭಾಷೆಯಲ್ಲಿ ಕಲೆಯಾಗಿ ಅಭಿವ್ಯಕ್ತಿ ಪಡೆಯೋದು ಬಹಳ

ಮುಖ್ಯ. ಕುವೆಂಪು ಕಾವ್ಯ ಹೇಳಿಕೆಯಾಗುತ್ತೆ ಅಂತ ಅಂದಿದ್ದು ಇದಕ್ಕೇ. ಕುವೆಂಪು ವಿಷಯ ಬಂದಾಗ ಆಶಯಕ್ಕಿಂತ ಅನುಭವಕ್ಕಿಂತ ಕ್ರಾಫ್ಟ್‌ಮನ್‌ಶಿಪ್ ಇದೆಯಲ್ಲ, ಅದರ ಮೇಲೆ ನವ್ಯ ವಿಮರ್ಶೆಯ ಲಕ್ಷ್ಯ ಹೆಚ್ಚು ಹೋದಹಾಗೆ ಕಾಣಿಸುತ್ತೆ. ಎಂಜ಼ ವಿಮರ್ಶೆಯಲ್ಲಿ ಇದಾಗಿದೆ. ನನ್ನದರಲ್ಲೂ ಎಷ್ಟೋಕಡೆ ಪ್ರಾಯೋಗಿಕ ವಿಮರ್ಶೆಗಳಲ್ಲಿ ಇದಿದೆ. ಈ ಟ್ರೆಡಿಶನ್ ಸ್ವಲ್ಪಕಾಲ ಬಂತು. ಇದನ್ನು ನಾನು ಈಗಲೂ ಬೇಕು ಅನ್ನೋನೇ. ಕೃತಿಯನ್ನು ನೀವು ಅಧ್ಯಯನ ಮಾಡುವಾಗ ಅಂದಾಜಿನ ಮೇಲೆ ತೀರ್ಮಾನ ಮಾಡಿಕೊಂಡು ಹೋಗಕಾಗಲ್ಲ. ಅದರಿಂದ ಏನನ್ನು ಪಡೆಬಹುದೋ ಅದನ್ನು ಪಡಕೊಂಡು ನಿಮ್ಮ ಕಲ್ಚರಲ್ ಅನಾಲಿಸಿಸ್‌ಗೆ ರಿಲೇಟ್ ಮಾಡಿ ಅಂತೀನಿ. ಕೃತಿಯನ್ನ ಪಡೆದುಕೊಳ್ಳದೇನೆ ಅದನ್ನು ನೆವ ಮಾಡಿಕೊಂಡು ಹೇಳಿಕೆ ಕೊಡೋಕೆ ಶುರುಮಾಡಿದರೆ, ಅದನ್ನು ಎಷ್ಟರ ಮಟ್ಟಿಗೆ ನಂಬೋದು ಅಂತ ಕೇಳ್ತೀನಿ.

ಸಂ: ಕೃತೀನ ಗಂಭೀರವಾಗಿ ಸೂಕ್ಷ್ಮವಾಗಿ ಪರಿಗಣಿಸದೆ, ಅದನ್ನ ನೆಪ ಮಾಡ್ಕೊಳ್ಳೋ ವಿಮರ್ಶೆ ಹೊಣೆಗೇಡಿ ಅಂತನ್ನೋದು ಸರಿ. ಪ್ರಶ್ನೆ ಇರೋದು ನಮ್ಮ ಸಮಾಜದ ಅನೇಕ ರಚನೆಗಳಲ್ಲಿ ಸಾಹಿತ್ಯ ಕೃತಿಯನ್ನೂ ಒಂದು ಅಂಶ ಅಂತ ಪರಿಗಣಿಸಿರೋ ಸಂಸ್ಕೃತಿ ವಿಮರ್ಶೆಯ ವಿಧಾನದ್ದು. ಕೃತಿಗೆ ಕಲಾತ್ಮಕತೆಗೆ ಬಹಳ ಮಹತ್ವ ಕೊಡುವ ನೀವು, ವಿಮರ್ಶೆಯ ಈ ಬದಲಾವಣೆಯನ್ನ ಹೇಗೆ ಗ್ರಹಿಸ್ತೀರಿ?

ನಾಯಕ: ಈಗ ನಾನೋ ನೀವೋ ಒಂದು ಕೃತೀನ ವಿಮರ್ಶೆ ಮಾಡುವಾಗ, ಆ ಕೃತಿಗೆ ಸಲ್ಲಬೇಕಾದ ನ್ಯಾಯಾ ಇದೆಯಲ್ಲ, ಅದನ್ನ ಸಲ್ಲಿಸೋಕೆ ತಯಾರಾಗಿರ್ತೀವಿ. ಕೃತಿಯನ್ನ ಪಡಕೊಳ್ಳೋಕೆ ನಮ್ಮನ್ನ ಅದಕ್ಕೆ ಸಂಪೂರ್ಣವಾಗಿ ಒಪ್ಪಿಸಿಕೊಳ್ತೀವಿ, ಹೌದಾ? ಅದರರ್ಥ ಓದ್ತಾ ಇರುವಾಗ ಎಲ್ಲ ಹಂತಗಳಲ್ಲೂ ಪೂರ್ತ ಒಪ್ಪಿಗೆ ಕೊಡ್ತೀವಿ ಅಂತಲ್ಲ. ಆದರೆ ಇಲ್ಲೇನೊ ಪಡಕೊಳ್ಳೊದಿದೆ ಅಂತನ್ನೋ ವಿನಯ ತೋರಸ್ತೀವಿ. ಇಡೀ ಕೃತಿ ಮುಗಿಯೋವರೆಗೆ ತಾಳ್ಮೆ ತೋರುಸ್ತೀವಿ. ಕೃತಿಗೆ ಸಲ್ಲಬೇಕಾದ ನ್ಯಾಯ ಕೊಡೋದಿಕ್ಕೇ ತಯಾರಿಲ್ಲ ಅಂದರೆ ನೀವು ಓದಲೇ ಬೇಕಾಗಿಲ್ಲ. ಕೃತೀನ ಪಡೆದ ಮೇಲೆ ನಾವು ಏನು ಮಾಡ್ತೀವಿ ಅಂದರೆ, ಈ ಅನುಭವ ಪಡೆದ ವಿಧಾನ ಅದರ ವಿನ್ಯಾಸ ಹಿಡಿಯೋಕೆ ನೋಡ್ತೀವಿ. ಇದು ಒಂದರ್ಥದಲ್ಲಿ ಅಭಿವ್ಯಕ್ತಿಯ ಕಲಾತ್ಮಕ ಕಲ್ಪನೆ ಅಂತೀವಲ್ಲ, ಅದರ ಸೆನ್ಸಿಬಲಿಟಿಯ ರೇಂಜ್ ನದು. ಇದು ಒಂದನೇ ಹಂತ. ಹಿಂದೆಲ್ಲ ಕುವೆಂಪು ಕವಿತೆ ಬಗ್ಗೆ ಪ್ರಾಯೋಗಿಕ ವಿಮರ್ಶೆ ಮಾಡಿದಾಗ ಇಲ್ಲಿಗೇ ನಿಂತುಬಿಟ್ಟೆ. ಬೇಂದ್ರೆ ಬಗ್ಗೆ ಅಡಿಗರ ಬಗ್ಗೆ ವಿಮರ್ಶೆ ಮಾಡಿದಾಗ ಇಲ್ಲಿಗೇ ನಿಂತ್ಬಿ.

ಆಮೇಲೆ ನನಗೆ ಅನಿಸಿದ್ದು ಏನಂದ್ರೆ, ಸಾಹಿತ್ಯ ಸಂಸ್ಕೃತಿಯ ಫಲ ಅಂತ ಹೇಳ್ತೀವಿ. ಹಾಗೆ ಹೇಳಿದಾಗ ಸಂಸ್ಕೃತಿ ಸಂದರ್ಭದ ತಿಳಿವೂ ಸೇರುತ್ತೆ. ನನಗೂ ಲೋಕಾನುಭವ

ಇದೆಯಲ್ಲ, ಕೃತಿ ಓದುವಾಗ ಮಾಡುವಾಗ ಹೇಗೆ ಒಪ್ಪಿಸ್ಕೋಳ್ತೀನೋ ಹಾಗೆ, ಅದರಿಂದ ದೂರನಿಂತು ಆಮೇಲೆ ಅದನ್ನು ಮೌಲ್ಯಮಾಪನ ಮಾಡತೀನಿ. ನನ್ನ ಬದುಕಿನ ಅನುಭವಗಳು ಲೋಕಾನುಭವಗಳ ಜತೆ ಮತ್ತು ಸಾಂಸ್ಕೃತಿಕ ಸಂದರ್ಭದ ಜತೆ ರಿಲೇಟ್ ಮಾಡ್ಕೊತೀನಿ. ಆಗ ಕೃತಿಯ ಮೌಲ್ಯಮಾಪನದ ಜೊತೆಯಲ್ಲೇ ಕೃತಿಕಾರನ ತಿಳಿವು, ಅದರ ಅರ್ಥವಂತಿಕೆ ಏನು ಅಂತ ಕೇಳ್ತೀನಿ. ಇದನ್ನೇ ನಾನು ಕಲ್ಚರಲ್ ಕ್ರಿಟಿಸಿಜಂ ಅಂತ ತಿಳ್ಕೊಂಡಿದೀನಿ.

ಸಂ: ಈ ತಿಳುವಳಿಕೆಗೆ ಬಂದ ಮೇಲೆ, ಕುವೆಂಪು ಅವರನ್ನ, ಹಿಂದಿಗಿಂತ ಭಿನ್ನವಾಗಿ ಪರಿಶೀಲಿಸಬೇಕು ಅಂತ ಅನಿಸ್ತಿದೆಯಾ?

ನಾಯಕ: ಖಂಡಿತಾ. ಬಹುಶ: ಇವತ್ತಿಗೂ ಕನ್ನಡದಲ್ಲಿ ನಾವು ಇಡಿಯಾಗಿ ಒಪ್ಪಬಹುದಾದಂಥ ಸಾಹಿತ್ಯಕ ವ್ಯಕ್ತಿತ್ವಾನೇ ಬೆಳೆದಿಲ್ಲವೇನೋ ಅಂತನ್ನೂ ಒಂದು ಪ್ರಶ್ನೆ ನನಗೆ ಕಾಡತಿದೆ. ಕುವೆಂಪು ಬಗ್ಗೆ ಮಾತ್ರವಲ್ಲ, ಕಾರಂತರ ಬಗ್ಗೆನೂ, ಬೇಂದ್ರೆ ಮಾಸ್ತಿ ಅಡಿಗರ ಬಗ್ಗೆನೂ ಹಾಗೇನೆ. ಇದು ನಮ್ಮ ಕಲ್ಚರಲ್ ಪ್ರಾಬ್ಲಮ್ಮೆ ಇರಬಹುದು ಅಂತ ಅನುಮಾನ ಕೂಡ ಇದೆ. ಇಡಿಯಾಗಿ ಅಗದೇ ಇರುವಂಥ ಈ ಗುಣ, ಬರೀ ವ್ಯಕ್ತಿತ್ವಕ್ಕೆ ಅಥವಾ ಪ್ರತಿಭೆಗೆ ಸಂಬಂಧಿಸಿದ್ದಲ್ಲ. ಯಾಕಂದರೆ ನಮ್ಮ ಈ ಲೇಖಕರೆಲ್ಲ ಕಡಿಮೆ ಪ್ರತಿಭಾವಂತರೇನೂ ಅಲ್ಲ. ಆದರೆ ಇಡಿಯಾಗಿ ಅವರ ಜೊತೆಯಲ್ಲಿ ಒಪ್ಪಿಗೆ ಕೊಡದೆ ಇರುವಂಥ ಸನ್ನಿವೇಶ ಇದೆ. ನೋಡಿ ಇದು ಒಟ್ಟು ನಮ್ಮ ಸಾಂಸ್ಕೃತಿಕ ಸಂದರ್ಭದ ಸಮಸ್ಯೇನೂ ಇರಬಹುದು. ಅದನ್ನು ಇನ್ನೂ ಶೋಧಿಸ ಬೇಕು ನಾವು.

ಸಂ: ಇಡಿಯಾಗಿ ಒಪ್ಪೋದು ಅಂದರೆ ಏನು?

ನಾಯಕ: ಅಂದ್ರೆ ಲೇಖಕನ ಒಟ್ಟು ಬರವಣಿಗೆ, ಚಿಂತನೆ ಇವನ್ನೆಲ್ಲ, ನಾವು ಒಂದು ಹಂತ ದವರೆಗೆ ಒಪ್ತೀವಿ. ಅವರ ಪ್ರತಿಭೆಯನ್ನು ಗುರುತಿಸ್ತೀವಿ. ಆದರೆ ನಮ್ಮ ಪೂರ್ತ ವ್ಯಕ್ತಿತ್ವಕ್ಕೆ ನಮ್ಮ ಸಾಂಸ್ಕೃತಿಕ ಹಿನ್ನೆಲೆಗೆ ಇವರೇ ಗಟ್ಟಿಯಾದ ನೆಲೆಗಳನ್ನು ಕೊಡುವಂಥೋರು ಅಂತ ಯಾರೇ ಒಬ್ಬ ಸಾಹಿತಿಯ ಬಗ್ಗೆ ಅನಿಸೋದಿಲ್ಲ. ಒಂದು ಕವನಕ್ಕೆ, ಕೃತಿಗೆ ಪ್ರಬಂಧ ಧ್ವನಿ ಅಂತ ಇರುತ್ತೇ ಅಂತೇವಲ್ಲಾ, ಹಾಗೇ ಒಬ್ಬ ಕೃತಿಕಾರನ ಎಲ್ಲ ಕೃತಿಗಳ ಮೊತ್ತಕ್ಕೂ ಪ್ರಬಂಧ ಧ್ವನಿ ಇರುತ್ತೆ. ಮತ್ತೆ ಆಯಾ ಕಾಲಮಾನದ ಮಹತ್ವದ ಕೃತಿಕಾರರೆಲ್ಲರ ಒಟ್ಟುಗೂಡಿದ ಬರವಣಿಗೆಯ ಮೊತ್ತಕ್ಕೂ ಪ್ರಬಂಧ ಧ್ವನಿ ಇರುತ್ತೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಹೀಗೇ ಬಿಡಿಬಿಡಿಯಾಗಿ ಆಯಾ ಸಾಹಿತ್ಯ ಮಾರ್ಗದ್ದೆಂಬ ಪ್ರಬಂಧ ಧ್ವನಿಗೆ ಸಂವೇದಿಸದೆ ಇದ್ರೆ ಅವುಗಳ ವ್ಯತ್ಯಾಸವೇ ಗೊತ್ತಾಗೋಲ್ಲ. ಈ ಬಿಡಿ ಬಿಡಿಗಳೂ ಸಂಯೋಗಗೊಂಡು ಇಡಿಯಾಗುವ ನೆಲೆಯ ಪ್ರಬಂಧ ಧ್ವನಿಯೂ ಇರುತ್ತೆ. ಅದಕ್ಕೂ ಸಂವೇದಿಸುವ ಸೃಜನಶೀಲದೂರದ ಮನಃಸ್ಥಿತಿ ಸಂಸ್ಕೃತಿ ವಿಮ

ರ್ಶೆಗೆ ಅಗತ್ಯ. ಅಲ್ಲಿಯೂ ಒಬ್ಜೆಕ್ಟಿವಿಟಿ ವಿಮರ್ಶಕನಿಗೆ ಸಂಪೂರ್ಣವಾಗಿ ಸಾಧ್ಯವಾಗುತ್ತೆ ಎಂದೇನಿಲ್ಲ. ಅವನವನ ಅನುಭವದ ಮಿತಿ, ವಿದ್ವತ್ತು ಅಥವಾ ವ್ಯುತ್ಪತ್ತಿ ಅಂತಾರಲ್ಲಾ ಅದರ ಮಿತಿ, ಸಂವೇದನಾ ಸೂಕ್ಷ್ಮದ ಮಿತಿ, ಮೇರೆ ಎಲ್ಲಾ ಇದ್ದೇ ಇರ್ತದೆ. ಆ ಮಿತಿ ಮೇರೆಗಳ ಜೊತೆಗೇ ವಿಮರ್ಶಕನ ಸ್ವೋಪಜ್ಞತೆ ಅಂತೇವಲ್ಲಾ ಅದರ ಸ್ಪರ್ಶಾನೂ ಇದ್ದೇ ಇರ್ತದೆ.

ಸಂ: ಯಾವುದಾದರೂ ಚಾರಿತ್ರಿಕ ಸಂದರ್ಭದಲ್ಲಿ ನೀವು ಹೇಳುವಂಥ 'ಪರಿಪೂರ್ಣ' ಲೇಖಕರು ಇರೋಕೆ ಸಾಧ್ಯ ಅನಿಸ್ತಿದೆಯಾ?

ನಾಯಕ: 'ಪರಿಪೂರ್ಣ ದೃಷ್ಟಿ' ಇರೋಲ್ಲ ಅನ್ನೋದು ಸೈದ್ಧಾಂತಿಕವಾಗಿ ಸರಿ. ಅದಕ್ಕೇ ಮಿತಿ, ಮೇರೆಯ ಮಾತು ಹೇಳಿದ್ದು. ಆದ್ದರಿಂದಲೇ ವಿಮರ್ಶೆಯಲ್ಲಿ ವಿನಯದ ಪರಿಕಲ್ಪನೆ ಹೇಳೋದು. ಆದರೆ ನಮ್ಮ ಕಲ್ಚರಲ್ ಕಾಂಟೆಕ್ಸ್ಟ್ ಇದೆಯಲ್ಲ, ಅಲ್ಲಿ ಸಮಸ್ಯೆಗಳಿವೆ. ಕುವೆಂಪು ತಮ್ಮ ಕಾಲದಲ್ಲಿ ಎಷ್ಟೇ ಪ್ರೊಗ್ರೆಸೀವ್ ರ್‍ಯಾಶನಲಿಸ್ಟ್ ಆದ ಬ್ರಾಹ್ಮಣೇತರ ಚಿಂತನೆಯನ್ನು ಹುಟ್ಟು ಹಾಕಿರಲಿ, ಅವರಲ್ಲಿ ಬ್ರಾಹ್ಮಣೇತರ ಆಗಿರೋ ಕಾರಣದಿಂದಲೇ, ನಮ್ಮ ಸಾಂಸ್ಕೃತಿಕ ಸಂದರ್ಭದಲ್ಲಿ ಸಮಗ್ರಕ್ಕೆ ಸ್ಪಂದಿಸುವ ಸಂವೇದನೆಯ ಕೊರತೆ ಇದ್ದೇ ಇದೆ, ಅರ್ಥವಾಯತಾ? ಬ್ರಾಹ್ಮಣರಾದವರಿಗೆ ಈ ಸಾಂಸ್ಕೃತಿಕ ಸಂದರ್ಭಕ್ಕೆ ಸ್ಪಂದಿಸುವ ಹೊತ್ತಿಗೆ ಒಂದು ಸೂಕ್ಷ್ಮ ಕೊರತೆ ಇದೆಯಲ್ಲ, ಅಂಥ ಕೊರತೆ ಬೇರೆ ತರಹದಲ್ಲಿ ಶೂದ್ರನಿಗೂ ಇರುತ್ತೆ. ಅದರಿಂದ ನಮಗಿರೋವಂಥದ್ದು ಒಬ್ಬ ಲೇಖಕನ ಮೂಲಕ ಎಲ್ಲ ಪಡೀತೇವೆ ಅನ್ನುವಂಥ ಭ್ರಮೆ ಅಲ್ಲ. ಒಬ್ಬ ಕೃತಿಗಳಿಗೂ ಒಂದು ಪ್ರತಿಭಾವಂತನ ಒಂದು ಕೃತಿಗೆ ಇದ್ದ ಹಾಗೆ, ಒಬ್ಬ ಕೃತಿಕಾರನ ಒಟ್ಟು ಕೃತಿಗಳಿಗೂ ಒಂದು ಪ್ರಬಂಧ ಧ್ವನಿ ಇರುತ್ತೆ. ಆ ಧ್ವನಿ ಮೂಲಕ ನಾವು ಆ ಕಾಲಮಾನದ ಸಂವೇದನೆಯ ನೆಲೆಗಳನ್ನ ಗುರುತಿಸಿಕೊಳ್ಳೋದಿಕ್ಕೆ ಯತ್ನಿಸಿದಾಗ, ಇವರು ಪರಿಪೂರ್ಣ ಅಲ್ಲ ಅನಸೋಕೆ ಶುರುವಾಗುತ್ತೆ. ಪರಿಪೂರ್ಣ ಅಲ್ಲ ಅಂತ ಹೇಳಿದ್ದು ಈ ಅರ್ಥದಲ್ಲಿ.

ಸಂ: ಈ ಅಪರಿಪೂರ್ಣತೆಯ ಒಳಗೇನೆ ಕುವೆಂಪು ಅವರನ್ನ ಈಗ ಹ್ಯಾಗೆ ನೋಡಬಹುದು?

ನಾಯಕ: ಸ್ವಾತಂತ್ರ್ಯ ಚಳುವಳಿಯ ಆ ಕಾಲದಲ್ಲಿ, ಮೂರನೇದೊಂದನ್ನ ಪಡೀಬೇಕು ಅನ್ನೋ ಉತ್ಕಟ ಆಕಾಂಕ್ಷೆ ಇತ್ತು. ಕುವೆಂಪು ಬಿಟ್ಟರೆ ಆಗೆಲ್ಲ ರೈಟರು ಬ್ರಾಹ್ಮಣರು ತಾನೇ? ಭಾರತೀಯ ಸಂಸ್ಕೃತಿಯನ್ನು ವೈಭವೀಕರಿಸುವುದು ಒಂದು ಚಾರಿತ್ರಿಕ ಅಗತ್ಯವಾಗಿದ್ದ ಈ ರಾಜಕೀಯ ಸಂದರ್ಭದಲ್ಲಿ, ಕುವೆಂಪು ಸೆಕ್ಯೂಲರ್ ಆಗಿರುವ ನೆಲೆಗಳನ್ನು ಹುಡುಕಲಿಕ್ಕೆ ಪ್ರಯತ್ನ ಪಟ್ಟರು. ಅವರಿಗೆ ಆಚಾರ ವಿಚಾರ ಭಾಗ ಒಟ್ಟಾಗೀನೇ ವೈಭವೀಕರಿಸುವುದರ ಬಗ್ಗೆ ಮುಜುಗರ ಇತ್ತು. ಆದರೆ ಅದನ್ನು ಮೂಲಭೂತವಾಗಿ ಪುನಾರಚಿಸೋದಕ್ಕೆ ಒಪ್ಪಲಿಲ್ಲ. ಕುವೆಂಪು ಆಚಾರ ಭಾಗದ ವಿಷಯದಲ್ಲಿ ಎಚ್ಚರ

ಆದರು. ಅದನ್ನು ಪ್ರಶ್ನಿಸಿದರು. ವಿಚಾರ ಭಾಗವನ್ನು ಅಧ್ಯಾತ್ಮಕ್ಕೆ ಸೋಸಿಕೊಂಡರು.ಅವರ ಮೇಲೆ ಪ್ರಭಾವ ಬೀರಿದ ಸ್ವಾಮಿ ವಿವೇಕಾನಂದ ಒಬ್ಬ ಬ್ರಾಹ್ಮಣೇತರ ಸನ್ಯಾಸಿ ಅನ್ನೋದು ಭಾಳ ಮುಖ್ಯ.

ಸಂ: ಅವರು ಗೌರವಿಸುತ್ತಿದ್ದ ರಾಮಕೃಷ್ಣ ಪರಮಹಂಸರೂ ಬ್ರಾಹ್ಮಣರು.

ನಾಯಕ: ಆದರೆ ರಾಮಕೃಷ್ಣ ಅಧ್ಯಾತ್ಮಿಕಕ್ಕೆ ಮಾತ್ರ ಗುರುವಾಗಿದ್ದರು. ಸೋಶಿಯಲ್ ರಿಫಾರ್ಮಿಸ್ಟ್ ಥಿಂಕಿಂಗಿಗೆ ಅಲ್ಲ. ಕುವೆಂಪು ಭಾರತೀಯ ಸಂಸ್ಕೃತಿ ಅನ್ನೋದರ ಆಚಾರ ಭಾಗದಿಂದ ಅಧ್ಯಾತ್ಮಾನ ಬಿಡುಗಡೆ ಮಾಡಿಕೊಂಡರು. ಅಧ್ಯಾತ್ಮವನ್ನ ಸಾರ್ವತ್ರೀಕರಿಸುವುದು, ಮತಧರ್ಮದ ಚೌಕಟ್ಟಿನಲ್ಲಿದ್ದ ಅಧ್ಯಾತ್ಮದ ಪರಿಕಲ್ಪನೆಯನ್ನು ಸೆಕ್ಯುಲರ್ ನೆಲೆಗೆ ವೈಜ್ಞಾನಿಕ ನೆಲೆಗೆ ತರುವುದು ಮಾಡಿದರು.ಅಧ್ಯಾತ್ಮಾನ ಸಾರ್ವತ್ರೀ ಕರಿಸುವುದು ಅಂದರೆ, ಅದನ್ನು ಡೆಮಾಕ್ರಟೈಜ್ ಮಾಡುವುದು. ಕುವೆಂಪು ಮಾಡಿದ ರೀತಿಲೇ ನಾನು ಅಧ್ಯಾತ್ಮ ಗ್ರಹಿಸದೆ ಇರಬಹುದು, ಆದರೆ ಕುವೆಂಪು ದೃಷ್ಟಿ ಅದನ್ನು ಒಬ್ಬ ಶೂದ್ರನಿಗೂ ಓಪನ್ ಮಾಡುತ್ತಲ್ಲ, ಅದು ಮುಖ್ಯ. ಹೀಗೆ ಕುವೆಂಪು ಒಂದು ಹಾದಿಯನ್ನು ತೆರೆದ ಹಾಗೆ ಕಾಣಿಸುತ್ತೆ. ಆದರೆ ಅವರು ಅನ್ನಮಯ ಪ್ರಾಣಮಯ ಅಂತ ಹೇಳ್ತಾ ಇರೋ ಪರಿಭಾಷೆ ಯಾವುದು? ಅದು ಆ ಧರ್ಮದ್ದೆ. ಅದರಿಂದ ಪೂರ್ತಿಯಾಗಿ ಬಿಡಿಸಿಕೊಳ್ಳೊಕೆ ಆಗಲಿಲ್ಲ ಅವರಿಗೆ. ಆ ಪರಿಭಾಷೆಯನ್ನು ಬಳಸಿಕೊಂಡು ಸೆಕ್ಯೂಲರ್ ಆಗಿರುವಂಥದಕ್ಕೆ ವಿಸ್ತರಿಸಿಕೊಂಡಾಗಲೂ ಕೂಡ, ಆ ಮತಧರ್ಮ ನಿರಪೇಕ್ಷೆತೆಯ ನೆಲೆ ಇದೆಯಲ್ಲ, ಅದಕ್ಕೆ ಈ ಸ್ಪರ್ಶ ಇದ್ದೇ ಇತ್ತು. ಅದರಲ್ಲಿ ಪುರ್ನಜನ್ಮದ ನಂಬಿಕೆಗಳೆಲ್ಲ ಇವೆ. ಆದರೂ ಆ ಚಾರಿತ್ರಿಕ ಸಂದರ್ಭದಲ್ಲಿ ಇದೊಂದು ಬಿಡುಗಡೆ ಆಯಿತು. ಬಿಡುಗಡೆಗೆ ತೆರೆದ ಎರಡನೇ ನೆಲೆ ಬಹಳ ಮುಖ್ಯವಾದ ನೆಲೆ ಅಂದ್ರೆ ಪ್ರಕೃತಿ. ಪ್ರಕೃತಿ ಕೂಡ ಸೆಕ್ಯುಲರ್ ನೆಲೆಯದು. ನಮ್ಮ ನಮ್ಮ ಸಂಸ್ಕಾರ ಸಂವೇದನಾ ಸೂಕ್ಷ್ಮಕ್ಕೆ ಅನುಗುಣ ವಾಗಿ ಪಡಕೋಬಹುದಾದ್ದು. ಹೀಗಾಗಿ ಸ್ವಾತಂತ್ರ್ಯಾನಂತರ ಪ್ರಜಾಸತ್ತಾತ್ಮಕ ನೆಲೆಯಲ್ಲಿ ಬರೆಯೋಕೆ ಅವರಿಗೆ ದೊಡ್ಡ ಕಷ್ಟ ಆಗಲಿಲ್ಲ. ಆದರೆ ಬೇಂದ್ರೆಯಂಥ ವರಿಗೆ ಕಷ್ಟವಾಯಿತು.

ಸಂ: ನೀವು ನಮ್ಮ ದೊಡ್ಡ ಲೇಖಕರಾದ ಬೇಂದ್ರೆ ಕಾರಂತ ಮಾಸ್ತಿಯರ ಬಗ್ಗೆ ತುಂಬಾ ಕ್ರಿಟಿಕಲ್ಲಾಗಿ, ಅಂದ್ರೆ ಒಂಥರಾ ಕಠಿಣ ದನಿಯಲ್ಲಿ, ಈಚೆಗೆ ಮಾತಾಡ್ತಾ ಇದೀರಿ ಅಂತ ಅನಸ್ತಿದೆ. ಯಾಕೆ ಈ ನಿಲುವು?

ನಾಯಕ: ನನ್ನ ಹಿಂದಿನ ಬರಹಗಳನ್ನು ನೀವು ಸ್ವಲ್ಪ ಸರಿಯಾಗಿ ಗಮನಿಸಬೇಕು. ಅಡಿಗರ ಬಗ್ಗೆ ಪೂರ್ತ ಅಭಿಮಾನದಲ್ಲಿ ಬರೆದಿದ್ದಾಗಲೂ ೧೯೭೭ರಲ್ಲೇ 'ರಾಜಕೀಯ ಸಾಮಾಜಿಕ ವಸ್ತು ವಿಷಯ ಕುರಿತ ಹಾಗೆ ಅವರಲ್ಲಿ ಪ್ರತಿಗಾಮಿ ಧೋರಣೆ ಕಾಣ್ತದೆ' ಅಂತ ಬರೆದಿದೀನಿ. ಅಡಿಗರು 'ಸಮಗ್ರ ಗದ್ಯ'ದ ಮುನ್ನುಡಿಯಲ್ಲಿ ನನ್ನ ಹೆಸರು ಹೇಳದೇನೆ 'ನಾನು ಪ್ರತಿಗಾಮಿಯಲ್ಲ' ಅಂತ ಸಾಧಿಸಿದ್ದಾರೆ ನೋಡಿ, ಅದು ನನಗೇ

ಹೇಳಿರೋದು. ೧೯೭೦ರಲ್ಲಿ ಅನಂತಮೂರ್ತಿ ಕಥಾ ಸಾಹಿತ್ಯದ ಬಗ್ಗೆ ನಾನು ಬರೆದ ಲೇಖನ ನೋಡಿ. ಅಲ್ಲಿಯವರೆಗೆ ಅನಂತಮೂರ್ತಿ ಕಥಾ ಸಾಹಿತ್ಯದ ಬಗ್ಗೆ ನಮ್ಮರಿಂದ ಅಂಥ ಕ್ರಿಟಿಕಲ್ ಲೇಖನ ಬಂದೇ ಇರಲಿಲ್ಲ. ಅಂದರೆ ಯಾವ ಕಾಲದಲ್ಲೂ ನಾನು ಕ್ರಿಟಿಕಲ್ಲಾಗೇ ಇರೋದು-ಎಲ್ಲರ ಬಗ್ಗೂ. ಕಾರಂತರ ಬಗ್ಗೆ ಬರೆದಿರೋ ನನ್ನ ಲೇಖನ ಇದೆಯಲ್ಲ, ಅದನ್ನು ಸುಮ್ನೆ ನೋಡಿ, ಅದರ ಎಲ್ಲಾ ನೆಲೆಗಳ ಜೊತೆಯಲ್ಲಿ ಸೆಣೆಸಿದೀನಿ ನಾನು. ನಾನು ಮೊತ್ತಮೊದಲು ಬರೆದ ವಿಮರ್ಶೆಯ ಲೇಖನ ಮಾಸ್ತಿ ಬಗ್ಗೇ ಆಗಿತ್ತು. ಅದು ಪ್ರಿಂಟ್ ಆಗಲಿಲ್ಲ. ಕಾರಣಾಂತರದಿಂದ ಅದೂ ಕ್ರಿಟಿಕಲ್ ಆಗಿಯೇ ಇತ್ತು. ಕುವೆಂಪು ಬಗ್ಗೆ ನಾನು ಬರೆದಿದ್ದು ಮಾತ್ರ ಪ್ರಾಕ್ಟಿಕಲ್ ಕ್ರಿಟಿಸಿಸಂ ನೆಲೆದಾಗಿತ್ತು. ಲೆಕ್ಕದಲ್ಲಿ ಅವರ ಬಗ್ಗೆ ಸರಿಯಾದ ಅಸೆಸ್‌ಮೆಂಟ್ ಮಾಡೋ ಸಮಗ್ರ ಲೇಖನ ಆಗಿಲ್ಲ. ಅಡಿಗರ ಬಗ್ಗೆನೂ ಅದೇ ಕಾರಣಕ್ಕೇ ನಾನು ಕಾದದ್ದು. ಮಾಸ್ತಿ ಬಗ್ಗೆ ಕಾರಂತರ ಬಗ್ಗೆ ಮಾತ್ರ ಲೇಖನ ಬರೆದಿರೋದು. ಬೇಂದ್ರೆ ಬಗ್ಗೆಯೂ ಇನ್ನೂ ಗಟ್ಟಿಯಾದ ಲೇಖನ ಬರೆದಿಲ್ಲ.

ಸಂ: ಅಲ್ಲ ಸಾರ್, ಅಗತ್ಯಕ್ಕಿಂತ ಹೆಚ್ಚು ಕ್ರಿಟಿಕಲ್ಲಾದ್ರೆ ಲೇಖಕರ ಚಾರಿತ್ರಿಕ ಮಹತ್ವ ಅರಿಯೋಕೆ ಬೇಕಾದ ಸಹಾನುಭೂತೀನೇ ಹೋಗಿಬಿಡಬಹುದು ಅಂತ ಅನುಮಾನ ನನಗೆ.

ನಾಯಕ: ಕ್ರಿಟಿಕಲ್ ಅಂದ್ರೆ ಇಷ್ಟೆ. ಈ ರೈಟರ್ಸ್ ಇದಾರಲ್ಲ ಎರಡು ನೆಲೆಗಳಲ್ಲಿ ನಾವು ಅವರ ಜೊತೇಲಿ ಒಡನಾಡತಾ ಇದೀವಿ. ಒಂದು ಹಿಸ್ಟಾರಿಕಲ್ ಕಾಂಟೆಕ್ಸ್ಟನಲ್ಲಿ ಅವರ ಸಾಧನೆ ಸಾಧಾರಣ ಅಲ್ಲ. ಆದರೆ ನಾವು ಈಗ ದೂರ ಬಂದಿದ್ದೇವೆ. ಕಾಲದ ಅಂತರ ಇದೆ. ಈ ಅಂತರದಲ್ಲಿ ನಾನೊಬ್ಬನೇ ಅಲ್ಲ ಬೆಳೆದಿರೋದು, ಎಲ್ಲದರ ಫಲ ನನಗೂ ಸಿಕ್ಕಿದೆ. ಈ ದೂರದಲ್ಲಿ ನಾನು ನಿಂತು ನೋಡತಾ ಇರುವಾಗ ನನಗೆ, ಅನೇಕ ಮಿತಿಗಳು ಕಾಣಿಸುತ್ತವೆ. ಗಾಂಧಿ ಅಂಬೇಡ್ಕರ್ ಲೋಹಿಯಾ ಇವರ ಬಗ್ಗೆ ಒಂದು ಕಾಲದಲ್ಲಿ ಯಾವ ತರಹ ಫ್ಯಾಸಿನೇಟ್ ಆಗಿದ್ದೆವು. ಈಗ ಆ ಫ್ಯಾಸಿನೇಶನ್ ಇಲ್ಲ. ಅದರರ್ಥ ಅವರು ದೊಡ್ಡವರಲ್ಲ ಅಂತ ಅಲ್ಲ. ಮೊದಲು ಯಾವ ಭಾವುಕತೆ ಇತ್ತೋ ಅದು ಈಗ ಇಲ್ಲ, ಈಗ ಕ್ರಿಟಿಕಲ್ ಆಗಿ ನೋಡೋಕೆ ಸಾಧ್ಯವಾಗ್ತಾ ಇದೆ ಅಂತ ಅಷ್ಟೆ. ಆದ್ದರಿಂದ ಈ ಚರಿತ್ರೆ ಚಲಿಸಿರುವ ಸಂದರ್ಭದಲ್ಲಿ ಅದು ಪಡಕೊಳ್ತಾ ಇರುವ ಬೇರೆಬೇರೆ ಆಯಾಮ ಮತ್ತು ಸಂಕೀರ್ಣತೆಗಳು ಇವೆಯಲ್ಲ, ಅವುಗಳ ಎದುರುಗಡೆ ಇರೋ ಪ್ರಶ್ನೆಗಳಿಗೆ ಉತ್ತರಿಸಬಹುದಾದಷ್ಟು ಸೂಕ್ಷ್ಮ ಸಂವೇದನಶೀಲತೆ, ಆ ತಲೆಮಾರಿನ ದೊಡ್ಡ ಸಾಹಿತಿಗಳಲ್ಲೂ ಇದೆ ಅಂತ ನನಗೆ ಅನಿಸ್ತಾ ಇಲ್ಲ.

ಸಂ: ಈಗಿನ ತಲೆಮಾರಿನ ಲೇಖಕರಲ್ಲಿ ಬಹಳ ಸೂಕ್ಷ್ಮ ಸಂವೇದನೆ ಪ್ರಕಟಿಸ್ತಾ ಚೆನ್ನಾಗಿ ಬರೀತಿರುವ ಲೇಖಕರು ನಿಮ್ಮ ಗಮನದಲ್ಲಿ ಯಾರು?

